ಪಾಣಾಜೆ ಪಂಡಿತರ

# ಅಜ್ಜಿ ಮದ್ದು



ಆಯುರ್ವೇದ ಪ್ರಕಾಶನ
ಪಾಣಾಜೆ-574 259 ದ. ಕ.

ಪಾಣಾಜೆ ಪಂಡಿತರ

# ಅಜ್ಜಿ ಮದ್ದು

(ಶ್ರೀ [illegible] ಣಾಜೆ ಪಂಡಿತರ ಅನುಭೂತಯೋಗ ಸಂಗ್ರಹ)

ಆಯುರ್ವೇದ ಪ್ರಕಾಶನ

ಪಾಣಾಜೆ—574259 ದ. ಕ.

'AJJI MADDU' Kannada Book on Herbal Remedies Compiled By Late Pandith Shankaranarayana Bhat Panaje & Published By M/s Ayurveda Prakashana Panaje Puttur Da. Ka. PIN 574 259 Karnataka.

Printed by:

Sri Raghavendra Printers, UJIRE-574 240

Pages-250 Price- Rs. 30-00

ಮೊದಲ ಪ್ರಕಟಣೆ **1961**

ವಿಸ್ತೃತ ಎರಡನೇ ಆವೃತ್ತಿ **1988**

**ಬೆಲೆ ರೂ. 30-00**

"ಅಜ್ಜಿ ಮದ್ದು": ಪಾಣಾಜೆ ಪಂಡಿತರ ಅನುಭೂತಯೋಗ ಸಂಗ್ರಹ

ಪ್ರಕಾಶಕರು : ಆಯುರ್ವೇದ ಪ್ರಕಾಶನ ಪಾಣಾಜೆ-574259

ಮುದ್ರಕರು : ಶ್ರೀ ರಾಘವೇಂದ್ರ ಪ್ರಿಂಟರ್ಸ್, ಉಜಿರೆ-574240

# ಪ್ರಕಾಶಕರ ನುಡಿ

ಈ ಶತಮಾನದ ಪೂರ್ವಾರ್ಧದಲ್ಲಿ ತಮ್ಮ ಆಯುರ್ವೇದ ಜ್ಞಾನ ಮೂಲಿಕಾ ಸಂಶೋಧನೆ ಮತ್ತು ಚಿಕಿತ್ಸಾ ಸಾಮರ್ಥ್ಯಗಳಿಂದ ಕಾಸರಗೋಡೂ ಸೇರಿದ ದ. ಕ. ಜಿಲ್ಲೆ, ಕೊಡಗು ರಾಜ್ಯಗಳಲ್ಲಿ ಸುಪ್ರಸಿದ್ಧರಾಗಿದ್ದ 'ವೈದ್ಯ ಭಟ್ಟ'ರೆಂದೇ ಜನಪ್ರಿಯರಾದ ಪಾಣಾಜೆ ವೈದ್ಯ ಶಂಕರನಾರಾಯಣ ಭಟ್ಟರು (1879–1952) ಮಹತ್ವದ ಮೂಲಿಕೆಗಳನ್ನು ಆಸಕ್ತ ಜನರಿಗೆ ಪರಿಚಯಿಸಿ ಕೊಡುವ ಹೊಸ ಪರಂಪರೆಗೆ ಕಾರಣರಾದರು. ಅವರ ಸುಪುತ್ರ ಪಾಣಾಜೆ ಪಂಡಿತ ಶಂಕರನಾರಾಯಣ ಭಟ್ಟರು (1909–1971) ಎಡೆಬಿಡದೆ 20 ವರ್ಷಗಳ ಕಾಲ ಪತ್ರಿಕಾಮಾಧ್ಯಮ ಮೂಲಕ ಮೂಲಿಕಾ ವೈದ್ಯ ಪ್ರಚಾರಗೈದು ದಲ್ಲದೆ ಅಂಚೆಯ ಮೂಲಕ ಆರೋಗ್ಯದಾನ ನಡೆಸಿ ಸಾವಿರಾರು ರೋಗಿಗಳಿಗೆ ಪರಿಹಾರವೊದಗಿಸಿದವರು. (ಇವರ ಸಹೋದರರೂ ಹೆಸರಾಂತ ಆಯು ರ್ವೇದ ತಜ್ಞರೂ ಚಿಕಿತ್ಸಕರೂ ಆಗಿದ್ದ ಡಾ। ಪಿ. ಎಸ್. ಈಶ್ವರ ಭಟ್ಟರೂ (1913–1986) ವೈದ್ಯ ಪಿ. ಯಸ್. ಗಣಪತಿ ಭಟ್ಟರೂ (1927–1984) ಸಹ ಈಚೆಗೆ ದೈವಾಧೀನರಾದರು) ಅವರೀಗ ಇಲ್ಲದಿದ್ದರೂ ಮೂಲಿಕಾ ಚಿಕಿತ್ಸೆಯ ಅವರ ಪರಂಪರೆ ಅವರ ಶಿಷ್ಯರಿಂದಲೂ ಕುಟುಂಬ ಸದಸ್ಯರಿಂದಲೂ ಈಗಲೂ ಮುಂದುವರಿಯುತ್ತಿರುವುದು ಆಶಾದಾಯಕ.

ಪಂಡಿತ ಶಂಕರನಾರಾಯಣ ಭಟ್ಟರು ತಮ್ಮ ಹಿರಿಯರ ಆಶೀರ್ವಾದ ಮತ್ತು ಅನುಭವಾಮೃತದಿಂದ ಸ್ಥಾಪಿಸಿದ ಆಯುರ್ವೇದ ಪ್ರಕಾಶನ '61– '62ರ ಸಾಲಿನಲ್ಲಿ ಕೆಲವು ಪ್ರಕಟಣೆಗಳನ್ನು ಹೊರತಂದಿದ್ದರೂ ಮುಂದರಿಕೆ ಸಾಧ್ಯವಾಗಲಿಲ್ಲ. ಆದರೂ ಅವರ 'ಆರೋಗ್ಯದಾನ' ಲೇಖನಮಾಲೆ ಆ ಕಾಲದ ಪತ್ರಿಕೆಗಳಾದ 'ಸಂಯುಕ್ತ ಕರ್ನಾಟಕ' 'ಜನಪ್ರಗತಿ' 'ಚಿತ್ರಗುಪ್ತ' 'ವಿಚಾರವಾಣಿ' 'ಸಾರಥಿ' ಮೊದಲಾದುವುಗಳಲ್ಲಿ ಆಗಿಂದಾಗ ಹಾಗೂ 'ರಾಷ್ಟ್ರಬಂಧು'ವಿನಲ್ಲಿ ಪ್ರತಿವಾರ ಪ್ರಕಟವಾಗುತ್ತಿತ್ತು. ಪ್ರಕಾಶನವು ಈ ಹಿಂದೆ ಹೊರತಂದ ಪುಸ್ತಕಗಳು ಲಭ್ಯವಿಲ್ಲದ್ದರಿಂದಲೂ, ಗಿಡಮೂಲಿಕೆ ಗಳನ್ನು ಗುರುತಿಸಲು ನೆರವಾಗುವ 'ವನೌಷಧಿ ಪ್ರಭಾವ' ಹಾಗೂ ಅನೇಕ ಚಿಕಿತ್ಸಾ ಲೇಖನಗಳು ಪುಸ್ತಕ ರೂಪದಲ್ಲಿ ಹೊರಬಾರದಿರುವುದರಿಂದಲೂ ಅವೆಲ್ಲವನ್ನೂ ಕ್ರಮಾಗತವಾಗಿ ಪ್ರಕಟಿಸುವ ಉದ್ದೇಶವಿರಿಸಿಕೊಂಡು ಪ್ರಕಾ

ಶನವನ್ನು ಮರಳಿ ಪ್ರಾರಂಭಿಸಲಾಗಿದೆ. ಈ ಮೂಲಕ ಇನ್ನಷ್ಟು ಯಶಸ್ವೀ ಆಯುರ್ವೇದ ವೈದ್ಯರುಗಳ ಸ್ವಾನುಭವಗಳನ್ನು ಸಜ್ಜನರ ಮುಂದಿಟ್ಟು 'ರೋಗಾನುತ್ಪಾದನೀಯ' ಸಾಧನೆಗೆ ಶ್ರಮಿಸುವ ಗುರಿ.

ಪ್ರಕೃತ 'ಅಜ್ಜಿಮದ್ದು'ವಿನಲ್ಲಿ ಈ ಹಿಂದೆ ಕೊಟ್ಟಂಥ ಚಿಕಿತ್ಸಾ ವಿಭಾಗ ವಷ್ಟೇ ಅಲ್ಲದೆ ಔಷಧ ತಯಾರಿ, ದ್ರವ್ಯಶುದ್ಧಿ, ಪಥ್ಯವಿಧಾನಾದಿಗಳು ಹಾಗೂ ಸಸ್ಯಾದಿ ಮೂಲಿಕೆಗಳ ವಿವಿಧ ಭಾಷಾನಾಮಗಳೇ (ಲ್ಯಾಟಿನ್ ಸಹಿತ) ಮೊದಲಾಗಿ ಹಲವು ಉಪಯುಕ್ತ ಮಾಹಿತಿಗಳನ್ನು ಸೇರಿಸಲಾಗಿದೆ.

'ಆಯುರ್ವೇದ ಪ್ರಕಾಶನ'ವು 'ಅಜ್ಜಿಮದ್ದು' ಮೊದಲಾದ ಪ್ರಕಟಣೆಗಳನ್ನು ಪುನರಾರಂಭಿಸುವ ವಿಚಾರ ತಿಳಿದು ಹರ್ಷಿತರಾಗಿ ಈಗಾಗಲೇ ಬಹಳಷ್ಟು ಜನ ಪತ್ರಮುಖೇನ ವ ಸ್ವತಃ ಪ್ರೋತ್ಸಾಹಿಸಿದ್ದಾರೆ, ಬೆಂಬಲದ ಭರವಸೆ ನೀಡಿದ್ದಾರೆ. ಅನೇಕರು ಪ್ರಕಟಣಪೂರ್ವ ಬೆಲೆತೆತ್ತು ನೊಂದಾಯಿಸಿದ್ದಾರೆ. ಇದರಿಂದ ಪ್ರಕಾಶನದ ಕಾರ್ಯ ಜನತೆಗೆ ಅಗತ್ಯವಾದ್ದೆಂಬ ನಮ್ಮ ಭಾವನೆ ಬಲ ಪಡೆದಿದೆ. ಈ ಎಲ್ಲಾ ಸ್ನೇಹಿತರಿಗೆ ಆಯುರ್ವೇದಾಭಿಮಾನಿಗಳಿಗೆ ಮತ್ತು ವಿವಿಧ ರೀತಿಯ ಉಪಯುಕ್ತ ಸಲಹೆ ಸೂಚನೆ ಸಹಕಾರಗಳನ್ನು ನೀಡಿದ ನಮ್ಮ ಅನೇಕ ಗೆಳೆಯರಿಗೆ ಹಿರಿಯರಿಗೆ ನಾವು ಚಿರಋಣಿಗಳು. ಪುಸ್ತಕವನ್ನು ಸಕಾಲದಲ್ಲಿ ಮುದ್ರಿಸಿ ನೆರವಾದ ಶ್ರೀ ರಾಘವೇಂದ್ರ ಮುದ್ರಣಾಲಯದ ಶ್ರೀ ಕೆ. ಸಂಜೀವರವರಿಗೆ ನಮ್ಮ ಅಭಿನಂದನೆಗಳು.

**ವಿಜ್ಞಾಪನೆ:**

'ಅಜ್ಜಿಮದ್ದು' ಕೊಂಡು ಓದುವ ಸರ್ವ ಸಜ್ಜನರಲ್ಲೂ ವಿನಂತಿಯೊಂದಿದೆ. ಈ ಪುಸ್ತಕದ ಉಪಯುಕ್ತತೆಯನ್ನು ಇನ್ನಷ್ಟು ಹೆಚ್ಚಿಸಬಹುದಾದ ಸಲಹೆ ಸೂಚನೆಗಳನ್ನು ನಾವು ಆಹ್ವಾನಿಸುತ್ತೇವೆ. ದಯವಿಟ್ಟು ಈ ಕೃತಿಯ ಕುರಿತಾಗಿ, ಮೂಲಿಕಾವೈದ್ಯ ಪ್ರಸಾರದ ಕುರಿತಾಗಿ ತಮ್ಮ ಅನಿಸಿಕೆ, ಅಭಿಪ್ರಾಯ, ಸೂಚನೆ ಯಾವುದೇ ಇರಲಿ ನಮಗೆ ಬರೆದು ತಿಳಿಸಿ. ಮೂಲಿಕಾ ವೈದ್ಯ ಪ್ರಸಾರಕ್ಕೆ ಸದಾ ನೆರವಾಗಿ.

ಇತಿ ಶಮ್,

**ಶಂ ಪಾ ದೈತೋಟ**

1-11-88. ಪ್ರಕಾಶನದ ಪರವಾಗಿ.

# ಪ್ರಥಮದ ಪ್ರಸ್ತಾವನೆಯಿಂದ

ಪೂರ್ವಕಾಲದಲ್ಲಿ ನಮ್ಮ ಹಿರಿಯರೂ, ತ್ರಿಕಾಲಜ್ಞಾನಿಗಳೂ ಆದ ಮಹರ್ಷಿಗಳು ಕಂದ ಮೂಲ ಫಲಾದಿಗಳನ್ನೇ ಆಹಾರವಾಗಿ ಉಪಯೋಗಿಸುತ್ತಿದ್ದರು. ತಾವು ಸೇವಿಸಿದ ಆಹಾರದ ರಸ, ವೀರ್ಯ ವಿಪಾಕಗಳನ್ನು ನಿತ್ಯಾನುಭವದಲ್ಲಿ ತಿಳಿದು ವಿಮರ್ಶಿಸಿ ಸಾತ್ಮ್ಯ ಅಸಾತ್ಮ್ಯಗಳನ್ನು ನಿಶ್ಚಯಿಸಿ ಆರೋಗ್ಯಕರ ಜೀವನಕ್ಕೆ ಅತ್ಯಾವಶ್ಯಕಗಳಾದ ರಸಾದಿ ಧಾತುಗಳ ಪೂರೈಕೆಯಲ್ಲಿ ವನಸ್ಪತಿಗಳಿಗಿರುವ ಮಹತ್ವವನ್ನು ಗಣನೆಗೆ ತಂದು ಆರೋಗ್ಯ ದೃಢಕಾಯರಾಗಿ ಬಾಳುವ ರಹಸ್ಯವಾದ ಮೂಲಿಕಾ ವೈದ್ಯವನ್ನು ಲೋಕ ಕಲ್ಯಾಣಕ್ಕಾಗಿ ಸಾರಿದರು.

ಅಗ್ನಿಮೂಲಂ ಕೃಷಸ್ಥೂಲಂ ಶುಕ್ಲಮೂಲಂತು ಜೀವಿತಂ ।
ತಸ್ಮಾತ್ ಸರ್ವ ಪ್ರಯತ್ನೇನ ಶುಕ್ಲ ಮಗ್ನಿಂಚ ರಕ್ಷಯೇತ್ ॥

ಜೀರ್ಣ ಶಕ್ತಿಯೇ ದೇಹದಾರ್ಢ್ಯ ಮತ್ತು ಕ್ಷೀಣಗಳಿಗೆ ಮೂಲ ಸುಖಜೀವನಕ್ಕೆ ಶುಕ್ಲವೇ ಮೂಲ, ಆದ್ದರಿಂದ ಜಠರಾಗ್ನಿಯನ್ನೂ ಧಾತುವನ್ನೂ ರಕ್ಷಿಸತಕ್ಕದ್ದು.

ವಾಗ್ಭಟಾಚಾರ್ಯರು ಅಷ್ಟಾಂಗ ಹೃದಯದಲ್ಲಿ ಸಂದರ್ಭಾನುಸಾರ ಹೇಳಿದ ಈ ಶ್ಲೋಕದಲ್ಲಿ ಆರೋಗ್ಯ ರಕ್ಷಣೆಯ ಸಾರವೇ ಅಡಗಿದೆ. ರೋಗ ನಿವಾರಕ ಗುಣವು ನಮ್ಮ ದೇಹದ ಬೆಳವಣಿಗೆಯಲ್ಲಿ ಸ್ವತಹಾ ಫಲಿಸಬೇಕಾದ ಸ್ವಾಭಾವಿಕ ಶಕ್ತಿ.

ಹಿಂದೆ ಮನೆ ಅಜ್ಜಮ್ಮನು ಮನೆಮುಂದಿಗೆ ಬರುವ ರೋಗ ಲಕ್ಷಣ ವಿದಾನಗಳಿಂದ ಬರಬಹುದಾದ ರೋಗಗಳನ್ನು ಸಕಾಲದಲ್ಲಿ ಊಹಿಸಿ ಆಹಾರ ವಿಹಾರಗಳಲ್ಲಿ ನಿಯಮ ವಿಧಿಸಿ ಅವಶ್ಯಬಿದ್ದಾಗ ಸ್ವಾನುಭವದ ಮೂಲಿಕಾ ವೈದ್ಯ ಪ್ರಯೋಗಗಳಿಂದ ರೋಗ ಮೂಲವನ್ನು ಸುಲಭವಾಗಿ ಪರಿಹರಿಸಿ ಕುಟುಂಬದ ಆರೋಗ್ಯವನ್ನು ಕಾಪಾಡುತ್ತಿದ್ದಳು. ಆಗ ಯಾವ ಬಿರುದನ್ನೂ ಪಡೆಯದಿದ್ದರೂ ಆಕೆಯೇ ಕುಟುಂಬದ ಡಾಕ್ಟರಳಾಗಿದ್ದಳು.

ಯಾವ ರೋಗವಾದರೂ ರಾತ್ರಿ ಬೆಳಗಾಗುವುದರೊಳಗೆ ಬಂದು ಸೇರುವುದಿಲ್ಲ. ಆರಂಭದ ಅಲಕ್ಷ್ಯದಿಂದಲೇ ಮುಂದೆ ಮಹಾ ರೋಗವಾಗಿ ಪರಿಣಮಿಸುವುದು. ಇದರ ರಹಸ್ಯವನ್ನು ಅಜ್ಜಮ್ಮನು ಅರಿತಿರುವಷ್ಟು ವಿಶದವಾಗಿ ಬೇರಾವ ಪಂಡಿತರೂ ತಿಳಿಯಲು ಅವಕಾಶವಿಲ್ಲ. ಇದನ್ನೇ

ಆಯುರ್ವೇದ ಗ್ರಂಥವಾದ "ಭಾವ ಪ್ರಕಾಶ" ದಲ್ಲಿ ಭಾವ ಮಿಶ್ರರು ಹೇಳಿರುತ್ತಾರೆ.

ಅಥಬಾಲೇ ಸಮುತ್ಪನ್ನೇ ವಿದಧೀತ ವಿಧಿಂತತಃ ।
ಯಥೈವ ಕುಲ ವೃದ್ಧಾಸ್ತ್ರೀ ವ್ಯವಹಾರ ಪರಂಪರಾ ॥

ಅನುಭವವೆಲ್ಲಾ ಶಾಸ್ತ್ರವಾಗುವುದಿಲ್ಲ ನಿಜ ಆದರೆ ಅನುಭವವೇ ಶಾಸ್ತ್ರವಾಗಿದೆ ಎಂಬುದು ಪೂರ್ಣ ಸತ್ಯ. ಈ ರೀತಿ ವೃದ್ಧಮಾತೆಯರ ಅನುಭವವು ಶಾಸ್ತ್ರದ ಒಳಗೂ ಹೊರಗೂ ವ್ಯಾಪಿಸಿಕೊಂಡಿದೆ.

ನವನಾಗರಿಕತೆಯ ಈ ಕಾಲದಲ್ಲಿ ಅಜ್ಜಮ್ಮನ ಮಾತು ಅಲಕ್ಷ್ಯವಾಗುತ್ತಾ ಬಂದಂತೆ ಮನೆ ಮನೆಗಳಲ್ಲಿ ಬೇನೆಗಳು ಲಕ್ಷವಾಗಿ ಬೆಳೆಯ ತೊಡಗಿವೆ. 'ಅಜ್ಜಿಮದ್ದು' ಎಂದು ಹಿಂದಿನದನ್ನು ಹೊಗಳುವುದಲ್ಲ. ಈ ವಿಜ್ಞಾನ ಯುಗದಲ್ಲಿ ಕೂಡ ಡಾಕ್ಟರರ ಮುಖ ಕಾಣದ ಎಷ್ಟೋ ಮನೆಗಳಲ್ಲಿ ಅಜ್ಜಮ್ಮನೇ ಕುಟುಂಬದ ಹಿತ ಚಿಂತಕಗಳಾಗಿರುವುದರಿಂದ ಆಧುನಿಕರಿಂದ ಆರೋಗ್ಯಕಾಯರಾಗಿ ಸುಖ ಜೀವನವನ್ನು ನಡೆಸುವವರನ್ನು ಕಾಣಬಹುದು. ಅನುಭವದಲ್ಲಿ ಡಾಕ್ಟರರಿಗೂ ಸವಾಲು ಮಾಡಬಲ್ಲ ಅಜ್ಜಮ್ಮಂದಿರು ಕೆಲವರಾದರೂ ಇಂದು ಇರುವುದು ಜನತೆಯ ಭಾಗ್ಯ.

ಈ ಕೃತಿ ನನ್ನ ತೀರ್ಥರೂಪರಾದ ವೈದ್ಯ ಶಂಕರನಾರಾಯಣ ಭಟ್ಟರ ಪರಿಶ್ರಮದ ಫಲ. ಅವರ ಕಾಲದಲ್ಲೇ ರೂಪುಗೊಂಡು ಮಹಾಜನರ ಮುಂದೆ ಬರಬೇಕಾಗಿತ್ತು. ಆದರೆ ಈ ಮಹತ್ವಾಕಾಂಕ್ಷೆ ಗರ್ಭದಲ್ಲಡಗಿರುವಾಗಲೇ (1952ರಲ್ಲಿ) ಅವರು ಕೀರ್ತಿ ಶೇಷರಾದರು. ಹಿರಿಯರ ಆಶೀರ್ವಾದದಂತೆ ಕರ್ತವ್ಯ ಭಾವನೆಯಿಂದ ಮಾಡಿರುವ ಸೇವೆಯಿದನ್ನು ಮಹಾಜನರ ಮುಂದಿಡಲು ಸಂತಸಪಡುತ್ತೇವೆ. ಈ ಸಂದರ್ಭದಲ್ಲಿ ಗೃಹ ಪರಂಪರಾಗತ ಉಪದೇಶವಿತ್ತು ಆಶೀರ್ವದಿಸಿದ ಮನೆ ಅಜ್ಜಮ್ಮಂದಿರಿಗೂ ಮಹನೀಯರಿಗೂ ಹಿರಿಯರ ಗ್ರಂಥಗಳನ್ನಿತ್ತು ಸಹಕರಿಸಿದ ಉದಾರ ಚರಿತರಿಗೂ ಅನುಭೂತ ಯೋಗ ರಹಸ್ಯ ತಿಳಿಸಿದ ಹಳ್ಳಿಜನರಿಗೂ ಕೆಲವು ಅನುಭವಗಳಿಗಾಗಿ ಓದಿದ ಬೇರೆ ಬೇರೆ ಭಾಷೆಯ ಗ್ರಂಥಗಳ ಕರ್ತರಿಗೂ ನಾವು ಋಣಿಗಳು.

ದೈತೋಟ ಇತಿ,
೧೫—೭—೬೧ ಪ. ಶಂಕರನಾರಾಯಣ ಭಟ್ಟ

## ಪರಿವಿಡಿ

## ಎರಡನೇ ಭಾಗದಲ್ಲಿ

# ಕಣ್ಣಿನ ಆರೋಗ್ಯ

## ಎಲ್ಲಾ ವಿಧದ ಸಾಮಾನ್ಯ ಕಣ್ಣು ರೋಗಗಳಿಗೆ

1. ತ್ರಿಫಲೇ (ಶಾಂತಿ, ಅಣಲೆ, ನೆಲ್ಲಿ) ಸಿಪ್ಪೆ ಮತ್ತು ಅಮೃತ ಬಳ್ಳಿ ಅಷ್ಟಮಾಂಶ ಕಷಾಯ ಮಾಡಿ ಆರಿಸಿ ತಣಿಸಿ ಒಂದು ಚಟಿಕೆ ಹಿಪ್ಪಲಿ ಚೂರ್ಣವನ್ನೂ ಒಂದು ಚಮಚೆ ಜೇನನ್ನೂ ಸೇರಿಸಿ (ಮೇಲ್ಪುಡಿ ಹಾಕಿ) ಸೇವಿಸುವುದು. ಆರು ಅಥವಾ ಹನ್ನೆರಡು ದಿನ.

2. ಮೈಲುತುತ್ತ, ಅಣಲೆಕಾಯಿ, ಕರಿಮೆಣಸು, ಹಿಪ್ಪಲಿ, ಬಾಗೆ ಬೀಜ, ಮತ್ತು ಇಂದುಪ್ಪು ಇವುಗಳನ್ನು ನಿಂಬೆಹುಳಿ ರಸದಲ್ಲಿ ಅರೆದು ಕಲಾಯಿಯಿಲ್ಲದ ತಾಮ್ರದ ಪಾತ್ರೆಯಲ್ಲಿ ಜಾಳಿಸಿ ಕಣ್ಣಿನ ಸುತ್ತಲೂ ಹಚ್ಚುವುದು.

3. ಹಣ್ಣಾದ ಕರಿಮೆಣಸಿನ ಸಿಪ್ಪೆ ತೆಗೆದ ಒಣಕಾಳನ್ನು ಹಾಲಿನಲ್ಲಿ ಹಾಕಿ ಹಾಲು ಪೂರ್ಣ ಇಂಗುವಂತೆ ಬೇಯಿಸಿ ನೆರಳಿನಲ್ಲಿ ಒಣಗಿಸುವುದು. ಈ ರೀತಿ ಹದಿನಾಲ್ಕು ಬಾರಿ ಬೇಯಿಸಿ ಒಣಗಿಸಿ ಭದ್ರವಾಗಿ ಇರಿಸಿಕೊಂಡು ಮೊಲೆಹಾಲಿನಲ್ಲಿ ತೇದು ಕಣ್ಣಿಗೆ ಹಾಕಿದರೆ ಸಾಮಾನ್ಯ ನೇತ್ರರೋಗವು ವಾಸಿಯಾಗುವುದು.

ಚನ್ನಾಗಿ ನೀರು ಸೇರಿಸಿ ತಯಾರಿಸಿದ ಸುಣ್ಣದ ತಿಳಿನೀರಿನಲ್ಲಿ ತೇದು ಕಣ್ಣಿಗೆ ಹಾಕಿದರೆ ಕಣ್ಣಿನ ಕಲೆ, ಕರುಣ, ಪಡಲೆ, ಎಲ್ಲಾ ಕರಗಿ ಗುಣವಾಗುವುದು.

4. ಬಂಗುಡಿಗಡ್ಡೆ 2ಪಲ ಜ್ಯೇಷ್ಠ ಮಧು 4ಪಲ ಅಣಲೆಕಾಯಿ 1ಪಲ ನೆಲ್ಲಿಕಾಯಿ 3ಪಲ ಶಾಂತಿಕಾಯಿ 2ಪಲ ಇವುಗಳನ್ನು ಸೇರಿಸಿ ವಸ್ತ್ರಗಾಳಿತ ಪುಡಿಮಾಡಿ ಕಾಲು ಕಾಲು ತೊಲೆಯಂತೆ ತುಪ್ಪದಲ್ಲಿ ಕಲಸಿ ಎರಡೂ ಹೊತ್ತು ಕೆಲವು ದಿನ ತಿನ್ನಬೇಕು.

5, ತ್ರಿಫಲೆಯನ್ನೂ ಖದಿರದ ತಿರುಳನ್ನೂ ಅಷ್ಟಮಾಂಶ ಕಷಾಯ ಮಾಡಿ ತುಪ್ಪ ಮೇಲ್ಪುಡಿ ಹಾಕಿ ಮೂರು ಯಾ ಆರು ದಿನ ಸೇವಿಸಿದರೆ ಎಲ್ಲಾ ತರದ ನೇತ್ರ ರೋಗಗಳೂ ಗುಣವಾಗುವವು.

6. ತುಳಸಿ ಎಲೆಯನ್ನು ಜೇನಿನಲ್ಲಿ ಅರೆದು ಅಂಜನ ಹಾಕುವುದು.

7. ತಾಳಿ ಮರದ ಕೈಯನ್ನು (ಕೊತ್ತಳಿಗೆ) ಬಾಡಿಸಿ ತೆಗೆದ ರಸವನ್ನು ಕಣ್ಣಿಗೆ ಹಾಕುವುದು. ಅದೇ ರಸದಿಂದ ಕಣ್ಣು ತೊಳೆಯುವುದು.

8. ಕೊರುಂಗು ಮರದ ಬೀಜ, ಸಣ್ಣ ಬದನೆಯ ಬೀಜ, ವಿಶಾಲರಿ. ಶುಂಠಿ, ಮೆಣಸು. ಹಿಪ್ಪಲಿ, ಕಂಕುಷ್ಠ ಇವುಗಳನ್ನು ನೀರಿನಲ್ಲಿ ಅರೆದು ಮಾತ್ರೆ ಮಾಡಿ ಜೇನಿನಲ್ಲಿ ತೇದು ಕಣ್ಣಿಗೆ ಹಾಕುವುದು.

9. ಬೆಳುಸಳ್ಳಿ (ಅಕ್ಸಳ್ಳಿ) ಚಿಗುರನ್ನು ಸ್ವಲ್ಪ ಜೀರಿಗೆ ಸೇರಿಸಿ ಅರೆದು ರಸವನ್ನು ಕಣ್ಣಿಗೆ ಹಾಕಿದರೆ ಮೂರು ದಿನಗಳಲ್ಲಿ ಕಣ್ಣಿನಲ್ಲಿ ನೀರು ಹೀಚು, (ಹಿಕ್ಕು ಪುಳ್ಳು) ಸುರಿಯುವುದು ಗುಣವಾಗುವುದು.

**ಕಣ್ಣಿನಲ್ಲಿ ಸದಾ ನೀರು ಸುರಿಯುವುದಿದ್ದರೆ:**—ಬಿಳಿ ತೆಗ್ಗಾಮೆ ಬೇರನ್ನು ಹಾಲಿನಲ್ಲಿ ಬೇಯಿಸಿ ಹಾಲು ಪೂರ್ಣವಾಗಿ ಆರುವ ವರೆಗೆ ಬತ್ತಿಸಿ ಬಿಸಿ ನೀರಿನಲ್ಲಿ ತೊಳೆದು ನೆರಳಿನಲ್ಲಿ ಒಣಗಿಸುವುದು. ಹೀಗೆ ಮೂರು ಬಾರಿ ಬೇಯಿಸಿ ಒಣಗಿಸಿದ ಬೇರನ್ನು ಜೇನಿನಲ್ಲಿ ತೇದು ಕಣ್ಣಿನೊಳಕ್ಕೆ ಹಾಕುವುದು.(ಅಂಜನ).

ಆಕಳ ತುಪ್ಪದಲ್ಲಿ ತೇದು ಕಣ್ಣಿಗೆ ಹಾಕಿದರೆ ಕಣ್ಣು ಹೂವು ಗುಣವಾಗುವುದು.

ಗರಗದ ರಸದಲ್ಲಿ ತೇದು ಕಣ್ಣಿಗೆ ಹಾಕಿದರೆ ಕಣ್ಣಿನ ಪಡಲೆ ಗುಣವಾಗುವುದು.

ಸಮುದ್ರ ಫಲವನ್ನು ಎಳ್ಳೆಣ್ಣೆಯಲ್ಲಿ ಯಾ ತುಪ್ಪದಲ್ಲಿ ತೇದು ಕಣ್ಣಿನೊಳಗೆ ಹಾಕುವುದು.

ಕಣ್ಣನ್ನು ತೊಳೆದು ಬೆಳ್ಳಟ್ಟಿ ಗಿಡದ ಎಳೆಯ ಕೋಲಿನ ನಾರನ್ನು ಜೀರಿಗೆ ಸೇರಿಸಿ ಜಜ್ಜಿ ಬಟ್ಟೆಯಲ್ಲಿ ಹಾಕಿ ರಸವನ್ನು ಕಣ್ಣಿಗೆ ಹಿಂಡುವುದು.

ಕಹಿಬೇವಿನ ಬೀಜದ ಬೊಂಡನ್ನು (ಪಪ್ಪು) ಕಲಗಚ್ಚಿನಲ್ಲಿ ಅರೆದು ಕಿವಿಗೆ ಎರೆಯುವುದರಿಂದ ಕಣ್ಣುನೋವು ಗುಣವಾಗುವುದು.

ಕಹಿ ಸೋರೆ ಕಾಯಿಯ ಬೀಜವನ್ನು ಮೊಲೆ ಹಾಲಿನಲ್ಲಿ ತೇದು ಕಣ್ಣಿಗೆ ಹಚ್ಚುವುದು.

ನೇರಳೆ ಕೆತ್ತೆಯನ್ನು ಮದ್ದಿನ ಗಂಜಿಮಾಡಿ ಆಯಾ ದಿನದ ದನದ ಮಜ್ಜಿಗೆ ಹಾಕಿ ಚಪ್ಪೆ ಗಂಜಿಯನ್ನುಣ್ಣುವುದು. (ಒಂದು ವಾರ).

ಕಯುಪಿನ ಎಲೆಯ ಸ್ವರಸಕ್ಕೆ ಆಕಳ ಬೆಣ್ಣೆಯನ್ನು ಸಮಾಂಶ ಸೇರಿಸಿ ಚೆನ್ನಾಗಿ ಒಂದಾಗುವಂತೆ ಜಾಳಿಸಿ ಕಣ್ಣಿಗೆ ಹಾಕಿದರೆ ಕಣ್ಣಿನ ವ್ರಣ, ಕೀವು, ನೋವು, ಕೆಂಗಣ್ಣು, ಪೆಟ್ಟು, ಗಾಯ ಇತ್ಯಾದಿ ಗುಣವಾಗುವುದು.

**ಕಣ್ಣಿನ ಹೂವಿಗೆ:—**

ನುಗ್ಗೆ ಸೊಪ್ಪಿನ ರಸಕ್ಕೆ ಸಮಾಂಶ ಮೊಜಂಟಿ ಜೇನು ಸೇರಿಸಿ ಕಲಾಯಿ ಯಿಲ್ಲದ ತಾಮ್ರದ ಸ್ವಚ್ಛವಾದ ತಟ್ಟೆಯಲ್ಲಿ ಹಾಕಿ ಚೆನ್ನಾಗಿ ಜಾಳಿಸಿ ಕಣ್ಣಿಗೆ ಅಂಜನ ಹಾಕಿದರೆ ಹೂ ಪೆಟ್ಟು ಕಲೆಗಳು ಗುಣವಾಗುವುವು.

ಉತ್ತುತ್ತೆಯ ಬೀಜವನ್ನು (ಖರ್ಜೂರ) ಜೇನಿನಲ್ಲಿ ತೇದು ಕಣ್ಣಿನ ಹೂವಿಗೆ ಹಾಕಿದರೆ ಗುಣವಾಗುವುದು.

ಕಂಚಿನ ಬಟ್ಟಲಿನಲ್ಲಿ ಗೋರೋಚನದ ಹುಡಿಯನ್ನು ನಿಂಬೆ ರಸ ಹಿಂಡಿ ಕವಡೆ ಹಾಕಿ ಬಿಸಿಲಿನಲ್ಲಿರಿಸಿ ಕರಗಿಸುವುದು. ಅದನ್ನು ತಾಮ್ರದ ಪಾತ್ರೆ ಯಲ್ಲಿ ಹಾಕಿ ಚೆನ್ನಾಗಿ ಮರ್ದಿಸಿ ಕಾಡಿಗೆಯಂತೆ ಮಾಡಿ ದಿನವೂ ಅಂಜನ ಹಾಕುತಿದ್ದರೆ ಕೆಲವೇ ದಿನದಲ್ಲಿ ಹೂ ಕರಗಿ ಹೋಗುವುದು.

ಸಮುದ್ರ ಫಲವನ್ನು ಜೇನಿನಲ್ಲಿ ತೇದು ಕಣ್ಣಿನೊಳಕ್ಕೆ ಹಾಕುವುದು.

ಹಾಲಿನಲ್ಲೆ ಬೇಯಿಸಿ ಒಣಗಿಸಿದ ಬಿಳಿತೆಗ್ಗಾಮ ಬೇರನ್ನು ಅರಸಿನಗಡ್ಡೆ ಅಣಲೆ ಕಾಯಿಗಳೊಂದಿಗೆ ಯಾ ಜಿಂಕೆಯ ಕೋಡಿನೊಂದಿಗೆ ಮೊಲೆ ಹಾಲಿ ನಲ್ಲಿ ತೇದು ಕಣ್ಣಿಗೆ ಹಾಕುವುದು.

ದಾರಳೆ ಸೊಪ್ಪಿನ ರಸದಲ್ಲಿ ಸಮುದ್ರಮಾಪಲ ಕಾಯಿಯನ್ನು ತೇದು ಕಣ್ಣಿನ ಹೂವಿಗೆ ಹಾಕುವುದು.

**ಕಣ್ಣಿನ ಪಡಲೆಗೆ** (ಕುರುಣೆಗೆ): ಮೈಲುತುತ್ತು. ಜ್ಯೇಷ್ಠಮಧು, ಕರಿ ಮೆಣಸು, ಶಾಂತಿಕಾಯಿ, ನೆಲ್ಲಿಕಾಯಿ ಇವುಗಳನ್ನು ಸಮಾಂಶ ತೆಗೆದು ಕೊಂಡು ನೀರಿನಲ್ಲಿ ನುಣ್ಣಗೆ ಅರೆದು ಕಣ್ಣಿಗೆ ಅಂಜನ ಹಾಕುವುದು.

ಶಂಖದ ಮುರುಡು(ಮೂತಿ), ಶುಂಠಿ, ಕರಿಮೆಣಸು, ಬಿಳಿ ಗುರುಗುಂಜಿ ಇವುಗಳನ್ನು ಮೊಲೆ ಹಾಲಿನಲ್ಲಿ ತೇದು ಕಣ್ಣಿಗೆ ಹಾಕಿದರೆ ಪಡಲೆ ಕತ್ತರಿಸಿ ಹೋಗುವುದು.

ಬದನೆ ಬೇರು, ಸಣ್ಣ ಬದನೆ ಬೇರು, ಚೆಂಬಿನ ಹುಡಿ ಅತಿಮಧುರ (ಎರಟಿ ಮಧುರ–ಜ್ಯೇಷ್ಠಮಧು) ಹಿಪ್ಪಲಿ ಇವುಗಳನ್ನು ಸಮಾಂಶ ತೆಗೆದು ಆಡಿನ ಹಾಲಿನಲ್ಲರೆದು ಮಾತ್ರೆ ಮಾಡಿಜೇನಿನಲ್ಲಿ ತೇದು ಕಣ್ಣಿಗೆ ಹಚ್ಚಿದರೆ ಶಂಖ ಪಡಲೆ ತಿಮಿರಪಡಲೆ ಇತ್ಯಾದಿಗಳೆಲ್ಲ ಗುಣವಾಗುವುವು.

ಎಳೆಯ ಪಲ್ಲೆಕಾಯನ್ನು ಜೀರಿಗೆ ಸೇರಿಸಿ ಅರೆದು ಬಟ್ಟೆಯಲ್ಲಿ ಹಾಕಿ ಪ್ರಾತಃಕಾಲ ಅದರ ರಸವನ್ನು ಕಣ್ಣಿಗೆ ಹಿಂಡುವುದು.

ಬಿಳಿ ಚೀಮುಳ್ಳಿನ ಚಿಗುರು ಇಂಗಳೀಕದ ಅಣಲೆಕಾಯಿ ಸಿಪ್ಪೆ ಕಬ್ಬಿನ ಮೋಳು ಇವುಗಳನ್ನು ಸಮಾಂಶ ತೆಗೆದು ಜಜ್ಜಿ ಬಟ್ಟೆಯಲ್ಲಿ ಹಾಕಿ ಪ್ರಾತಃಕಾಲ ರಸವನ್ನು ಕಣ್ಣಿಗೆ ಹಿಂಡುವುದು.

ನೆಲ್ಲಿ ಚಿಗುರನ್ನು ಜೀರಿಗೆ ಸೇರಿಸಿ ಜಜ್ಜಿ ಮೊದಲಿನಂತೆ ರಸ ಹಿಂಡುವುದು.

ನೆಕ್ಕರಿಕನ ಚಿಗುರಿನ ರಸ ಪುಳಿಚಪ್ಪಿನ (ಹುಳಿಗೌರಿ ಗಿಡ) ರಸ ನಿಂಬೆ ಹುಳಿಯ ರಸ ಅಂಬಟೆಕೆತ್ತೆ ಮತ್ತು ಕಾರೆಯಂಬಟೆ ಕೆತ್ತೆಯ ರಸ ಗರಗದ ರಸ ನೀರುಳ್ಳಿಯ ರಸ ಇವುಗಳನ್ನು ಎರಡೆರಡು ತೊಲೆಯಂತೆ ಸೇರಿಸಿ ಕಲಾಯಿಯಿಲ್ಲದ ತಾಮ್ರದ ಪಾತ್ರೆಯಲ್ಲಿ ಹಾಕಿ ಅಕಳ ಹುಳಿಮಜ್ಜಿಗೆಯನ್ನು ಅರ್ಧ ತೊಲೆ ಸೇರಿಸಿ ದೊಡ್ಡ ಶಂಖದ ಮುಖದಿಂದ ಚೆನ್ನಾಗಿ ಮರ್ದಿಸಿ ಬಿಸಿಲಿನಲ್ಲಿರಿಸಿ (ಸೂರ್ಯಸ್ಪುಟ ಮಾಡಿ) ಕಾಡಿಗೆಯಂತಾಗುವ ವರೆಗೂ ಪ್ರತಿದಿನ ಹೀಗೆ ಬಿಸಿಲಿನಲ್ಲಿರಿಸಿ ತೆಗೆದು ಭದ್ರವಾಗಿರಿಸಿಕೊಂಡು ಬೇಕಾದಾಗ ಹೆಸರು ಬೇಳೆಯಷ್ಟು ತೆಗೆದು ಕಣ್ಣಿನ ಪಡಲಿಗೆ ಹಚ್ಚುವುದು. ಇದು ಹೂ ಬಿಂದು ತಿಮಿರ ಇತ್ಯಾದಿ ಎಲ್ಲಾ ತರದ ನೇತ್ರವ್ಯಾಧಿಗೆ ದಿವ್ಯ ಅಂಜನವು.

**ಕಣ್ಣಿನಲ್ಲಿ ನೋಕು ಬಿಂದು** (ಮಾಂಸದ ಮೊಳಕೆ) **ಆದರೆ:** ಕರಿಮೆಣಸು ಹಿಪ್ಪಲಿ ಒಂದೊಂದು ಪಾಲು, ನಾಲ್ಕು ಪಾಲು ಬಟಾಣಿಕಡ್ಲೆ ಇವುಗಳನ್ನು ಒಟ್ಟಿಗೆ ಅರೆದು ಮಾತ್ರೆ ಮಾಡಿ ಕಣ್ಣಿಗೆ ಪ್ರತಿದಿನವೂ ಬೆಳಿಗ್ಗೆ ತೇದು ಹಾಕುತಿದ್ದರೆ ಬೇಗನೆ ಗುಣವಾಗುವುದು.

ಕರಿಮೆಣಸು ಇಂದುಪ್ಪು ಒಂದೊಂದು ಭಾಗ ಒಂದೂವರೆ ಭಾಗ ಅಂಜನ ಕಲ್ಲು ಹಿಪ್ಪಲಿ ಎರಡುಭಾಗ ಸಮುದ್ರನಾಲಿಗೆ ಎರಡುಭಾಗ (ಸಮುದ್ರಫೇನ) ಇವುಗಳನ್ನೊಟ್ಟಿಗೆ ಅರೆದು ಮಾತ್ರೆ ಮಾಡಿ ನೀರಿನಲ್ಲಿ ತೇದು ದಿನವೂ ಕಣ್ಣಿಗೆ ಹಚ್ಚಿದರೆ ಗುಣವಾಗುವುದು.

ತ್ರಿಫಲೆಗಳನ್ನು ಆಡಿನ ಮೂತ್ರದಲ್ಲಿ ಅರೆದು ಮಾತ್ರೆ ಮಾಡಿ ಮೊಲೆ ಹಾಲಿನಲ್ಲಿ ತೇದು ಕಣ್ಣಿಗೆ ಅಂಜನ ಹಾಕುವುದು.

ಪಟಿಕ್ಕಾರವನ್ನೂ ನೀರುಳ್ಳಿಯನ್ನೂ ಜಜ್ಜಿ ರಸವನ್ನು ಕಣ್ಣಿಗೆ ಹಾಕಿದರೆ ಕಣ್ಣಿನ ಕಲೆಗಳು ಮಾಯುವುದು.

ಹಾಲೀಸಿ ಎಲೆಯನ್ನು ಉಪ್ಪು ಸೇರಿಸಿ ಅರೆದು ಬಟ್ಟೆಯಲ್ಲಿ ಹಾಕಿ ರಸವನ್ನು ಕಣ್ಣಿಗೆ ಹಿಂಡುವುದು.

**ಕಣ್ಣಿನಲ್ಲಿ ಕೆಂಪು ಕಲೆ ಬಂದರೆ:**—ಬಿಳಿಜುಂಡೆ ಎಲೆಯನ್ನರೆದು ಆಕಳ ತುಪ್ಪ ಹಾಕಿ ಸ್ವಲ್ಪ ಬಿಸಿಮಾಡಿ ತಲೆಗೆ ಹಾಕುವುದು (ಮೂರು ದಿನ)

ಸಣ್ಣ ಮರಳಬೀಜದ ಬೋಂದನ್ನು (ಜಪ್ಪ) ತುಪ್ಪ ಹಾಕಿ ಹುರಿದು ಅರೆದು ತಲೆಗೆ ಹಾಕುವುದು. (ಮೂರು ದಿನ)

**ಕೆಂಗಣ್ಣಿಗೆ:**—ಪಂಚಬಳ್ಳಿ ಎಲೆ (ವೀಳ್ಯದೆಲೆ)ಯ ರಸದ ಒಂದೆರಡು ಬಿಂದುಗಳನ್ನು ಕಣ್ಣಿಗೆ ಹಾಕುವುದು.

ಪಟಿಕ್ಕಾರ ಎಳೆಯಾಣಲೆ (ಬಾಲಹರಡ—ಕ್ಷುದ್ರಾ) ಚಿಲ್ಲಿಬೀಜ ಇವುಗಳನ್ನು ಸಮಾಂಶ ಸೇರಿಸಿ ನಿಂಬೆ ಹುಳಿಯ ರಸದಲ್ಲಿ ನುಣ್ಣಗೆ ಅರೆದು ಕಣ್ಣಿನ ಪ್ರಭಾವಳಿಗೆ (ಹೊರ ಸುತ್ತಲೂ) ಲೇಪಿಸುವುದು.

ಕಣ್ಣಿನ ಮಚ್ಚೆ ಮತ್ತು ಹೂವಿಗೆ ಸಮುದ್ರ ಮಾಹಲಕಾಯಿಯನ್ನು ಕಲ್ಲು ಸಕ್ಕರೆಯನ್ನೂ ಒಟ್ಟಿಗೆ ನೀರಿನಲ್ಲಿ ತೇದು ಕಣ್ಣಿಗೆ ಸುತ್ತಲೂ ಅಂಜನ ಹಾಕುವುದು.

**ರಾತ್ರಿ ಕಣ್ಣು ಕಾಣದಿದ್ದರೆ:—**

ಒಪ್ಪಲಿಯನ್ನು ದನದ ಸಗಣಿಯ ರಸದಲ್ಲಿ ತೇದು ಕೆಲವು ದಿನ ಕಣ್ಣಿಗೆ ಹಾಕಿದರೆ ರಾತ್ರಿ ಕಣ್ಣು ಕಾಣುವುದು.

ಪತ್ರೆ ಸೊಪ್ಪನ್ನೂ ಬೆಟ್ಟದ ಮರಳನ್ನೂ ಒಟ್ಟಿಗೆ ಗರಗದ ರಸದಲ್ಲರೆದು ಬೆಳಗ್ಗೆ ಅಂಜನ ಹಾಕಿದರೆ ರಾತ್ರಿ ಕಣ್ಣು ಕಾಣುವುದು.

ಹೊನ್ನಗೊನ್ನೆ ಸೊಪ್ಪನ್ನು ಜಜ್ಜಿ ಎಳ್ಳೆಣ್ಣೆ ಸೇರಿಸಿ ರಸವನ್ನು ಬೆಳಗ್ಗೆ ಕಣ್ಣಿಗೆ ಹಿಂಡುವುದು.

ಮದುಕಣಕೆ ಸಪ್ಪಿನ ರಸದಲ್ಲಿ ಸಮುದ್ರ ಫಲವನ್ನು ತೇದು ಕಣ್ಣಿನೊಳಗೆ ಹಾಕುವುದು.

ಕುಂಬಳಕಾಯಿಯ ಬೀಜವನ್ನು ಭಸ್ಮ ಮಾಡಿ ಎರಡು ಪಾಲು ಜಣ್ಣೆ ಸೇರಿಸಿ ಚೆನ್ನಾಗಿ ಜಾಳಿಸಿ ಮೂರುದಿನ ಅಂಜನ ಹಾಕುವುದು.

ಗಂಜಿತೆಳಿಯಲ್ಲಿ ಉಗುರಪರೆಯ ಸೊಪ್ಪನ್ನು ಅಕ್ಕಿಯೊಂದಿಗೆ ಅರೆದು ರಾತ್ರಿ ರೊಟ್ಟಿ ಬೇಯಿಸಿ ಎಣ್ಣೆ ಹಾಕಿ ತಿನ್ನುವುದು (ಮೂರು ದಿನ).

**ತಲೆ ಬಿಸಿಯಾಗಿ ಕಣ್ಣು ಉರಿಬಂದರೆ:—**

ಎಳ್ಳನ್ನೂ ನೆಲ್ಲಿಚಟ್ಟನ್ನೂ ಮೊದಲನೆ ದಿನ ನೆನೆಹಾಕಿ ಮರುದಿನ ಬೆಳಗ್ಗೆ ಅರೆದು ತಲೆಗೆ ಹಾಕಿ ಒಂದು ಜಾವದ ನಂತರ ಮೀಯುವುದು. ಮೂರು ದಿನ

ನರಿಕಬ್ಬಿನ ದಂಡನ್ನು ಬೆಂಕಿಯಲ್ಲಿ ಬಾಡಿಸಿ ಅದರ ರಸವನ್ನು ಕಣ್ಣಿಗೆ ಹಿಂಡಿದರೆ ಉರಿಗಣ್ಣು ಕೆಂಗಣ್ಣು ಇತ್ಯಾದಿ ಗುಣವಾಗುವುದು.

**ತಿಮಿರಕ್ಕೆ:—**

ನಿಂಬೆ ಹುಳಿಯ ಬೀಜವನ್ನು ಬಟ್ಟೆಯಲ್ಲಿ ಕಟ್ಟಿ ಸುಟ್ಟು ಸಿಪ್ಪೆಯನ್ನು ಸುಲಿದು ಬೀಜದೊಳಗಿನ ಬೊಂಡನ್ನು (ಪಪ್ಪು) ಚೂರ್ಣ ಮಾಡಿ ಕಲಾಯಿ ಯಿಲ್ಲದ ತಾಮ್ರದ ತಟ್ಟೆಯಲ್ಲಿ ಹಾಕಿ ನಿಂಬೆಯ ರಸವನ್ನು ಹಿಂಡಿ ದನದ ಬೆಣ್ಣೆಯನ್ನೂ ಹಾಕಿ ತಾಮ್ರದ ತಂಬಿಗೆಯಿಂದ ಚೆನ್ನಾಗಿ ಮರ್ದಿಸಿ ಕಣ್ಣಿಗೆ ಹಾಕುವುದು. (ಒಂದು ವಾರ)

**ಧೂಮ ತಿಮಿರ** (ಹೊಗೆಯಂತೆ ಕಾಣುವುದು) :—

ಬಿಳಿಗುರುಗುಂಜಿ ಬೇರನ್ನು ಎರಡು ದಿನ ಆಡಿನ ಮೂತ್ರದಲ್ಲಿ ಭಾವನೆ ಮಾಡಿ ಅನಂತರ ಒಂದು ವಾರ ಆಕಳ ತುಪ್ಪದಲ್ಲಿ ಹಾಕಿರಿಸಿ ತೆಗೆದು ನೆರಳಿ ನಲ್ಲೆ ಒಣಗಿಸಿ ಅದೇ ತುಪ್ಪದಲ್ಲಿ ತೇದು ಕಣ್ಣಿಗೆ ಹಚ್ಚುವುದು.

**ಅರಚಿದರೆ:—**

ಪಟಿಕಾರದ ಅರಳಿಗೆ ಸಮಾಂಶ ಬಜೆ ಸೇರಿಸಿ ಇಂಗ್ಲೀಷಿಸರದ ರಸದಲ್ಲಿ ಅರೆದು ಬಟ್ಟೆಯಲ್ಲಿ ಹಿಂಡಿಕಟ್ಟಿ ನೀರಿನಲ್ಲಿ ಮುಳುಗಿಸಿ ರಸವನ್ನು ಕಣ್ಣಿಗೆ ಹಿಂಡುವುದು.

**ಕಣ್ಣಿಗೆ ಗಡಿ ಗಾಯಗಳಾದರೆ:—**

ಕೂಡಲೆ ತುಂಬೆಯೆಲೆಯನ್ನು ಕೈಯಲ್ಲಿ ಹಿಸುಕಿ ನಾಲ್ಕಾರು ಬಿಂದು ರಸವನ್ನು ಕಣ್ಣಿಗೆ ಹಾಕಿದರೆ ಮೂರು ದಿನದಲ್ಲಿ ಗುಣವಾಗುವುದು.

**ಕಣ್ಣಿನ ರೆಪ್ಪೆಯ ಕೂದಲು ಬಿದ್ದರೆ:—**

ರಕ್ತ ಬೋಳವನ್ನೂ (ರಕ್ತವಾಳ) ಕಲ್ಲುಸಕ್ಕರೆಯನ್ನೂ ನೀರಿನಲ್ಲಿ ತೇದು ಲೇಪಿಸಿದರೆ ಕೆಲವೇ ದಿನಗಳಲ್ಲಿ ಕೂದಲು ಹುಟ್ಟುವುದು.

**ಮಕ್ಕಳ ಕೆಂಗಣ್ಣಿಗೆ:—**

ಆಯಾ ದಿನ ಬೆಳಗ್ಗೆ ಕಿಸ್ಕಾರದ ಹೂವನ್ನೂ ಕಾಯನ್ನೂ ತಂದು ಹೂವಿನ ಮಧ್ಯದ ನಾರನ್ನು ತೆಗೆದು ಬಿಸುಟು ಹೂವನ್ನು ಕಾಯಿಯೊಂದಿಗೆ ಜಜ್ಜಿ ಬಟ್ಟೆಯಲ್ಲಿ ಹಾಕಿ ರಸವನ್ನು ಕಣ್ಣಿಗೆ ಹಿಂಡುವುದು.

ಸಹದೇವಿ (ಪೂವಾಕುಂರ್ದಲ್) ರಸವನ್ನು ಜೇನು ಸೇರಿಸಿ ಜಾಳಿಸಿ ಅಂಜನ ಹಾಕಿದರೆ ಮೂರು ದಿನಗಳಲ್ಲಿ ಕೆಂಗಣ್ಣು ಬಾವು ನೋವು ಇತ್ಯಾದಿ ಗುಣವಾಗುವುದು.

**ಮಕ್ಕಳ ಕಣ್ಣ ಬಿಳಿ ಕಲೆಗೆ:—**

ನಂದ್ಯಾವರ್ತದ ಹೂವನ್ನು ಯಾ ಅದರ ಎಳೆಚಿಗುರನ್ನು ಅರೆದು ಮೊಲೆ ಹಾಲು ಸೇರಿಸಿ ಬೆಳಗ್ಗೆ ಕಣ್ಣಿಗೆ ಹಿಂಡುವುದು. (ಒಂದು ವಾರ)

**ಆಘಾತದಿಂದ ಯಾ ಇತರ ಕಾರಣದಿಂದ ಕಣ್ಣು ನೋವಾದರೆ:—**

ನುಗ್ಗೆ ಕೆತ್ತೆ ಯಾ ಅದರ ಎಲೆಯ ರಸಕ್ಕೆ ಜೇನು ಸೇರಿಸಿ ತಾಮ್ರದ ಪಾತ್ರೆಯಲ್ಲಿ ಜಾಳಿಸಿ ಅಂಜನ ಹಾಕುವುದು.

**ಮಕ್ಕಳ ಕಣ್ಣಿನ ರೆಪ್ಪೆ ಬಾತರೆ:—**

ಹುಣಿಸೆ ಎಲೆಯನ್ನು ಅವಿಯಲ್ಲಿ ಬೇಯಿಸಿ ರಸ ತೆಗೆದು ಸಮಾನ ಜೇನು ಸೇರಿಸಿ ಜಾಳಿಸಿ ಲೇಪಿಸುವುದು. (ಮೂರು ದಿನ)

**ಮಕ್ಕಳ ಕಣ್ಣಿನಲ್ಲಿ ನೀರು ಹೀಚು ಬರುವುದಿದ್ದರೆ:—**

ಚೂರಿ ಮುಳ್ಳುಗಿಡದ ಎಳೆಚಿಗುರನ್ನು ಅರೆದು ಅದರ ರಸವನ್ನು ಕಣ್ಣಿಗೆ ಹಾಕುವುದು. (ಮೂರು ಯಾ ಆರು ದಿನ)

# ಕಿವಿಯ ಆರೋಗ್ಯ

**ಕಿವಿಯಲ್ಲಿ ನೀರಿಳಿದರೆ:—**

ಉಂಡೆ ಹುಳಿಕೆತ್ತಿಯ ರಸಕ್ಕೆ ಸಮಾಂಶ ಎಳ್ಳೆಣ್ಣೆ ಸೇರಿಸಿ ಕಾಯಿಸಿ ನಾಲ್ಕಾರು ಬಿಂದು ಕಿವಿಗೆ ಹಾಕುವುದು.

**ಕಿವಿಯಲ್ಲಿ ಕೀವು ಸೋರುವುದಿದ್ದರೆ:—**

ಕೂರಾಂಬಿಲದ ಚಿಗುರನ್ನೂ ಜ್ಯೇಷ್ಠಮಧು (ಎರಟಿ ಮಧುರ)ವನ್ನೂ ಸಮಪಾಲು ತೆಗೆದು ಅರೆದು ನಾಲ್ಕು ಪಾಲು ಎಣ್ಣೆ ಸೇರಿಸಿ ಕಾಯಿಸಿ ಕಿವಿಗೆ ಹಾಕುವುದು.

ಅಥವಾ—ನಾಲ್ಕು ಪಾಲು ಬಿಲ್ವಪತ್ರೆ ಎಲೆಯ ರಸಕ್ಕೆ ಒಂದು ಪಾಲು ತೆಂಗಿನೆಣ್ಣೆ ಸೇರಿಸಿ ಬಜೆ ಅರಸಿನ ಬೆಳ್ಳುಳ್ಳಿಗಳನ್ನು ಎಣ್ಣೆಯ ಎಂಟನೆ ಒಂದು ಪಾಲಿನಷ್ಟು ಅರೆದು ಕಲ್ಕವಾಗಿ ಸೇರಿಸಿ ಎಣ್ಣೆ ಕಾಯಿಸಿ ದಿನವೂ ಕಿವಿಗೆ ನಾಲ್ಕಾರು ಬಿಂದುಗಳನ್ನು ಹಾಕುವುದು.

ಕಿವಿಯನ್ನು ಸ್ವಚ್ಛವಾಗಿ ತೊಳೆದು ಒರಸಿ ಕೆಲವು ದಿನ ಶ್ರೀಗಂಧದ ತೈಲವನ್ನು ಪೂಸುವುದು.

ಸುಗ್ಗಿ, ತುಳಸಿ, ಗರಗ, ಹಾಗಲ, ನೆಕ್ಕಿ, ಜಾಜಿ ಎಕ್ಕೆ ಇವುಗಳ ಎಲೆಯ ರಸವನ್ನೂ ಹಸಿಶುಂಠಿ ರಸವನ್ನೂ ಸಮಾಂಶ ಸೇರಿಸಿ ರಸದ ನಾಲ್ಕನೆ ಒಂದು ಪಾಲು ಎಳ್ಳೆಣ್ಣೆ ಸೇರಿಸಿ ಹದವಾದ ಪಾಕದಲ್ಲಿ ಕಾಯಿಸಿ ಸೋಸಿ ಕಿವಿಗೆ ಐದಾರು ಬಿಂದು ಹಾಕುವುದು.

ಬಿಲ್ವಪತ್ರೆಯ ರಸ ೨ ಕುಡ್ತೆ ಕಾಸರ್ಕದ ಸೊಪ್ಪಿನ ರಸ ೨ ಕುಡ್ತೆ ಕೊಬರಿ ಎಣ್ಣೆ ೧ ಕುಡ್ತೆ ಮತ್ತು ಬಜೆ ಶುಂಠಿ ದೇವದಾರು ಬೆಳ್ಳುಳ್ಳಿ, ನಾಲ್ಕನ್ನು ಒಂದೊಂದು ಒಂದೂವರೆ ತೊಲೆಯಷ್ಟು ತೆಗೆದುಕೊಂಡು ಮೇಲಿನ ರಸದಲ್ಲಿ ನುಣ್ಣಗೆ ಅರೆದು ಕಲ್ಕ ಸೇರಿಸಿ ಎಣ್ಣೆ ಕಾಯಿಸಿ ಅರಗು ಪಾಕದಲ್ಲಿಳಿಸಿ ಸೋಸಿ ತಲೆಗೆ ಮಾತ್ರ ಕೆಲವು ಸಾರಿ ಹಾಕಿದರೆ ಗುಣ ವಾಗುವುದು.

ಶುಂಠಿ ಇಂಮುಪ್ಪು ಓಪ್ಪಲಿ ಛದ್ರಮುಷ್ಟಿ ಛಜೆ ಕಂಕುಷ್ಠ ಬೆಳ್ಳುಳ್ಳಿ ಇವುಗಳನ್ನು ಕಾಲು ತೊಲೆಯಂತೆ ತೆಗೆದು ಅರ್ಧ ಕುಡ್ತೆ ಎಕ್ಕೆ ಎಲೆಯ ರಸ ದಲ್ಲಿ ಅರೆದು ಅರ್ಧ ಕುಡ್ತೆ ಎಳ್ಳೆಣ್ಣೆ ಸೇರಿಸಿ ಕಾಯಿಸಿದ ಎಣ್ಣೆಯನ್ನು ಕಿವಿಗೆ ಹಾಕುವುದು.

ನೆಕ್ಕಿಯ ಬೀಜ ಏಲಕ್ಕಿ ಬೀಜ ಇವುಗಳನ್ನು ಸಮವಾಗಿ ಸೇರಿಸಿ ಒಂದ ಚಿಟಿಕೆಯಷ್ಟು ತೆಗೆದು ಜಜ್ಜಿ ಹಸಿ ತೆಂಗಿನ ಮಡಲಿನ ಕಡೆಯಲ್ಲಿ ಹಾಕಿ ಒಂದು ಚಮಚ ಎಳ್ಳೆಣ್ಣೆಯನ್ನೂ ಎರೆದು ಕಾಯಿಸಿ ಮೂರು ದಿನ ಕಿವಿಗೆ ಎರೆಯು ವುದು. (ಎಣ್ಣೆ ಮಾತ್ರ). ಉತ್ತರಣೆಯ ಶುದ್ಧಕ್ಷಾರವನ್ನು (ಬೂದಿ) ಎಳ್ಳೆಣ್ಣೆಯಲ್ಲಿ ಹಾಕಿ ಕಾಯಿಸಿ ಮೇಲಿನ ತಿಳಿ ಎಣ್ಣೆಯನ್ನು ನಾಲ್ಕಾರು ಬಿಂದು ಕಿವಿಗೆ ಹಾಕುವುದು. (ಒಂದು ವಾರ)

ಜೇಪಾಳದ ಬೀಜವನ್ನು ನಿಂಬೆಹುಳಿಯ ರಸದಲ್ಲಿ ಅರೆದು ಬಟ್ಟೆಯಲ್ಲಿ ಹಾಕಿ ರಸವನ್ನು ಕಿವಿಗೆ ಹಿಂಡುವುದು. [ಹೊಟ್ಟೆಗೆ ಹೋಗದಂತೆ ಜಾಗ್ರತೆ ವಹಿಸುವುದು.]

ಕೃಷ್ಣಾಜಿನವನ್ನು ಎಣ್ಣೆ ಸೇರಿಸಿ ಕಾಯಿಸಿದ ಎಣ್ಣೆಯನ್ನು ಕಿವಿಗೆರೆದರೆ ಕಿವಿಯ ಕೀವು ಮತ್ತು ನೋವು ಗುಣವಾಗುವುದು.

ತ್ರಿಫಲೆ, ಕುಷ್ಠ, ಇವುಗಳನ್ನರೆದು ಎಣ್ಣೆ ಸೇರಿಸಿ ಕೃಷ್ಣಾಜಿನ ಹಾಕಿ ಚೆನ್ನಾಗಿ (ಹೊಗೆ ಬರುವಷ್ಟು) ಕಾಯಿಸಿ, ೧ ಚಿಟಿಕೆ ಅರ್ದಾಳದ ಚೂರ್ಣ ಹಾಕಿ ಎಣ್ಣೆಯನ್ನು ಕಿವಿಗೆರೆದರೆ ಹಳೆಯದಾದ ಕೀವು ಮತ್ತು ನೋವು ಹೋಗುವುದು.

ಜಿಂಕೆ ಕೋಡಿನ ಭಸ್ಮಕ್ಕೆ (ಶೃಂಗ ಭಸ್ಮ) ಗ್ಲಿಸರಿನ್ ಹಾಕಿ ಕಿವಿಗೆ ಹಾಕಿದರೆ ಕಿವಿಯಲ್ಲಿ ಕೀವಾಗುವುದು ಗುಣವಾಗುವುದು. ಪಾಂಡೇಲು ಮರದ ಸೊಪ್ಪಿನ ರಸವನ್ನು ಎಣ್ಣೆ ಹಾಕಿ ಕಾಯಿಸಿ ಎಣ್ಣೆಯನ್ನು ತಲೆಗೆ ಹಚ್ಚುವುದರಿಂದ ಕಿವಿ ಸೋರುವುದು ಗುಣವಾಗುತ್ತದೆ.

ಒಂದು ಪಾಲು ಕರಿತುಳಸಿಯ ಸೊಪ್ಪನ್ನೂ ಮೂರು ಪಾಲು ಬಿಲ್ವ ಪತ್ರೆಯ ಸೊಪ್ಪನ್ನೂ ಜಜ್ಜಿ ಎರಡು ಬಾಟ್ಲಿ ರಸ ತೆಗೆದು ಒಂದು ಬಾಟ್ಲಿ ಕೊಬರಿ ತುಪ್ಪವನ್ನೂ (ತೆಂಗಿನ ಹಾಲು ಬತ್ತಿಸಿ ತೆಗೆದ ಎಣ್ಣೆ) ಒಂದು ಬಾಟ್ಲಿ ದನದ ಹಾಲನ್ನೂ ಸೇರಿಸಿ ಮಣಿಕುಂದ್ರಕ್ಕ, ಮರದರಸಿನ ಇವುಗಳು ಎರಡೆರಡು ತೊಲೆ ಒಂದು ತೊಲೆ ರಾಳ ಮೂರನ್ನು ಒಟ್ಟಿಗೆ ಮೇಲಿನ ರಸ

ದಲ್ಲಿ ಅರೆದು ಕಲ್ಕವಾಗಿ ಸೇರಿಸಿ ಎಣ್ಣೆ ಕಾಯಿಸಿ ಪದವಾದ ಪಾಕದಲ್ಲಿ ಇಳಿಸಿ ಪಾತ್ರ ಪಾಕಕ್ಕೆ ಸ್ವಲ್ಪ ಪಚ್ಚೆ ಕರ್ಪೂರ ಹಾಕಿ ಅರಿಸುವುದು. ಚೆನ್ನಾಗಿ ತಣಿದ ನಂತರ ಕಿವಿಗೆ ಆರಾರು ಬಿಂದುಗಳಂತೆ ಬೆಳಿಗ್ಗೆ ಒಂದು ವಾರದ ತನಕ ಹಾಕುವುದು. ಮತ್ತು ಮೂರು ದಿನ ತಲೆಯ ನೆತ್ತಿಗೂ ಹಚ್ಚಿದರೆ ಕಿವಿಸೋರುವುದು ಗುಣವಾಗುವುದು. ಈ ಮೇಲಿನ ತೈಲಕ್ಕೆ ಸುರಸ ಬಿಲ್ವಾದಿ ತೈಲವೆಂದು ಹೆಸರು.

ಪೇರಳ ಚಿಗುರನ್ನು ಸ್ವಲ್ಪ ಓಮ ಸೇರಿಸಿ ಜಜ್ಜಿ ರಸವನ್ನು ಬೆಳಿಗ್ಗೆ ಕಿವಿಗೆ ಆರಾರು ಬಿಂದು ಬಿಡುವುದು. ಅಥವಾ ಇದೇ ಮದ್ದುಗಳಿಗೆ ಅವರ ನಾಲ್ಕು ಪಾಲು ಎಣ್ಣೆ ಸೇರಿಸಿ ಕಾಯಿಸಿ ಸೋಸಿ ತಲೆಗೆ ಹಾಕುವುದು.

ಜಾಜಿ ಮಲ್ಲಿಗೆ ಚಿಗುರು ದುಂಡು ಮಲ್ಲಿಗೆ ಚಿಗುರು ಕಾಡು ಮಲ್ಲಿಗೆ ಚಿಗುರು ಚೂರಿ ಮುಳ್ಳು ಗಿಡದ ಚಿಗುರು ತಗ್ಗಿ ಗಿಡದ ಚಿಗುರು ಬಿಲ್ವಪತ್ರೆಯ ಸೊಪ್ಪು ದೇವದಾರು, ಕರಿಜೀರಿಗೆ ಹಿಪ್ಪಲಿ ಜ್ಯೇಷ್ಠ ಮಧು ಅರಸಿನ ಭಜೆ ಇವು ಗಳನ್ನು ಸಮಾಂಶ ತೆಗೆದು ಮುದ್ದೆಯಾಗುವಂತೆ ನುಣ್ಣಗೆ ಅರೆದು ಇವರ ಎಂಟು ಪಾಲು ಎಣ್ಣೆ ಸೇರಿಸಿ ಕಾಯಿಸಿ ಕಿವಿಗೆ ಐದಾರು ಬಿಂದು ಹಾಕು ವುದು. ನೆತ್ತಿಗೂ ಕೆಲವು ದಿನ ಹಚ್ಚುವುದು.

ಕಿವಿಯಲ್ಲಿ ನೀರು ಮಾತ್ರ ಸುರಿಯುತಿದ್ದರೆ ಪ್ರತಿದಿನ ಬೆಳಿಗ್ಗೆ ಒಂದು ವಾರ ಗರಗದ ರಸವನ್ನು ಕಿವಿಗೆ ಹಾಕುವುದು.

**ಕಿವಿಗೆ ನೀರು ಹೋಗಿ ಕೆಲವು ಕಾಲದಿಂದಲೇ ಸೋರುತಿದ್ದರೆ:—**

ಕಹಿಬೇವಿನ ಕೆತ್ತೆ. ಅಮೃತಬಳ್ಳಿ, ಶುಂಠಿ, ಅರಸಿನ. ಅಡುಸೋಗೆ ಬೇರು ತ್ರಿಫಲೆ ಕಾಡುಪಟಗಿಲ ಕೊಡಗಪ್ಪಾಲರಿ ನಾಲ್ಕು ಮರಗಳ ಕೆತ್ತೆ (ಅತ್ತಿ. ಇತ್ತಿ, ಗೋಳಿ, ಅಶ್ವತ್ಥ) ಈ ಹದಿನಾಲ್ಕು ಮದ್ದುಗಳನ್ನೂ ಅಷ್ಟಮಾಂಶ ಕಷಾಯ ಮಾಡಿ ಒಂದು ವಾರ ರಾತ್ರಿ ಬೆಳಿಗ್ಗೆ ಸೇವನೆ.

ವಿಶಾಲರಿ. ಭದ್ರಮುಷ್ಟಿಗಡ್ಡೆ ಅರಸಿನ. ಮರದರಸಿನ ಪಾಲಾಶದ ಕೆತ್ತೆ ಇವುಗಳ ಅಷ್ಟಮಾಂಶ ಕಷಾಯ ಮಾಡಿ ಸೇವಿಸುವುದು.

**ಕಪಾಲ ಕುರುವಾಗಿ ಕಿವಿ ಸೋರುವುದಿದ್ದರೆ:—**

ಎದ್ರೋಳಿ ಚಿಗುರನ್ನು ಜಜ್ಜಿ ಹಾಕಿ ಎಣ್ಣೆ ಕಾಯಿಸಿ ತಲೆಗೆ ಹಚ್ಚು ವುದರಿಂದ ಕೀವು ಮತ್ತು ನೋವು ಗುಣವಾಗುವುದು.

**ಕಿವಿಯು ಸೆಳೆತಕ್ಕೆ:—**

ಅಣಪಿನ ಚಿಗುರನ್ನು ಅರೆದು ಎಣ್ಣೆ ಅಥವಾ ದನದ ತುಪ್ಪ ಹಾಕಿ ಕಾಯಿಸಿ ಕಿವಿಗೆ ಹಾಕುವುದು.

**ಕಿವಿಯು ಕೇಳದಾದರೆ:—**

ಸಾಗುವಾನಿ (ತೇಕ್ಕಿನ ಮರ) ಮರದ ಎರಡು ಚಿಗುರನ್ನು ತಂದು ಎದೆ ಹಾಲಿನಲ್ಲಿ ಚನ್ನಾಗಿ ಒಂದೂವರೆ ಘಂಟೆ ಕಾಲ ಎಡೆಬಿಡದೆ ಅರೆದು ಬೆಳಗ್ಗೆ ನಾಲ್ಕುವರೆ ಘಂಟೆಗೆ ನೆತ್ತಿಗೆ ಹಾಕುವುದು. ಆ ಮೇಲೆ ಅದು ಆರಿಹೋಗದಂತೆ ಆಗಾಗ ಪೊಲಿಹಾಲನ್ನು ತಾಗಿಸುತ್ತಾ ಮೂರು ಘಂಟೆ ಸಮಯ ಮದ್ದು ತಲೆಯಲ್ಲಿದ್ದು ಕೂಡಲೇ ಮೀಯುವುದು. ಆರು ದಿನಗಳಲ್ಲಿ ಗುಣವಾಗುವುದು. ನೆಲಪ್ಪನೆ ಗಡ್ಡೆಯನ್ನೂ ಉತ್ತರಣೆ ಬೇರನ್ನೂ ಕಾದು ಆರಿದ ನೀರಿನಲ್ಲರೆದು ಅದರ ರಸವನ್ನು ಕಿವಿಗೆ ಹಾಕುವುದು ಮತ್ತು ಇವುಗಳ ಸಮಾಂಶ ಚೂರ್ಣವನ್ನು ಜೇನಿನಲ್ಲರೆದು ಸೇವಿಸುವುದು.

ಉಪ್ಪನ್ನು ಗಂಜಿತೆಳಿಯಲ್ಲಿ ಅರೆದು ಕೆಲವು ದಿನ ಕಿವಿಗೆ ಹಾಕುವುದು

ಪೊಲದ ಹಿಕ್ಕೆಯನ್ನು ಎಣ್ಣೆ ಹಾಕಿ ಕಾಯಿಸಿ ಕಿವಿಗೆ ಎರದರೆ ಕಿವಿ ಕೇಳಿಸುವುದು.

ಉತ್ತರಣೆ ಗಿಡದ ಹಸಿ ಕಾಂಡವನ್ನು ಹಾಕಿ ಎಣ್ಣೆ ಕಾಯಿಸಿ ಕಿವಿಗೆ ದಿನದಲ್ಲಿ ನಾಲ್ಕಾರು ಬಿಂದುವಿನಂತೆ ಒಂದು ವಾರ ಹಾಕುವುದು.

ಗುಗ್ಗುಲವನ್ನು ಬೆಂಕಿಯಲ್ಲಿ ಹಾಕಿ ಅದರಿಂದ ಹೊರಡುವ ಹೊಗೆಯನ್ನು ನಳಿಗೆಯ ಮೂಲಕ ಕಿವಿಗೆ ಹಾಯಿಸಿದರೆ ಕೀವು ವ್ರಣ ಇತ್ಯಾದಿ ಗುಣವಾಗಿ ಕಿವಿ ಕೇಳುವುದು.

**ನಿತ್ರಾಣದಿಂದ ಕಿವಿ ಕೇಳದಾದರೆ:—**

ಸೀಯಾಳದ ನೀರಲ್ಲಿ ಕುಸುಮ (ಮಧ್ಯದನಾರು) ತೆಗೆದ ಕಿಸ್ಕಾರ ಹೂವನ್ನು ಎರಡು ಹಿಡಿ ಹಾಕಿ ಚೆನ್ನಾಗಿ ಕುದಿಸಿ ಕಿವಿಚಿ ಸೋಸಿ ರಸದಷ್ಟೆ ನೊರೆ ಹಾಲನ್ನೂ ಸೇರಿಸಿ ಸಕ್ಕರೆಯನ್ನೂ ದನದ ತುಪ್ಪವನ್ನೂ ಒಂದೊಂದು ಚಮಚ ಹಾಕಿ ಹದವಾದ ಬಿಸಿಯಿರುವಾಗ ಬೆಳಗ್ಗೆ ಸೇವಿಸುವುದು. ಕೆಲವು ದಿನಗಳಲ್ಲಿ ಕಿವಿ ಕೇಳಿಸುವುದು.

ಚಿಲ್ಲಿಯ ಬೀಜವನ್ನು ರಾತ್ರಿ ನೀರಿನಲ್ಲಿ ನೆನೆಯಲು ಹಾಕಿ ಬೆಳಗ್ಗೆ ನೊರೆ ಹಾಲಿನಲ್ಲರೆದು ಕೆಲವು ದಿನ ಸೇವಿಸುವುದು.

**ಕಿವಿಯಲ್ಲಿ ಶಬ್ದವಿದ್ದು ಕಿವಿ ಬಂದಾದರೆ:—**

ಸೀತಾದಂಡೆ (ದ್ರೌಪದಿವಾಲಿ) ಎಲೆಯನ್ನು ಬೆಂಕಿಯಲ್ಲಿ ಬಾಡಿಸಿ ರಸತೆಗೆದು ಹನಿಸಿ ತಿಳಿಯಾದ ರಸವನ್ನು ಕಿವಿಗೆರೆಯುವುದು.

**ಸನ್ನಿಪಾತವಾಗಿ ಕಿವಿ ಕೇಳದಾದರೆ:—**

ತಾಳಿಮರದ ಕೈಯನ್ನು (ಕೊತ್ತಳಿಗೆ) ಬೆಂಬೂದಿಯಲ್ಲಿ ಹುಗಿದು ಬೇಯಿಸಿ ಜಜ್ಜಿ ಅದರ ರಸವನ್ನು ಬೆಳಗ್ಗೆ ನಾಲ್ಕಾರು ಬಿಂದು ಕಿವಿಗೆ ಹಾಕುವುದು. (ಒಂದು ವಾರ)

**ಸಾಮಾನ್ಯವಾದ ಕಿವಿಯ ನೋವಿಗೆ:—**

ಅಮೃತಬಳ್ಳಿಯ ಬೀಳು (ಕೆಳಗಿಳಿದು ಜೋತಾಡುತ್ತಿರುವ ಬೇರು)ನ್ನು ಎಣ್ಣೆಯಲ್ಲರೆದು ಬಟ್ಟೆಯಲ್ಲಿ ಹಾಕಿ ಅದರ ರಸವನ್ನು ಮೂರು ದಿನ ಕಿವಿಗೆ ಹಿಂಡುವುದು.

ಇಂದುಪ್ಪನ್ನು (ಸೈಂಧವ ಲವಣವನ್ನು) ಹೋತದ ಮೂತ್ರದಲ್ಲಿ ಅರೆದು ಬಟ್ಟೆಯಲ್ಲಿ ಹಾಕಿ ರಸವನ್ನು ಕಿವಿಗೆ ಹಿಂಡುವುದು.

**ಅಸಹ್ಯವಾದ ಕಿವಿ ನೋವಿಗೆ:—**

ಪಾಜಳೆ ಮರದ ಮೇಣವನ್ನು ಕಿವಿಗೆರೆಯುವುದು.

**ಕಿವಿ ನೋವು ಮತ್ತು ಬಾವುಗಳಿಗೆ:—**

ಹಣ್ಣಾದ ಎಕ್ಕೆ ಎಲೆಗೆ ತುಪ್ಪ ಅಥವಾ ಎಣ್ಣೆಯನ್ನು ಸವರಿ ಬೆಂಕಿಯಲ್ಲಿ ಬಾಡಿಸಿ ಕೈಯಲ್ಲಿ ಹಿಸುಕಿ ರಸವನ್ನು ಕಿವಿಗೆ ಹಿಂಡುವುದು,

ಹಸಿ ಶುಂಠಿಯ ರಸವನ್ನು ಬಿಸಿಮಾಡಿ ಕಿವಿಗೆ ನಾಲ್ಕಾರು ಬಿಂದು ಹಾಕುವುದು.

**ಕಿವಿಯಲ್ಲಿ ಬಾವಾಗಿ ನೀರು ಸುರಿಯುವುದಿದ್ದರೆ (ವಿದ್ರಧಿ) ಮತ್ತು ಸಾಮಾನ್ಯ ಎಲ್ಲ ತರದ ಶೂಲೆಗಳಿಗೂ:—**

ಬುಗುಡಿ ಹೂವಿನ ಗಡ್ಡೆ, ಸಣ್ಣ ಬದನೆಬೇರು, ಅಳಲೆ ನೆಲ್ಲಿ ಶಾಂತಿ ಕಾಯಿಗಳ ಸಿಪ್ಪೆ, ಒಣಅರಸಿನ, ಮರದರಸಿನ, ಕಾಡು ಸೌತೆಬೇರು, ಕಾಡು

ಪಟಗಿಲ ಬಳ್ಳಿ ಇವುಗಳ ಅಷ್ಟಮಾಂಶ ಕಷಾಯ ಮಾಡಿ ದಿನ ಎರಡು ಹೊತ್ತಿನ ಪ್ರಕಾರ ಹನ್ನೆರಡು ದಿನ ಸೇವಿಸುವುದು.

ಹಿಪ್ಪಲಿ, ಕರಿಮೆಣಸು, ಬೆಳ್ಳುಳ್ಳಿ ಮೂರನ್ನು ಸೇರಿಸಿ ಕಾಯಿಸಿದ ಎಳ್ಳೆಣ್ಣೆಯನ್ನು ಕಿವಿಗೆರೆಯುವುದು.

ಸಮೂಲ ಉತ್ತರಣೆಯ ಎರಡು ತೊಲೆ ಭಸ್ಮವನ್ನು ಎರಡು ಔನ್ಸು ಎಣ್ಣೆಯಲ್ಲಿ ಕದಡಿ ಮೇಲಿನ ತಿಳಿಯೆಣ್ಣೆಯನ್ನು ಕಿವಿಗೆ ನಾಲ್ಕಾರು ಬಿಂದು ಹಾಕುವುದು.

**ಕಿವಿಯ ಹುಣ್ಣು ಮತ್ತು ಸಿಡಿತಕ್ಕೆ:—**

ಸಮುದ್ರಫೇನವನ್ನು (ಸಮುದ್ರ ನಾಲಿಗೆ) ನಿಂಬೆ ಹುಳಿಯ ರಸದಲ್ಲಿ ರೆದು ಚೂರ್ಣ ಮಾಡಿ ಕಿವಿಗೆ ಹಾಕಿದರೆ ಒಳಗಿನ ಬಾವು ಸೋರಿ ಸಿಡಿತವು ಗುಣವಾಗುವುದು.

**ಕಿವಿಯ ನಿಷ್ಕಾರಣ ಸಿಡಿತಕ್ಕೆ:—**

ಹೊಂಗಾರೆ ಸೊಪ್ಪಿನ ಹಸಿರಸವನ್ನು ಕಿವಿಗೆ ಹಿಂಡುವುದು.

**ಕಿವಿಯ ಬಳ್ಳಿ ವ್ರಣಗಳಿಗೆ (ಪಾಳಿ ವ್ರಣ):—**

ಇಂಜಿರು ಸೊಪ್ಪಿನ ರಸವನ್ನು ಹಾರೆಯಲ್ಲಿ ಹಾಕಿ ಚೆನ್ನಾಗಿ ಜಾಳಿಸಿ ವ್ರಣಕ್ಕೆ ಲೇಪಿಸಿದರೆ ಶೀಘ್ರಗುಣವಾಗುವುದು.

**ಕಿವಿಯ ಹೊರಗಿನ ವ್ರಣಗಳಿಗೆ:—**

ಎರಡು ಪಾಲು ಅರಸಿನ ಗಡ್ಡೆಯನ್ನೂ ಒಂದು ಪಾಲು ಒಣಸೆಲ್ಲಿ ಚಟ್ಟನ್ನೂ ಸೇರಿಸಿ ನುಣ್ಣಗೆ ಅರೆದು ಲೇಪಿಸಿದರೆ ಬಾವು ನೋವು ಇತ್ಯಾದಿ ಗಳು ಕೂಡ ಗುಣವಾಗುವುದು.

ಅತ್ತಿ ಕೆತ್ತೆಯನ್ನು ದನದ ತುಪ್ಪದಲ್ಲರೆದು ಲೇಪಿಸುವುದು

ಪುದೆಲು ಗಾಮಟೆಯೆಲೆಯನ್ನು ನಿಂಬೆಯ ರಸದಲ್ಲಿ ಯಾ ಮಜ್ಜಿಗೆ ಯಲ್ಲರೆದು ಲೇಪಿಸುವುದು.

**ಕಿವಿಯ ಶುದ್ಧಿಗೆ:—**

ಎದ್ರೋಳಿ ಸೊಪ್ಪನ್ನು ಒಣಗಿಸಿ ಚೂರ್ಣಮಾಡಿ ನಿಂಬೆ ಹುಳಿಯ ರಸ ದಲ್ಲಿ ಕಲಸಿ ಕಿವಿಗೆ ಹಾಕಿದರೆ ಒಳಗಿನ ಕೀವು ಮಡ್ಡು ಮೊದಲಾದವುಗಳು ಹೊರಗೆ ಬಂದು ಕಿವಿಯು ನಿರ್ಮಲವಾಗುವುದು.

ತುರುಳಿ ಗಿಡದ ರಸವನ್ನು ಯಾ ನಿಂಬೆ ಹಣ್ಣಿನ ರಸವನ್ನು ಕಿವಿಗೆ ಎರೆದು ಕಡಲು ನಾಲಿಗೆಯ ಚೂರ್ಣವನ್ನು ಹಾಕಿದರೆ ಕೀವೆಲ್ಲ ಒಳಗಿನಿಂದ ತಾನಾಗಿ ಉಕ್ಕಿ ಹೊರಹೋಗುವುದು. ಆ ಮೇಲೆ ಹತ್ತಿ ಸುತ್ತಿದ ಕಡ್ಡಿಯಿಂದ ಕಿವಿಯನ್ನು ಸ್ವಚ್ಛಪಡಿಸಿದರೆ ಮೂರು ದಿನದಲ್ಲಿ ಗುಣವಾಗುವುದು.

**ಕಿವಿಯ ದುರ್ವಾಸನೆಗೆ:—**

ಎಂಜಿರು ಬಳ್ಳಿಯ (ಕುಕ್ಕುಸನ) ಚಿಗುರನ್ನು ಮುಮ್ಮುರಿ (ಪುಟ ಪಾಕ ವಿಟ್ಟು) ಹಾಕಿ ಬೇಯಿಸಿ ತೆಗೆದ ರಸಕ್ಕೆ ಸಮಾಂಶ ಮೊಜಂಟಿ ಜೇನು ಸೇರಿಸಿ ಬೆಳಿಗ್ಗೆ ಕಿವಿಗೆ ಹಾಕುವುದು. ಮೂರು ದಿನ ಹಾಕಿದರೆ ನಿಶ್ಶೇಷವಾಗುವುದು.

**ಕಿವಿಗೆ ಕ್ರಿಮಿಕೀಟಾದಿಗಳು ಪ್ರವೇಶಿಸಿದರೆ:—**

ನೆಕ್ಕಿಸೊಪ್ಪಿನ ರಸವನ್ನು ಕಿವಿಗೆ ಹಿಂಡುವುದು.

ಎರಡು ಪಾಲು ಪತ್ರಜೀವದ ಎಲೆಯ ರಸಕ್ಕೆ ಒಂದು ಪಾಲು ಕೊಬರಿ ಎಣ್ಣೆ ಸೇರಿಸಿ ಕಾಯಿಸಿ ಹದವಾದ ಪಾಕದಲ್ಲಿಳಿಸಿ ಎರಡು ಬಿಂದು ಕಿವಿಗೆ ಹಾಕಿದರೆ ಕೂಡಲೆ ಕ್ರಿಮಿಕೀಟಗಳು ಸತ್ತುಹೋಗುವುವು.

**ಕಿವಿಯ ಕ್ರಿಮಿಗೆ:—**

ನುಗ್ಗೆ ಕೆತ್ತೆಯ ರಸ, ನೀರಿನಲ್ಲರೆದ ತ್ರಿಕಟುವಿನ ರಸ, ಅರದಾಳ ಚೂರ್ಣವನ್ನು ಕದಡಿದ ಗೋಮೂತ್ರ, ಗರಗದ ರಸ, ಇವುಗಳಲ್ಲಿ ಯಾವುದಾದರೊಂದು ಮದ್ದನ್ನು ಕಿವಿಗೆ ಹಾಕುವುದು.

**ಉಣ್ಣೆ ಕಿವಿಯೊಳಗೆ ಕಚ್ಚಿದರೆ:—**

ಹಣ್ಣಡಿಕೆ ಸಿಪ್ಪೆಯ ಸ್ವರಸವನ್ನು ಕುದಿಸಿ ಕಿವಿಗೆರೆದರೆ ಉಣ್ಣೆಯು ಕೂಡಲೆ ಸತ್ತು ಹೊರ ಬೀಳುವುದು.

**ಮಕ್ಕಳ ಕಿವಿಯಲ್ಲಿ ಕೀವು ಸುರಿದರೆ:—**

ಒಂದು ಚಿಂದಿ ಬಟ್ಟೆಯನ್ನು ಹಾಗಲಸೊಪ್ಪಿನ ರಸದಲ್ಲಿ ಮುಳುಗಿಸಿ ನೆರಳಿನಲ್ಲಿ ಒಣಗಿಸುವುದು. ಅದೇ ಬಟ್ಟೆಯನ್ನು ಮೊದಲಿನಂತೆ ತೊಗರಿ ಸೊಪ್ಪಿನ ರಸದಲ್ಲೂ ಹಸಿಶುಂಠಿ ರಸದಲ್ಲೂ ಪ್ರತ್ಯೇಕ ಮುಳುಗಿಸಿ ಒಣಗಿಸಿ ಬಟ್ಟೆಯನ್ನು ದೇವದಾರುವಿನ ಕೊರಡಿಗೆ ಸುತ್ತಿ ಎಳ್ಳೆಣ್ಣೆಯಲ್ಲಿ ಮುಳುಗಿಸಿ ಉರಿಸುವುದು. ಉರಿಯುತ್ತಿರಲು ಕಾದು ಬೀಳುವ ಉರಿಯೆಣ್ಣೆಯನು ಸಂಗ್ರಹಿಸಿ ಬೇಕಾದಾಗ ನಾಲ್ಕಾರು ಬಿಂದುಗಳಂತೆ ಕಿವಿಗೆ ಹಾಕುವುದು. (ನಾಲ್ಕು ಯಾ ಆರು ದಿನ)

# ಕೇಶಾರೋಗ್ಯ

**ಕೇಶಕಾಂತಿಗೆ:—**

ಗಟ್ಟದ ಗೇರನ್ನು ಜಜ್ಜಿ, ಎಳ್ಳೆಣ್ಣೆಯಲ್ಲಿ ಹಾಕಿ ಕಾಯಿಸಿ ತೆಗೆದು ಎಣ್ಣೆಯನ್ನು ಕೂದಲಿಗೆ ಪೂಸಿದರೆ ಕೂದಲು ತುಂಬಿ ಬೆಳೆಯುವುದು.

**ಕೂದಲು ಉದುರುವುದಕ್ಕೆ:—**

ಒಂದು ಪಾಲು ಎಳ್ಳೆಣ್ಣೆಗೆ ನಾಲ್ಕು ಪಾಲು ಉಮ್ಮತ್ತದ ಸೊಪ್ಪಿನ ರಸವನ್ನು ಸೇರಿಸಿ ಉಮ್ಮತ್ತದ ಬೀಜಗಳ ಕಲ್ಕ ಹಾಕಿ ಕಾಯಿಸಿ ಈ ಎಣ್ಣೆಯನ್ನು ತಲೆಗೆ ಪೂಸುವುದು.

**ಬಾಲನರೆಗೆ:—**

ಬಿಳಿ ಗುರುಗುಂಜಿ ಸೊಪ್ಪಿನ ರಸ 1 ಕುತ್ತಿ, ಅಂತರಗಂಗೆ, ಗರಗ, ಗೇರು ಮರದ ಕೆತ್ತೆ, ಹೊನಗೊನ್ನೆ, ಇವುಗಳ ರಸ ಪ್ರತ್ಯೇಕ ಅರ್ಧರ್ಧ ಕುತ್ತಿ ಒಂದು ಕುತ್ತಿ ಎಣ್ಣೆ ಸೇರಿಸಿ ಕಾಯಿಸಿ ಮಿತಪಾಕದಲ್ಲಿಳಿಸಿ ಸೋಸಿ ಬಾಟ್ಲಿಯಲ್ಲಿರಿಸಿಕೊಂಡು ನಾಲ್ಕು ದಿನಗಳಿಗೊಮ್ಮೆ ಈ ಎಣ್ಣೆಯನ್ನು ತಲೆಗೆ ಹಾಕಿ ಸ್ನಾನ ಮಾಡಿದರೆ ಕೂದಲು ಕಪ್ಪಾಗುವುದು.

ಊದುವ ಶಂಖವನ್ನು ಬೂದಿ ಮಾಡಿ ಸೀಸ ಕೂಡಿಸಿ ಎಳ್ಳೆಣ್ಣೆಯಲ್ಲಿ ಮರ್ದಿಸಿ ತಲೆಗೆ ಲೇಪಿಸುವುದು.

ಬಿಲ್ವಪತ್ರೆ ಸೊಪ್ಪಿನ ಸ್ವರಸವನ್ನು ಕೆಲವು ದಿನ ತಲೆಗೆ ಹಾಕಿದರೆ ನರೆಯುವುದು ಸಂಪೂರ್ಣ ನಿಂತುಹೋಗುವುದು.

**ಕೇಶವೃದ್ಧಿಗೆ:—**

ನೀಲಿ ಬೇರನ್ನು ಚೂರ್ಣ ಮಾಡಿ ಎಳ್ಳೆಣ್ಣೆಯಲ್ಲಿ ಹಾಕಿರಿಸಿ ವಾರಕ್ಕೆ ಎರಡು ಸಲದಂತೆ ಎಣ್ಣೆಯನ್ನು ತಲೆಗೆ ಪೂಸುವುದು.

ಎಳ್ಳೆಣ್ಣಗೆ ಅದರ ನಾಲ್ಕು ಪಾಲು ಗರಗದ ರಸ ಸೇರಿಸಿ ಕಾಯಿಸಿ ತಲೆಗೆ ಪೂಸುವುದರಿಂದ ಕೂದಲು ತುಂಬಿ ಚಂದವಾಗಿ ಬೆಳೆಯುವುದು.

**ಕೂದಲು ಬೀಳುವುದಿದ್ದರೆ:—**

ಮಣಿಮಂದಾರದ ಬೀಜ ಪಚ್ಚೆ ಹೆಸರು, ತಗತ್ತೆ ಬೀಜ, ನಿಂಬೆ ಹುಳಿಯ ಬೀಜ ಇವುಗಳೊಂದೊಂದನ್ನು ಅರ್ಧ ತೊಲೆಯಂತೆ ಸೇರಿಸಿ ಚೂರ್ಣ ಮಾಡಿ ಇಂಗಳೀಕಸರದ ರಸವನ್ನೂ ನುಗ್ಗೆಸೊಪ್ಪಿನ ರಸವನ್ನೂ ತೆಂಗಿನಕಾಯಿ ತನಿ ಹಾಲನ್ನೂ ಸಮಪಾಲಾಗಿ ಸೇರಿಸಿ ಆ ಚೂರ್ಣವನ್ನು ಇದರಲ್ಲರೆದು ತಲೆಗೆ ಹಾಕಿ ಒಂದು ಜಾವದ ನಂತರ ಮಿಂಯುವುದು—ಹೀಗೆ ತಲೆಗೆ ಹಾಕಿದ ನಂತರ ಒಂಭತ್ತು ದಿನ ಬಿಡದೆ ಎಳ್ಳೆಣ್ಣೆ ಹಾಕಿ ನೆಲಚ್ಚಾರೆ (ಭೂಮಿಬಲಾ, ವಳುಪ್ಪುತ್ತಾಳಿ) ಗಿಡದ ಗೊಂಪಿನಿಂದ ಚೆನ್ನಾಗಿ ತಲೆಯನ್ನು ತಿಕ್ಕಿ ತೊಳೆದು ಮಿಂಯುವುದು. ಇದರಿಂದ ಕ್ರಿಮಿಕುಲವೇ ನಾಶವಾಗಿ ಕೂದಲು ಸೊಂಪಾಗಿ ಬೆಳೆಯುವುದು.

ಗರಗದ ರಸ ನಾಲ್ಕು ಪಾಲು ಎಳ್ಳೆಣ್ಣೆ ಒಂದು ಪಾಲು ಎಣ್ಣೆಯ ಎಂಟನೆಯೊಂದು ಪಾಲು ಆನೆಯ ದಂತವನ್ನು ಕರಿಮಾಡಿ ಕಲ್ಕ ಸೇರಿಸಿ ಎಣ್ಣೆ ಕಾಯಿಸಿ ಈ ಎಣ್ಣೆಯನ್ನು ವಾರಕ್ಕೊಂದು ಸಲ ತಲೆಗೆ ಹಾಕುತ್ತಿದ್ದರೆ ಕೂದಲು ಸಮೃದ್ಧವಾಗಿ ಬೆಳೆಯುವುದು.

**ಇಂದ್ರಲುಪ್ತಕಕ್ಕೆ:** (ಅಲ್ಲಲ್ಲಿ ಕೂದಲು ಉದುರಿ ಪುನಃ ಬಾರದೇಯಿರುವುದು.)

ಆನೆಯ ದಂತದ ಮಸಿಯನ್ನೂ ಕರ್ಪೂರವನ್ನೂ ಅರೆದು ತಲೆಗೆ ಲೇಪಿಸಿದರೆ ಕೂದಲೂ ಪುನಃ ಮೊಳೆಯುವುದು.

ಕಾಡು ಪಟಗೀದ ಎಲೆಯನ್ನು ಅರೆದು ಲೇಪಿಸಿದರೆ ಮೂರೇ ದಿನದಲ್ಲಿ ಗುಣವಾಗುವುದು.

ಕೊರುಂಗು ಮರದ ಬೀಜದ ಪಪ್ಪು. ಚಿತ್ರಮೂಲದ ಬೇರು. ಜಾಜಿ ಮಲ್ಲಿಗೆ ಸೊಪ್ಪು, ಕರವೀರದ ಬೇರು ಇವುಗಳನ್ನು ಸಮಪ್ರಮಾಣದಲ್ಲಿ ತೆಗೆದು ಅರೆದು ಇದರ ನಾಲ್ಕು ಪಾಲು ಎಣ್ಣೆ ಸೇರಿಸಿ ಕಾಯಿಸಿ ಸೋಸಿ ಕೊಂಡು ವ್ಯಾಧಿಯಿದ್ದ ಭಾಗಕ್ಕೆ ಪತ್ರಿದಿನವೂ ಲೇಪಿಸುವುದಲ್ಲದೆ ತಲೆಗೆ ಸ್ನಾನವನ್ನು ಮಾತ್ರ ವಾರಕ್ಕೊಂದು ಸಲ ಮಾಡುವುದು.

ಈಶ್ವರ ಬಳ್ಳಿಯ ಹಸಿಯೆಲೆಯನ್ನು ನೀರು ತಾಗಿಸದೆ ನುಣ್ಣಗೆ ಅರೆದು ವ್ಯಾಧಿ ಭಾಗಕ್ಕೆ ಮೆತ್ತಿದರೆ ಗುಣವಾಗುವುದು.

ಕಾಡುಪಟಗಿಲ ಸೊಪ್ಪಿನ ಸ್ವರಸ ೧ ಗರಗದ ರಸ ೨ ನರ್ವಲಸೊಪ್ಪಿನ ರಸ ೩ ಉನ್ಮತ್ತ ಸೊಪ್ಪಿನ ರಸ ೪ ಇವುಗಳಲ್ಲಿ ಯಾವುದಾದರೂ ಒಂದು ರಸವನ್ನು ವ್ಯಾಧಿ ಭಾಗಕ್ಕೆ ಹಚ್ಚಿದರೆ ಇಂದ್ರಲುಪ್ತಕ ಮತ್ತು ಕೂದಲು ಉದುರುವುದು ಸಹ ಗುಣವಾಗುವುದು.

**ಕೂದಲು ಬೀಳುವ ತಲೆಹುಣ್ಣಿಗೆ:**

ತ್ರಿಫಲೆ, ಕಹಿಬೇವು, ನೆಲಬೇವು, ಅರಸಿನ, ಮರದರಸಿನ, ರಕ್ತಚಂದನ ಇವುಗಳನ್ನು ಸಮಪ್ರಮಾಣದಲ್ಲಿ ತೆಗೆದು ಅರೆದು ನಾಲ್ಕು ಪಾಲು ಎಣ್ಣೆ ಸೇರಿಸಿ ಕಾಯಿಸಿ ಈ ಎಣ್ಣೆಯನ್ನು ಲೇಪಿಸಿದರೆ ಶೀಘ್ರದಲ್ಲಿ ಗುಣವಾಗುವುದು.

**ಹೊಟ್ಟು ಬೀಳುವುದು (ಕಿಟ್ಟ ಹಿಡಿಯುವುದು—ದಾರುಣ)ಇದ್ದರೆ:**

ಮಾವಿನ ಬೀಜದ ಪಪ್ಪುವನ್ನೂ ಅಣಲೆಕಾಯಿಯ ಸಿಪ್ಪೆಯನ್ನೂ ನೊರೆಹಾಲಿನಲ್ಲರೆದು ಲೇಪಿಸಿದರೆ ಕಡಿತ ಸಾಯುವುದು, ಕಿಟ್ಟ ಹಿಡಿಯುವುದು, ಕೂದಲು ಬೀಳುವುದು ಇತ್ಯಾದಿ ಗುಣವಾಗುವುದು.

ಗಸಗಸೆಯನ್ನು ಹಾಲಿನಲ್ಲರೆದು ಲೇಪಿಸಿದರೆ ಚರ್ಮ ಸತ್ತು ಬೀಳುವುದು, ನಿಲ್ಲುವುದರೊಂದಿಗೆ ಕೂದಲು ಬೀಳುವುದೂ ಗುಣವಾಗುವುದು.

ನವಸಾಗರವನ್ನು ಜೇನಿನಲ್ಲರೆದು ಬಹಳ ಸ್ವಲ್ಪ ತೆಗೆದು ತಲೆಗೆ ಹಚ್ಚಿ ನಿಧಾನದಿಂದ ತಿಕ್ಕಿಯಾದ ಮೇಲೆ ಮಿಂಯುವುದು.

ಜಟಾಮಾಂಸಿ ೧ ಕಂಕುಷ್ಠ ೨ ಕರಿಯೆಳ್ಳು ೩ ನನ್ನಾರಿ ೪ ಕಮಲದ ಗಡ್ಡೆ ೫ ಇವುಗಳಲ್ಲಿ ಯಾವುದಾದರೂ ಒಂದನ್ನು ಅರೆದು ಜೇನು ಸೇರಿಸಿ ಜಾಳಿಸಿ ಹಚ್ಚುವುದು.

**ತಲೆಯಲ್ಲಿ ಹೇನು ತುಂಬಿದರೆ:**

ಹುಳಿಮಜ್ಜಿಗೆಯನ್ನು ದಪ್ಪವಾಗಿ ತಲೆಗೆ ಸವರಿ ಬಟ್ಟೆಯನ್ನು ಬಿಗಿದು ಕಟ್ಟಿ ಎರಡು ಜಾವದ ನಂತರ ತೊಳೆದು ಮಿಂಯುವುದು. ಹೀಗೆ ಪ್ರತಿ 15 ದಿನಗಳಿಗೊಂದು ಸರ್ತಿಯಂತೆ ಮೂರು ಸರ್ತಿ ಮಾಡಿದರೆ ಹೇನು ಸಂಪೂರ್ಣ ನಾಶವಾಗುವುದು.

ಕಡು ಕಾರೆಕಾಯಿಯನ್ನು ಅರೆದು ತಲೆಗೆ ದಪ್ಪವಾಗಿ ಹಾಕಿ ಬಟ್ಟೆಯನ್ನು ಬಿಗಿದುಕಟ್ಟಿ ಒಂದು ಜಾವದ ನಂತರ ಮಿಂಯುವುದರಿಂದ ಹೇನುಗಳು ಸಾಯುವುವು.

**ತಲೆಯಲ್ಲಿ ಹೇನು ಮತ್ತು ಹುಣ್ಣುಗಳಾದರೆ:**
ಉನ್ಮತ್ತದೆಲೆಯ ನಾಲ್ಕು ಪಾಲು ರಸಕ್ಕೆ ಒಂದು ಪಾಲು ಸಾಸಿವೆಯೆಣ್ಣೆ ಸೇರಿಸಿ ಮಿತಪಾಕವಾಗಿ ಕಾಯಿಸಿ ಸೋಸಿದ ಎಣ್ಣೆಯನ್ನು ತಲೆಗೆ ಹಚ್ಚಿದರೆ ತಲೆಹೇನು ಚಳಿಹೇನು ಚಿಗುರು (ಚೀರು) ಇತರ ಕ್ರಿಮಿಬಾಧೆ ಹುಳಕ್ಕಡಿ ಹುಣ್ಣು ಇತ್ಯಾದಿ ಗುಣವಾಗುವುದು.

**ಮಕ್ಕಳ ತಲೆಯಲ್ಲಿ ಹೇನು ತುಂಬಿದರೆ:**
ಕಾಳು ಜೀರಿಗೆಯನ್ನು (ಕಾಟು ಜೀರಿಗೆಯನ್ನು) ನಿಂಬೆ ಹುಳಿಯ ರಸ ದಲ್ಲರೆದು ತಲೆಗೆ ಚೆನ್ನಾಗಿ ಸವರಿ ಬಟ್ಟೆ ಬಿಗಿದು ಎರಡು ಮೂರು ಜಾವದ ನಂತರ ಮೀಯುವುದು. ಹದಿನೈದು ದಿನಗಳ ನಂತರ ಮತ್ತೊಂದು ಸಲ ಮದ್ದು ಸವರಿ ಮೀಯುವುದು. ಇದರಿಂದ ಹೇನುಗಳು ಸಂಪೂರ್ಣ ಸತ್ತು ಹೋಗುವುವು.

# ತಲೆಯ ಆರೋಗ್ಯ

**ತಲೆಯಲ್ಲಿ ಹುಣ್ಣು ಹುಳುಕುಗಳಾದರೆ:**

ಹಳೆಯ ಎಳ್ಳಿಂಡಿಯನ್ನೂ ಕೋಳಿಯ ಹಿಕ್ಕೆಯನ್ನೂ ಗೋಮೂತ್ರದಲ್ಲರೆದು ಲೇಪಿಸಿದರೆ ಹುಣ್ಣಾಗಿ ಕೂದಲುದುರುವುದು (ಅರುಂಪಿಕಾ—ರೋಮ ಕೂಪದ ಹುಣ್ಣು) ಗುಣವಾಗುವುದು.

ಕೊಡಗಪ್ಪಾಲರಿಯನ್ನೂ ಇಂದುಪ್ಪನ್ನೂ ಗೋಮೂತ್ರದಲ್ಲರೆದು ಲೇಪಿಸುವುದು.

ಕಹಿಬೇವು, ನೇರಳೆ, ಕಾಚಿ ಇವುಗಳ ಕೆತ್ತೆಯನ್ನು ಗೋಮೂತ್ರದಲ್ಲರೆದು ಲೇಪಿಸಿದರೆ ತಲೆಯ ಎಲ್ಲಾ ತರದ ಹುಣ್ಣು ಗಜ್ಜಿಗಳೂ ಗುಣವಾಗುವವು.

ಆಡಿನ ಹಿಕ್ಕೆಯನ್ನು ಕರಿಮಾಡಿ ತಂಗಳ ತೆಳಿಯಲ್ಲರೆದು ತಲೆಗೆ ಲೇಪಿಸಿದರೆ 'ಅರುಂಪಿಕಾ'ವು ಗುಣವಾಗಿ ಕೂದಲು ಹುಟ್ಟುವುದು.

ಎಂಟು ಕುಡ್ತೆ ನಿಂಬೆ ಹುಳಿಯ ರಸಕ್ಕೆ ಎರಡು ಕುಡ್ತೆ ಎಣ್ಣೆ ಸೇರಿಸಿ ಮೂರು ತೊಲೆ ಕರಿಮೆಣಸನ್ನರೆದು ಕಲ್ಕ ಹಾಕಿ ಕಾಯಿಸಿ ಹದವಾದ ಪಾಕದಲ್ಲಿಳಿಸಿ ಸೋಸಿ ತಣಿದ ಮೇಲೆ ಲೇಪಿಸುವುದು. ಇದರಿಂದ ಹುಣ್ಣು, ಅಸಾಧ್ಯ ತುರಿಕೆ ಇತ್ಯಾದಿ ಗುಣವಾಗಿ ಕೂದಲು ಅಂದವಾಗಿ ಬೆಳೆಯುವುದು.

ಬಿದಿರಿನ ಭಸ್ಮವನ್ನು ಎಣ್ಣೆಯಲ್ಲಿ ಕಲಸಿ ಎಣ್ಣೆಯನ್ನು ಲೇಪಿಸುವುದು.

**ತಲೆಯಲ್ಲಿ ಕುರುವಾದರೆ:**

ಕಟುಕರೋಹಿಣಿಯನ್ನೂ ಕರಿಮೆಣಸನ್ನೂ ಸಮಾಂಶವಾಗಿ ತೆಗೆದು ಗರಗದ ರಸದಲ್ಲರೆದು ಲೇಪಿಸುವುದು.

ಕರಿ ಉನ್ಮತ್ತದ ಸೊಪ್ಪನ್ನರೆದು ಹರಳೆಣ್ಣೆ ಹಾಕಿ ಕುದಿಸಿ ಲೇಪಿಸುವುದು.

**ಶಿರೋವ್ಯಾಧಿಗೆ ತೈಲ:**

ಅಮೃತಬಳ್ಳಿ, ತ್ರಿಫಲ, ಗರಗ, ಜ್ಯೇಷ್ಠಮಧು ಇವುಗಳನ್ನು ಸಮಾಂಶ ತೆಗೆದು ಅರೆದು ಕಲ್ಕ ಮಾಡಿ ಎಳ್ಳೆಣ್ಣೆಯಲ್ಲಿ ಹಾಕಿ ಕಾಯಿಸಿ ಸೋಸಿ ಎಣ್ಣೆ

ಯನ್ನು ತಲೆಗೆ ಹಾಕುವುದರಿಂದ ತಲೆಹುಣ್ಣು ನೋವು ಇತ್ಯಾದಿ ಗುಣವಾಗುವುದು.

**ಶಿರೋರೋಗ ಹರ ಘೃತ:**

ಗರಗದ ರಸಕ್ಕೆ ಸಮಾಂಶ ಆಕಳ ತುಪ್ಪ ಸೇರಿಸಿ ಕರಿಮೆಣಸು, ವಿಶಾಲರಿ, ಜೇಷ್ಠಮಧು, ಕಂಕುಷ್ಠ, ಶುಂಠಿ ಇವುಗಳನ್ನು ಸಮಪಾಲಾಗಿ ತುಪ್ಪದ ನಾಲ್ಕನೇ ಒಂದಂಶದಷ್ಟು ಕಲ್ಕ ಸೇರಿಸಿ ಕಾಯಿಸಿದ ತುಪ್ಪವನ್ನು ನಸ್ಯಮಾಡಿದರೆ ಎಲ್ಲಾ ತರದ ಶಿರೋರೋಗವೂ ಗುಣವಾವುದು.

ಕುಂಕುಮ ಕೇಸರಿಯನ್ನು ತುಪ್ಪದಲ್ಲರೆದು ನಸ್ಯ ಹಾಕುವುದು.

**ತಲೆ ತಿರುಕಕ್ಕೆ:**

ಸಮುದ್ರ ಫಲವನ್ನು ನೆಕ್ಕಿಸೊಪ್ಪಿನ ರಸದಲ್ಲಿ ತೇದು ತಲೆಗೆ ಹಾಕಿದರೆ ತಲೆ ತಿರುಕ ಕಡಿಮೆಯಾಗುವುದು.

**ತಲೆನೋವಿಗೆ:**

ಜೇಡೆಮುಳ್ಳಿನ ಬೇರನ್ನು ಹಾಕಿ ಮದ್ದಿನಗಂಜಿ ಮಾಡಿ ಉಣ್ಣುವುದು. ಮೂರು ದಿನ ಉಂಡರೆ ಅಗ್ನಿ ಮಾಂದ್ಯ ಪಿತ್ತ ಇತ್ಯಾದಿಗಳಿಂದ ಬಂದ ತಲೆ ನೋವು ಗುಣವಾಗುವುದು.

ಕುರಟಿಗೆ ಬೇರನ್ನು ಕಲಗಚ್ಚಿನಲ್ಲರೆದು ಕುದಿಸಿ ಹಣೆಗೆ ಹಚ್ಚಿದರೆ ಗುಣವಾಗುವುದು.

ನನ್ನಾರಿ ಬೇರನ್ನು ಹಸಿನೀರಿನಲ್ಲರೆದು ಹಣೆಗೆ ಹಚ್ಚಿದರೆ ಗುಣವಾಗುವುದು.

**ತಲೆನೋವಿಗೆ ತೈಲ:**

ಕಡಿರಬೇರು, ಹಾಡೆಗಡ್ಡೆ, ಅಮೃತಬಳ್ಳಿ, ಹೆಸರುಧಾನ್ಯ, ಉದ್ದು, ಇವುಗಳನ್ನು ಸಮಾಂಶವಾಗಿ ಸೇರಿಸಿ ಪಾದವಶೇಷ ಕಷಾಯ ಮಾಡಿ ಆರಿಸಿ ಕಷಾಯದಷ್ಟೆ ದನದ ಹಾಲನ್ನೂ ಎಳ್ಳೆಣ್ಣೆಯನ್ನೂ ಪ್ರತ್ಯೇಕವಾಗಿ ಸೇರಿಸಿ ಹದ ಪಾಕವಾಗಿ ಕಾಯಿಸಿ ತಲೆಗೆ ಹಾಕಿ ಮಿಂಯುವುದು. ಹೀಗೆ ನಾಲ್ಕಾರು ಸಲ ಅಭ್ಯಂಗಮಾಡುವುದರಿಂದ ವಾಯುವು ಶಮನವಾಗಿ ತಲೆನೋವು ಪೂರ್ಣ ಗುಣವಾಗುವುದು.

**ಅಸಹ್ಯ ತಲೆನೋವಿಗೆ:**

ಗುಂಜಾಗಾತ್ರದಷ್ಟು ಗೋರೋಚನವನ್ನು ಆಕಳ ತುಪ್ಪದಲ್ಲಿ ಅರೆದು ಕಾಯಿಸಿ ಮೂಗಿಗೆ ನಸ್ಯ ಹಾಕಿದರೆ ಕೂಡಲೆ ಗುಣವಾಗುವುದು.

ತ್ರಿಫಲೆ, ತಗತ್ತೆಬೀಜ, ಕೊಂದೆ ಮರದ ತಿಗುಡು ಇವುಗಳನ್ನು ಎರಡೆರಡು ತೊಲೆ ತೆಗೆದು ಬಿಸಿನೀರಿನಲ್ಲಿ ಅರೆದು ಕುದಿಸಿ ನಡುತಲೆ (ನೆತ್ತಿ)ಗೆ ಹಾಕುವುದು.

**ಸದಾ ಪದೇ ಪದೇ ಬರುವ ತಲೆನೋವಿಗೆ:**

ಗರಗದ ರಸಕ್ಕೆ ಸಮಾಂಶ ಎಳ್ಳೆಣ್ಣೆ ಸೇರಿಸಿ ಜಾಳಿಸಿ ತಲೆಗೆ ಹಾಕಿದರೆ ಶೀಘ್ರದಲ್ಲಿ ಗುಣವಾಗುವುದು.

**ತಲೆಯು ಸಿಡಿತಕ್ಕೆ:**

ನಿಂಬೆ ಹಣ್ಣಿನ ರಸದಲ್ಲಿ ಕವಡೆಯನ್ನು ತೇದು ಸಿಡಿತವಿದ್ದ ಭಾಗಕ್ಕೆ ಲೇಪಿಸಿದರೆ ಕೂಡಲೇ ಗುಣವಾಗುವುದು.

**ಒರ್ಕೆಣ್ಣಿಯು ಸಿಡಿತಕ್ಕೆ:**

ಕರಿ ಉನ್ಮತ್ತ (ಕೃಷ್ಣಧತ್ತೂರ)ದ ಸೊಪ್ಪಿನ ರಸವನ್ನು ಮೂರು ದಿನ ಪ್ರಾತಃಕಾಲ ಕಡೆಗಣ್ಣಿಗೆ ಎರಡೆರಡು ಬಿಂದು ಹಾಕುವುದು.

ಒಂದೊಂದು ಪಾಲು ನರುವಳ ಬೀಜದ ಪಪ್ಪು (ಬೊಂಡು)ವನ್ನೂ, ಕರಿಮೆಣಸನ್ನೂ ತೆಗೆದು ಎರಡು ಪಾಲು ಕರಿನೆಕ್ಕಿಯೆಲೆಯನ್ನೂ ಸೇರಿಸಿ ಮೊಲೆ ಹಾಲಿನಲ್ಲರೆದು ನಸ್ಯಹಾಕಿದರೆ ಕೂಡಲೆ ಗುಣವಾಗುವುದು.

ನುಗ್ಗಿ ಸೊಪ್ಪನ್ನು ಜಜ್ಜಿ ತುಪ್ಪ ಹಾಕಿ ಕಾಯಿಸಿ ಆ ತುಪ್ಪವನ್ನು ನಸ್ಯ ಹಾಕುವುದು.

ಅಗಸೆ ಹೂವಿನ ರಸವನ್ನು ೪ ಯಾ ೬ ಬಿಂದು ಸಿಡಿಯುವ ವಿರುದ್ಧ ಭಾಗದ ಮೂಗಿನ ಸೊಳ್ಳೆಯಲ್ಲಿ ಹಾಕಿದರೆ ಕಫವು ಹೋಗಿ ಸಿಡಿತವು ಗುಣವಾಗುವುದು.

ತುಂಬೆ ಗಿಡದ ರಸ, ಬೆಳ್ಳುಳ್ಳಿಯ ರಸ, ಶುಂಠಿಯನ್ನು ನೀರಿನಲ್ಲಿ ತೇದು ಬೆಲ್ಲ ಹಾಕಿ ಅದರ ರಸ, ಈಶ್ವರ ಬಳ್ಳಿಯನ್ನು ನೀರಿನಲ್ಲಿ ತೇದು ಮಾಡಿದ ರಸ, ಎಳ್ಳೆಣ್ಣೆಯಲ್ಲಿ ಯಾ ತೆಂಗಿನೆಣ್ಣೆಯಲ್ಲಿ ತೇದ ಉತ್ತರಣೆಯ ರಸ, ಬಿಳಿಶಂಖ ಪುಷ್ಪದ ಬೇರನ್ನು ನೀರಿನಲ್ಲಿ ತೇದ ರಸ—ಇವುಗಳಲ್ಲಿ ಯಾವುದಾದರೊಂದು ರಸವನ್ನು ಮೂರು ದಿನ ಬೆಳಗ್ಗೆ ನಸ್ಯ ಹಾಕುವುದು.

**ಪಿತ್ತದ ತಲೆಪ್ರಾಸಿಯಿಂದ ಬರುವ ಅತಿ ತಲೆನೋವಿಗೆ:**

ಒಂದೊಂದು ಹಿಡಿ ಅಡಿಕೆ ಮರದ ಎಳೆಹಿಂಗಾರವನ್ನೂ ಗರಿಕೆಹುಲ್ಲಿನ ಎಳೆ ಚಿಗುರನ್ನೂ ತೆಗೆದು ಸಣ್ಣದಾಗಿ ಕತ್ತರಿಸಿ ಸ್ವಲ್ಪ ಜೀರಿಗೆ ಸೇರಿಸಿ ಆಕಳ ಹಾಲಿನಲ್ಲಿ ಬೇಯಿಸಿ ನುಣ್ಣಗೆ ಅರೆದು ಆಕಳ ನೊರೆಹಾಲಿನಲ್ಲೇ ಕದಡಿ ಒಂದು ತೊಲೆ ಸಕ್ಕರೆ ಹಾಕಿ ಸೇವಿಸುವುದು. (ಮೂರು ದಿನ)

**ಅರೆ ತಲೆನೋವಿಗೆ:**

ಬಿಳಿ ಶಂಖಪುಷ್ಪದ ಬೇರನ್ನು ನೀರಿನಲ್ಲಿ ತೇದು ಪ್ರಾತಃಕಾಲ ಕಣ್ಣಿಗೆ ಅಂಜನ ಹಾಕಿದರೆ ಗುಣವಾಗುವುದು.

ಗದ್ದೆ ಕರಂಡೆಯ ಸ್ವರಸವನ್ನು ಬಿಸಿಮಾಡಿ ಎರೆಡು ತೊಲೆ ರಸಕ್ಕೆ ಒಂದು ತೊಲೆ ಕರಿಮೆಣಸಿನ ಚೂರ್ಣ ಹಾಕಿ ಒಂದು ವಾರ ಪ್ರತಿದಿನ ಬೆಳಗ್ಗೆ ಸೇವಿಸುವುದು. ಪಥ್ಯ ಚಪ್ಪೆ ಆಹಾರ, ಬ್ರಹ್ಮಚರ್ಯ ಪಾಲನೆ ಇತ್ಯಾದಿ.

**ಸೂರ್ಯಾವರ್ತ (ಒರ್ಕೆನ್ನಿಯ ಭೇದ)ವಾದರೆ:**

ಗರಗದ ರಸಕ್ಕೆ ಆಡಿನ ಹಾಲನ್ನೂ ಸೇರಿಸಿ ಬಿಸಿಲಿನಲ್ಲಿ ಬಿಸಿಮಾಡಿ ತೆಗೆದು ಮೂಗಿಗೆ ನಸ್ಯ ಹಾಕಿದರೆ ಗುಣವಾಗುವುದು.

ಕುಂಕುಮ ಕೇಸರಿಯನ್ನೂ ಕಲ್ಲು ಸಕ್ಕರೆಯನ್ನೂ ಸಮಾಂಶವಾಗಿ ಸೇರಿಸಿ ತುಪ್ಪದಲ್ಲರೆದು ಮೂರು ಯಾ ಆರು ದಿನ ನಸ್ಯ ಹಾಕುವುದು.

**ತಲೆಪ್ರಾಸಿಗೆ ತೈಲ:**

ಕಾಚಿಕೆತ್ತೆ, ಪಾಲೆಕೆತ್ತೆ, ಕೂರಾಂಬಿಲ ಸೊಪ್ಪು, ಇಟ್ಟೋವಿನ (ಇಬ್ಬನೆ) ಚಿಗುರು, ಕಿಸ್ಕಾರ ಹೂ, ಕಾಡುಹಿಪ್ಪಲಿ ಸೊಪ್ಪು, ಪಂಚಬಳ್ಳಿ ವೀಳ್ಯದೆಲೆ, ಬಿಲ್ವಪತ್ರೆ ಸೊಪ್ಪು ಇವುಗಳನ್ನು ಸಮತೂಕವಾಗಿ ಸೇರಿಸಿ ಜಜ್ಜಿ ಒಂದು ಬಾಟ್ಲಿ ರಸ ತೆಗೆಯುವುದು. ಒಂದು ಬಾಟ್ಲಿ, ಹಣ್ಣಡಿಕೆ ಸಿಪ್ಪೆಯ ರಸ ಎರಡು ಬಾಟ್ಲಿ ತೆಂಗಿನಕಾಯಿಯ ತನಿಹಾಲು, ಒಂದು ಬಾಟ್ಲಿ ಎಳ್ಳೆಣ್ಣೆ ಇವುಗಳನ್ನು ತಯಾರಿಸಿ ಏಲಕ್ಕಿ, ಲವಂಗ, ಹಿಪ್ಪಲಿ, ಕರಿಜೀರಿಗೆ, ಜ್ಯೇಷ್ಠಮಧು ಇವನ್ನು ಪ್ರತಿಯೊಂದು ಒಂದೊಂದು ತೊಲೆಯಂತೆ ತೆಗೆದು ಮೇಲಿನ ರಸದಲ್ಲಿ ಅರೆದು ಕಲ್ಕಸೇರಿಸಿ ಎಣ್ಣೆ ಕಾಯಿಸಿ ಮಿತಪಾಕವಾಗಿ ಇಳಿಸಿ ತಣಿಸಿ ತಲೆಗೆ ಹಾಕುವುದು. ಇದರಿಂದ ತಲೆಕೂದಲು ಉದುರುವಿಕೆ, ಬಾಯಿವಾಸನೆ.

ಹಲ್ಲಿನೆಡೆಯಲ್ಲಿ ರಕ್ತ, ಕೀವು ಬರುವುದು, ಶೀತ, ನೆಗಡಿ, ಕಿವಿ, ಕೀವು, ಇತ್ಯಾದಿ ತಲಪ್ಪಾಸಿ ರೋಗಗಳು ಗುಣವಾಗುವುವು.

ಗುರುಗುಂಜಿ ಸೊಪ್ಪಿನ ರಸ, ಸೂರ್ಯಕಾಂತಿ ಹೂವಿನ ರಸ ದಾಸವಾಳ ಹೂವಿನ ರಸ, ಗರಗದ ರಸ, ನೆಲ್ಲಿ ಬಂದಳಿಕೆಯ ರಸ, ಇವುಗಳನ್ನು ಸಮಾಂಶವಾಗಿ ಸೇರಿಸಿ ಒಟ್ಟು ರಸಗಳ ಅರ್ಧಾಂಶದಷ್ಟು ಎಣ್ಣೆ ಸೇರಿಸಿ ಎಣ್ಣೆಯ ನಾಲ್ಕು ಪಾಲು ಪಾದಾವಶೇಷ ತ್ರಿಫಲೆ ಕಷಾಯವನ್ನೂ ಎಣ್ಣೆಯ ಸಮಪಾಲು ದನದ ಹಾಲನ್ನೂ ಸೇರಿಸುವುದು. ಅನಂತರ ರಸಕ್ಕೆ ಮೊದಲು ಹೇಳಿದ ಮದ್ದನ್ನು ಸಮಾಂಶವಾಗಿ ಎಣ್ಣೆಯ ಎಂಟನೆ ಒಂದಂಶದಷ್ಟು ತೆಗೆದು ಅರೆದು ಕಲ್ಕ ಸೇರಿಸಿ ೧೨ ತೊಲೆ ಮಂಡೂರ ಚೂರ್ಣ (ಕಬ್ಬಿಣದ ಕಿಟ್ಟದ ಭಸ್ಮ) ಹಾಕಿ ಮಿತಪಾಕವಾಗಿ ಕಾಯಿಸಿ ಸೋಸಿ ತಲೆಗೆ ಹಾಕುವುದು. ಇದರಿಂದ ಕೂದಲು ಉದುರುವಿಕೆ, ನೆತ್ತಿ ಬಿಸಿಯಾಗುವುದು ಮುಂತಾದ ತಲೆಪ್ಪಾಸಿ ರೋಗಗಳು ಗುಣವಾಗುವುವು.

**ತಲೆಪ್ಪಾಸಿ ಮತ್ತು ಒರ್ಕೆನ್ನಿಗೆ ತೈಲ:**

ಹಣ್ಣಡಕೆಯ ಮೇಲಿನ ಕೆಂಪು ಸಿಪ್ಪೆಯನ್ನು ತೆಗೆದು ಈ ಸಿಪ್ಪೆಯ ರಸ ಅರ್ಧ ಕುಡ್ತೆ, ಗರಿಕೆಹುಲಿನ ರಸ ಅರ್ಧ ಕುಡ್ತೆ. ಗರಗದ ರಸ ಅರ್ಧ ಕುಡ್ತೆ, ಹಸಿನೆಲ್ಲಿ ಕಾಯಿಯ ರಸ ಕಾಲು ಕುಡ್ತೆ, ತೆಂಗಿನೆಣ್ಣೆ ಒಂದು ಕುಡ್ತೆ, ಎಳ್ಳೆಣ್ಣೆ ಒಂದು ಕುಡ್ತೆ, ದನದ ಹಾಲು ಆರು ಕುಡ್ತೆ ಇವುಗಳನ್ನೊಟ್ಟು ಸೇರಿಸಿ ಕಾಯಿಸಿ ಕಲ್ಕವು ಮಡ್ಡಿಪಾಕವಾಗುವಾಗ ಇಕ್ಕೋಳಿಸಂದ ರಸವನ್ನು ಅರ್ಧ ಕುಡ್ತೆ ಸೇರಿಸಿ ಕಾಯಿಸಿ ಮಿತಪಾಕದಲ್ಲಿಳಿಸಿ ಕಾಲು ತೊಲೆ ಜೀರಿಗೆಯ ಚೂರ್ಣವನ್ನೂ ಮಂಜಟ್ಟಿ ತೂಕ ಗೋರೋಜನವನ್ನೂ ಎರಡಾಣೆ ತೂಕ ಕುಂಕುಮ ಕೇಸರಿಯನ್ನೂ ಪಾತ್ರಪಾಕಕ್ಕೆ ಹಾಕಿ ಅರಿಸಿ ಇಟ್ಟುಕೊಂಡು ಈ ತೈಲದಿಂದ ಅಭ್ಯಂಗ ಸ್ನಾನ ಮಾಡಿದರೆ ತಲೆಪ್ಪಾಸಿ ಹಾಗೂ ಒರ್ಕೆನ್ನಿ ಗುಣವಾಗುವುದು.

**ಬುದ್ಧಿಯು ಮಂಕಾದರೆ:**

ಗಜಿಗೆಯ ಸೊಪ್ಪಿನ ರಸದಲ್ಲಿ ಶುಂಠಿಯನ್ನು ತೇದು ನಸ್ಯ ಹಾಕಿದರೆ ಬುದ್ಧಿಯ ಮಂಕುತನ ಹೋಗುವುದು.

**ಬುದ್ಧಿಯು ಮಂದವಾದರೆ:**

ಭಜೆಯನ್ನೂ ನೆಲ್ಲಿಚಟ್ಟನ್ನೂ ಸಮಾಂಶ ತೆಗೆದು ವಸ್ತ್ರಗಾಳಿತ

ಚೂರ್ಣ ಮಾಡಿ ಅರ್ಧ ತೊಲೆ ಚೂರ್ಣಕ್ಕೆ ಅಷ್ಟೇ ಸಕ್ಕರೆ ಸೇರಿಸಿ ಜೇನಿನಲ್ಲಿ ಕಲಸಿ ಹನ್ನೆರಡು ದಿನ ಬೆಳಿಗ್ಗೆ ಸೇವಿಸುವುದು.

**ಮಕ್ಕಳ ಮೆದುಳು ಬಿಸಿಯಾದರೆ:**

ಎರಡು ಕುಡ್ತೆ ಬಿಲ್ವಪತ್ರೆಯ ರಸಕ್ಕೆ ಒಂದೊಂದು ಕುಡ್ತೆ ಎಳ್ಳೆಣ್ಣೆಯನ್ನು ತೆಂಗಿನ ಕಾಯಿಯ ತನಿಹಾಲನ್ನೂ ಸೇರಿಸಿ ಜೇಷ್ಠ ಮಧುವನ್ನೂ ರಕ್ತಚಂದನವನ್ನೂ ಪ್ರತಿಯೊಂದು ಮುಕ್ಕಾಲು ತೊಲೆಯಂತೆ ತೆಗೆದು ಅರೆದು ಕಲ್ಕಸೇರಿಸಿ ಮೃದುಪಾಕವಾಗಿ ಕಾಯಿಸಿ ಸೋಸಿ ತಲೆಗೆ ಹಾಕಿದರೆ ನೆಮ್ಮದಿಯಾಗಿ ಜ್ಞಾಪಕಶಕ್ತಿ ಹೆಚ್ಚುವುದು. ಮೆದುಳು ವೃದ್ಧಿಯಾಗಿ ಬುದ್ಧಿಯು ಚುರುಕಾಗುವುದು.

**ಮಕ್ಕಳ ತಲೆಗೆ ಉತ್ತಮ ತೈಲ:**

ಗರಿಕೆ ಹುಲ್ಲಿನ ರಸ, ಅಮೃತ ಬಳ್ಳಿಯ ರಸ, ತೆಂಗಿನೆಣ್ಣೆ, ಆಕಳ ಹಾಲು ಇವುಗಳನ್ನು ಸಮಾಂಶವಾಗಿ ಸೇರಿಸಿ ಎಣ್ಣೆಯ ಎಂಟನೆ ಒಂದಂಶದಷ್ಟು ಜ್ಯೇಷ್ಠ ಮಧು, ಇರುವೇಲಿ, ಭದ್ರಮುಷ್ಠಿಗಳನು ಮೇಲಿನ ರಸದಲ್ಲರೆದು ಕಲ್ಕ ಸೇರಿಸಿ ಬಾಲಪಾಕದಲ್ಲಿಳಿಸಿ ಸೋಸಿ ಅಭ್ಯಂಗಸ್ನಾನವನ್ನು ಮಾಡಿಸುವುದು. ಇದರಿಂದ ಎಲ್ಲಾ ತರದ ರಕ್ತದೋಷ, ಕೆಂಪು, ತುರಿಗಜ್ಜಿ ಇತ್ಯಾದಿಗಳು ಗುಣವಾಗುವುವು.

**ಮಕ್ಕಳ ಶಿರೋವ್ಯಾಧಿಗೆ:**

ಕರಿ ತುಳಸಿಯ ರಸ, ಗರಗದ ರಸ, ಬಿಲ್ವಪತ್ರೆಯ ರಸ, ಎಳ್ಳೆಣ್ಣೆ ಇವುಗಳನ್ನು ಸಮಾಂಶವಾಗಿ ಸೇರಿಸಿ ಎಣ್ಣೆಯ ನಾಲ್ಕನೆಯೊಂದಂಶದಷ್ಟು ಕಂಕುಷ್ಠ, ಕಟುಕರೋಹಿಣಿ, ಜೀರಿಗೆಗಳನ್ನು ಸಮಾಂಶ ತೂಕ ತೆಗೆದು ಮೇಲಿನ ರಸದಲ್ಲರೆದು ಸೇರಿಸಿ ಮೃದುಪಾಕದಲ್ಲಿಳಿಸಿ ಸೋಸಿ ನೆತ್ತಿಗೆ ಹಚಿದರೆ ತಲೆಯುಷ್ಣ, ಕಣ್ಣಿನಲ್ಲಿ ನೀರಿಳಿಯುವಿಕೆ, ಕಿವಿಸೋರುವಿಕೆ ಇತ್ಯಾದಿ ಗುಣವಾಗುವುದು.

**ಮಕ್ಕಳ ತಲೆಯಲ್ಲಿ ಹುಣ್ಣಾದರೆ:**

ಅಮೃತ ಬಳ್ಳಿಯ ರಸ, ಗರಿಕೆಹುಲ್ಲಿನ ರಸ, ಕೊಬ್ಬರಿಯೆಣ್ಣೆ ಇವುಗಳನ್ನು ಎರಡೆರಡು ಕುಡ್ತೆಯಂತೆ ಸೇರಿಸಿ ಶ್ರೀಗಂಧ, ಇರುವೇಲಿ, ರಾಮಚ,

ಎರಟಿ ಮಧುರ ಇವುಗಳನ್ನು ಪ್ರತ್ಯೇಕ ಮುಕ್ಕಾಲು ತೊಲೆಯಂತೆ ತೆಗೆದು ಮೇಲಿನ ರಸದಲ್ಲರೆದು ಕಲ್ಕ ಹಾಕಿ ಮುಳಲುಪಾಕದಲ್ಲಿಳಿಸಿ ಹುಣ್ಣಿಗೆ ಲೇಪಿಸಿದರೆ ಶೀಘ್ರ ಗುಣವಾಗುವುದು.

ಉನ್ಮತ್ತದ ಎಲೆ, ಪಂಚಬಳ್ಳಿಯೆಲೆ, ತುಳಸಿಯೆಲೆ, ಪುಜಂಗರಿ ಇವುಗಳನ್ನು ಸಮಪ್ರಮಾಣದಲ್ಲಿ ತೆಗೆದು ತುಪ್ಪದಲ್ಲಿ ಹುರಿದು ಕರಕು ಆಗುವಾಗ (ಕೊಳಂಬಿನಂತೆ) ಅರೆದು ಲೇಪಿಸುವುದು ಇದರಿಂದ ಚಿಲಂದಿ ಹುಣ್ಣು ತುರಿಗಜ್ಜಿ ನೀರುಹುಣ್ಣು ಇತ್ಯಾದಿ ಗುಣವಾಗುವುದು.

ರಕ್ತಚಂದನ ಎರಟಿ ಮಧುರ ಅಣಿಲೆಕಾಯಿ ಇವುಗಳನ್ನು ನೀರಿನಲ್ಲರೆದು ಬಿಸಿಮಾಡಿ ತುಪ್ಪಹಾಕಿ ಜಾಳಿಸಿ ಲೇಪಿಸುವುದು. ಕೆಂಪು ಹುಣ್ಣಾದರೆ ಬೆಣ್ಣೆಯಲ್ಲರೆದು ಜಾಳಿಸಿ ಲೇಪಿಸುವುದು.

ಬಂದದನಾರಿನ ಎಲೆಯನ್ನು ನೀರಿನಲ್ಲಿ ಕಿವಿಚಿ ಮೂರು ದಿನ ತಲೆಗೆ ತಿಕ್ಕುವುದು. ಇದರಿಂದ ಮಕ್ಕಳ ತಲೆಯುರಿ, ಶೀತ, ಹುಣ್ಣುಗಳು ಗುಣವಾಗುವುದು.

ನನ್ನಾರಿ, ಐತ್ರಬಳ್ಳಿ, ಜೇಷ್ಠಮಧು, ರಾಮಚ್ಚ ಇವುಗಳನ್ನು ತೆಂಗಿನ ಕಾಯಿಯ ತನಿಹಾಲಿನಲ್ಲರೆದು ತಲೆಗೆ ಹಚ್ಚುವುದು. ಮತ್ತು ನಾಲ್ಕು ಮರದ ಕೆತ್ತೆಯ ಕಷಾಯದಲ್ಲಿ ಮೀಯುವುದು. ಇದರಿಂದ ಮಕ್ಕಳ ಹಾಗೂ ದೊಡ್ಡವರ ತಲೆಯಲ್ಲಿ ಆದ ಹುಣ್ಣು ಕಜ್ಜುಗಳು ಗುಣವಾಗುವುವು.

**ಮಕ್ಕಳ ಪಿಂದಲೆ (ಹೆಡತಲೆ) ಬಾತುಹೋದರೆ:**

ಸಣ್ಣ ಕರುವಿನ ಬಿಳಿ ಸೆಗಣಿಗೆ ಆಕಳ ಬೆಣ್ಣೆ ಸೇರಿಸಿ ಹರಳ ಎಲೆಯಲ್ಲಿ ಮೆತ್ತಿ ಬಾವಿನ ಮೇಲೆ ಇರಿಸಿದರೆ ಗುಣವಾಗುವುದು.

# ದಂತದ ಆರೋಗ್ಯ

**ಹಲ್ಲು ನೋವಿಗೆ:**

ಅಡುಸೋಗೆಯೆಲೆಯ ಅಥವಾ ಬೇರಿನ ಕಷಾಯದಲ್ಲಿ ಪದೇ ಪದೇ ಬಾಯಿ ಕವಳಿಸಿದರೆ ಗುಣವಾಗುವುದು.

ನೆಲಗುಳ್ಳದ ಬೇರನ್ನೂ ಹಸಿಯರಸಿನವನ್ನೂ ಅರೆದು ಎಣ್ಣೆಯಲ್ಲಿ ಹಾಕಿ ಕಾಯಿಸಿ ಆರಿಸಿ ಆ ಎಣ್ಣೆಯಲ್ಲಿ ಬಾಯಿ ಮುಕ್ಕಳಿಸುವುದು.

ಎಕ್ಕೆಯ ಚಿಗುರನ್ನು ಕೆಂಡದಲ್ಲಿ ಹಾಕಿ ಓಟೆ ಹಿಡಿದು ಆ ಹೊಗೆಯನ್ನು ಹಲ್ಲಿಗೆ ತಾಗಿಸುವುದು.

ಬಿಲ್ವಪತ್ರೆಯ ಬೇರನ್ನು ನೀರಿನಲ್ಲಿ ಯಾ ಮಜ್ಜಿಗೆಯಲ್ಲಿ ತೇದು ಬಾಯಿ ಮುಕ್ಕಳಿಸಿದರೆ ಹಲ್ಲು ನೋವು ಸೆಳೆತಗಳು ಗುಣವಾಗುವುವು.

ಮಾವಿನ ಚಿಗುರನ್ನೂ ಸಾಸಿವೆ ಕಾಳನ್ನೂ ಸಮಪ್ರಮಾಣ ತೆಗೆದು ಅರೆದು ಎಳ್ಳೆಣ್ಣೆಯಲ್ಲಿ ಕಲಸಿ ಲೇಪಿಸಿದರೆ ಎಲ್ಲಾ ತರದ ಹಲ್ಲುನೋವು ನಿದಿ ಹುಣ್ಣು ಕೂಡ ಗುಣವಾಗುವುದು.

ಕೂರಂಬಿಲ ಸೊಪ್ಪಿನ ಕಲ್ಕ ಹಾಕಿ ಎಣ್ಣೆ ಕಾಯಿಸಿ ತಲೆಗೆ ಹಾಕುವುದು.

ರೆಂಜೆ ಕಿತ್ತೆಯ ಕಷಾಯ, ಬಂದದ ನಾರಿನ ಕಷಾಯ, ಕೊಡಸಿಗೆ ಬೇರಿನ ಕಷಾಯ, ಅಡಿಕೆ ಮತ್ತು ತೆಂಗಿನ ಮರದ ಬೇರಿನ ಕಷಾಯ, ಗುಳ್ಳದ ಬೇರು ಅರಸಿನ ಗಡ್ಡೆಗಳ ಕಷಾಯ, ಶುದ್ಧಿ ಮಾಡಿದ ಚಿತ್ರಮೂಲದ ಬೇರು ಮತ್ತು ಗುಳ್ಳದ ಬೇರುಗಳ ಕಷಾಯ, ಇವುಗಳಲ್ಲಿ ಯಾವುದಾದರೂ ಒಂದು ಕಷಾಯಕ್ಕೆ ಉಪ್ಪು ಹಾಕಿ ಆಗಾಗ ಬಾಯಿ ಮುಕ್ಕಳಿಸುವುದು.

ಮೇಲಿನ ಕಷಾಯಗಳಲ್ಲಿ ಯಾವುದಾದರೊಂದನ್ನು ತಯಾರಿಸಿ ಬಿಸಿ ಬಿಸಿಯಾಗಿ ತಂಬಿಗೆಯಲ್ಲರೆದು ಅದಕ್ಕೆ ತೂತಿರುವ ಒಂದು ಗೆರಟೆಯನ್ನು ಮುಚ್ಚಿ ಅದರ ತೂತಿನಿಂದ ಬರುವ ಸೆಕೆಯನ್ನು ಹಲ್ಲಿಗೆ ಹಿಡಿಯುವುದು. ಇದರಿಂದ ಹಲ್ಲಿನ ಕೀವು, ನೋವು, ನಿದಿಹುಣ್ಣು ಇತ್ಯಾದಿ ಗುಣವಾಗುವುದು.

ಪಟಿಕ್ಕಾರವನ್ನು ಅರಳು ಮಾಡಿ ನೀರಿನಲ್ಲಿ ಕದಡಿ ಬಾಯಿ ಮುಕ್ಕುಳಿಸುವುದು.

ನೀಲಿ ಬೇರನ್ನರೆದು ಅದರ ನೀರಲ್ಲಿ ಬಾಯಿ ಮುಕ್ಕಳಿಸುವುದು.

**ಕಠಿಣವಾದ ಹಲ್ಲು ನೋವಿಗೆ:**

ಲಂಜೆಯ ಬೀಜವನ್ನು ಜಜ್ಜಿ ನೋವಾದ ಹಲ್ಲಿನಲ್ಲಿರಿಸಿ ದುಷ್ಟ ನೀರನ್ನು ಉಗುಳುತ್ತಿದ್ದರೆ ಒಂದು ಘಂಟೆಯೊಳಗೆ ಗುಣವಾಗುವದು.

**ಬೋಡು ಹುಣ್ಣಾಗಿ ಬಂದ ಹಲ್ಲು ನೋವಿಗೆ:**

ಕರಿಜಾಲಿ ಕೆತ್ತೆಯ ಕಷಾಯ ಮತ್ತು ಪಟಿಕ್ಕಾರ ಹಾಕಿ ಬಾಯಿ ಮುಕ್ಕುಳಿಸಿದರೆ ಗುಣವಾಗುವುದು.

ನಿಂಬೆಯ ರಸದಲ್ಲಿ ಜೇನು ಸುಣ್ಣ ಬೆಲ್ಲಗಳನ್ನು ಹಾಕಿ ಕಲಸಿ ಹಚ್ಚಿದರೆ ಬೋಡಿನಲ್ಲಾದ ಕುರ, ನೋವು, ಕೀವು ಇತ್ಯಾದಿ ಗುಣವಾಗುವುದು.

**ಹಲ್ಲು ಸೆಳಿತಕ್ಕೆ:**

ಎಣ್ಣೆಯಲ್ಲಿ ನೆನೆಸಿದ ಚಿಂದಿ ಬಟ್ಟೆಯಲ್ಲಿ ಅರಸಿನ ಹುಡಿಯನ್ನು ಹಾಕಿ ಬತ್ತಿ ಮಾಡಿ ಹೊತ್ತಿಸಿ ಅದರ ಹೊಗೆಯನ್ನು ಸೆಳಿತವಿರುವ ಹಲ್ಲಿಗೆ ಒಡ್ಡಿದರೆ ಕೀವು ಹಾಗೂ ನೀರು ಸೋರಿ ಕೂಡಲೇ ಗುಣವಾಗುವುದು.

ಎಕ್ಕೆಗಿಡದ ಒಣಕೋಲನ್ನು ಹೊತ್ತಿಸಿ ಹೊಗೆಯನ್ನು ಸೇದುವುದು

ಹಾಗಲ ಸೊಪ್ಪನ್ನು ಒಣಗಿಸಿ ಬೀಡಿಯಂತೆ ಸೇದುವುದರಿಂದ ತತ್ಕಾಲ ಗುಣಸಿಗುವುದು. ಪದೇ ಪದೇ ಹೊಗೆ ಸೇದುವುದು ಹಿತಕರವಲ್ಲ.

ಶುಂಠಿ ಇಂದುಪ್ಪುಗಳನ್ನು ಜಜ್ಜಿ ಹಲ್ಲಿನಲ್ಲಿರಿಸಿದರೆ ಅಥವಾ ಕಷಾಯ ಮಾಡಿ ಬಾಯಿ ಮುಕ್ಕುಳಿಸಿದರೆ ಬಾವು, ಕೀವು, ನೋವು ಇತ್ಯಾದಿ ಗುಣವಾಗುವುದು.

ಉಪ್ಪು ಮತ್ತು ಬೆಳ್ಳುಳ್ಳಿಯನ್ನು ಅಥವಾ ಕರಿಮೆಣಸಿನ ಬೇರೊಂದನ್ನು ಮಾತ್ರ ಜಜ್ಜಿ ಹಲ್ಲಿಗೆ ಇಡುವುದು.

ವಿ.ಸೂ:—ಮದ್ದು ಕವುಳು ನಾಲಿಗೆಗೆ ತಾಗಿ ಚರ್ಮ ಸುಟ್ಟು ಹೋಗದಂತೆ ಎಚ್ಚರವಿರಲಿ.

ಶರಪುಂಖದ ಬೇರನ್ನೂ, ಅದರ ಮೂರನೆಯೊಂದಂಶ ಕರಿಮೆಣಸಿನ ಬೇರನ್ನೂ ಸೇರಿಸಿ ಪಾದಾವಶೇಷ ಕಷಾಯ ಮಾಡಿ ಬೆಳಗ್ಗೆ ಎದ್ದೊಡನೆ ಬಾಯಿಯಲ್ಲಿ ಹಾಕಿ ಚೆನ್ನಾಗಿ ಮುಕ್ಕಳಿಸಿ ಉಗುಳಿದರೆ ಅದರಲ್ಲೆ ಕ್ರಿಮಿಯು ಬಿದ್ದು ಹೋಗುವುದು. ಅಥವಾ

ಈ ಮೇಲಿನ ಮದ್ದನ್ನು ಹಾಕಿ ಕಾಯಿಸಿದ ಎಣ್ಣೆಯನ್ನು ತಲೆಗೆ ಹಚ್ಚಿದರೂ ಕ್ರಿಮಿಗಳು ಮಾಯವಾಗುವುವು.

ಉನ್ಮತ್ತದ ಬೀಜವನ್ನು ಅರೆದು ಗುಂಜಾ ಪ್ರಮಾಣದ ಮಾತ್ರೆ ಮಾಡಿ ನೋವುಳ್ಳ ಹಲ್ಲಿನಲ್ಲಿರಿಸಿ ಬಂದ ರಸವನ್ನು ಉಗುಳಿದರೆ ಕ್ರಿಮಿ, ಕೀವು ನೋವು ಇತ್ಯಾದಿ ಮಾಯವಾಗುವುದು.

**ಒಸಡು ಹುಣ್ಣಿಗೆ:**

ಎಲಗದ ಕೆತ್ತೆಯನ್ನು ನೀರಿನಲ್ಲಿ ಕಿವಿಚಿ ಪದೇ ಪದೇ ಬಾಯಿ ಮುಕ್ಕುಳಿಸಿದರೆ ಒಸಡುಹುಣ್ಣು, ಹಲ್ಲುನೋವು, ಜಗಿತ ಸೆಳೆತ, ಇತ್ಯಾದಿ ಗುಣವಾಗುವುದು.

ಪೇರಳೆ ಸೊಪ್ಪನ್ನು ನೀರಿನಲ್ಲಿ ಬೇಯಿಸಿ ಆ ಕಷಾಯವನ್ನು ಸೋಸಿ ಪಟಿಕ್ಕಾರ ಅಥವಾ ಉಪ್ಪು ಹಾಕಿ ಆಗಾಗ ಬಾಯಿ ಮುಕ್ಕುಳಿಸಿದರೆ ಕೊಳು ಕುರು, ಒಸಡು ಹುಣ್ಣು, ಹಲ್ಲು ನೋವು. ಸಿಡಿತ, ಕೀವು, ರಕ್ತ, ಬಾವುಗಳು ಗುಣವಾಗುವುವು.

**ವಸಡಿನಲ್ಲಿ ಬಾವಾದರೆ:**

ಕುಂಟಾಂಗಿಲ ಎಲೆಗಳ ಕಷಾಯ ಮಾಡಿ ಉಪ್ಪು ಹಾಕಿ ಬಾಯಿ ಮುಕ್ಕುಳಿಸುವುದು.

**ಹಲ್ಲಿನಿಂದಾದ ಕೊಳುಹುಣ್ಣಿಗೆ:**

ಈಂದಿನ ಮರದ ಬೇರಿನ ಎಳೆತುದಿ, ಉಪ್ಪಳಿಕೆ ಗಿಡದ ಕೆತ್ತೆ, ಗೇರು ಬೀಜದ ಒಂದು ಓಡು, ಎರಡು ಉಪ್ಪುಕಲ್ಲು, ಒಂದು ಬೆಳ್ಳುಳ್ಳಿಗಡ್ಡೆ ಇವು ಗಳನ್ನು ಜಜ್ಜಿ ಪಾದಾವಶೇಷ ಕಷಾಯ ಮಾಡಿ ಬಾಯಿ ಮುಕ್ಕುಳಿಸಿದರೆ ಕೌಳುಹುಣ್ಣು, ಬೋಡುಹುಣ್ಣು, ನೋವು, ಕೀವು, ಸೆಳೆತ ಇತ್ಯಾದಿ ಗುಣವಾಗಿ ಹಲ್ಲು ಬಲಿಷ್ಠವಾಗುವುದು.

ಗಣಪೆ (ಪಲ್ಲೆ) ಕಾಯಿಯನ್ನು ಹೊತ್ತಿಸಿ ಕರಿ (ಇದ್ದಲು) ಮಾಡಿ ಕಳ್ಳಿಯನ್ನು ಬೆಂಕಿಯಲ್ಲಿ ಹಾಕಿ ಬೇಯಿಸಿ ರಸ ತೆಗೆದು ಅದರಲ್ಲಿ ಈ ಕರಿ ಯನ್ನು ಅರೆದು ಮೂರು ದಿನ ಲೇಪಿಸಿದರೆ ಕೌಳಿನಲ್ಲಿ ಬಂದ ಕುರವು ಗುಣ ವಾಗುವುದು.

**ಸಾಮಾನ್ಯಕುರ ಮತ್ತು ಹಲ್ಲು ಬುಡದ ಕುರಗಳಿಗೆ:**

ಬೆಳ್ಳುಳ್ಳಿಯನ್ನು ನುಣ್ಣಗೆ ಅರೆದು ಹಚ್ಚುವುದು.

**ಹಲ್ಲಿನೆಡೆಯಲ್ಲಿ ರಕ್ತ ಸುರಿದರೆ:**

ಒಂದು ತೊಲೆ ನನ್ನಾರಿ ಬೇರನ್ನು ಬಿಸಿ ನೀರಿನಲ್ಲಿ ಅರೆದು ಸೇವಿಸುವುದು. (ಮೂರು ಯಾ ಆರು ದಿನ).

**ಹಲ್ಲಿನೆಡೆಯಲ್ಲಿ ವ್ರಣವಾಗಿ ರಕ್ತಬರುತ್ತಿದ್ದರೆ:**

ಸ್ವಚ್ಛವಾದ ಗಂಧದೆಣ್ಣೆಯಲ್ಲಿ ಹತ್ತಿಯನ್ನು ಮುಳುಗಿಸಿ ತೆಗೆದು ವಸಡಿಗೆ ಸವರಿ ಹಲ್ಲಿನಲ್ಲಿರಿಸುವುದು. ಮತ್ತು ಪ್ರತಿದಿನವೂ ನಾಲ್ಕುನಾಲ್ಕು ಬಿಂದು ಗಂಧದೆಣ್ಣೆಯನ್ನು ಹಾಲಿಗೆ ಯಾ ಬೇರೆ ಪಾನೀಯಕ್ಕೆ ಬೆರಸಿ ರಾತ್ರಿ ಊಟದ ನಂತರ ಸೇವಿಸುವುದು (ಹನ್ನೆರಡು ದಿನ)

ಮಾವಿನ ಚಿಗುರೆಲೆಯನ್ನೂ ಸಾಸಿವೆಯನ್ನೂ ಸಮಾಂಶ ಜಜ್ಜಿ ಗಂಧದೆಣ್ಣೆಯಲ್ಲಿ ಅರೆದು ಲೇಪಿಸಿದರೆ ದಂತರಕ್ತ ಸ್ರಾವವು ಗುಣವಾಗುವುದು.

**ಶೀತಹಲ್ಲು (ದಂತಹರ್ಷ) ಆದರೆ:**

ಮಾಪಲಪುಳಿಯ ರಸಕ್ಕೆ ಜೇನು ಹಾಕಿ ಬಾಯಿ ಮುಕ್ಕುಳಿಸಿದರೆ ಶೀತ, ಸೆಳೆತ, ನೋವು, ರಕ್ತ, ದುರ್ಗಂಧ ಇತ್ಯಾದಿ ಗುಣವಾಗುವುದು.

**ದಂತವ್ರಣಕ್ಕೆ:**

ನೆಲಸಂಪಗೆಯ ಗಡ್ಡೆಯನ್ನು ನಿಂಬೆಹುಳಿಯ ರಸದಲ್ಲಿ ತೇದು ವ್ರಣಕ್ಕೆ ಹಚ್ಚುವುದು.

**ದಂತಾರ್ಬುದ (ಕವಳಕುರು—ಕ್ಯಾನ್ಸರ್)ವಾದರೆ:**

ಸುಗ್ಗಿ ಕೆತ್ತೆ, ಸಾಸಿವೆ, ಅಣಲೆಬೀಜ ಇವುಗಳನ್ನು ಮಜ್ಜಿಗೆಯಲ್ಲಿ ಅರೆದು ಲೇಪಿಸುವುದು.

**ಹಲ್ಲಿನ ತೂತಿಗೆ ಪತ್ತು:**

ಜೇನುಮಯಣವನ್ನು ಅಥವಾ ರಾಳವನ್ನು ಬಿಸಿ ಮಾಡಿ ಅದಕ್ಕೆ ವಿಶಾಲರಿ ಚೂರ್ಣ ಹಾಕಿ ಕಲಸಿ ತೂತಿಗೆ ತುಂಬಿಸಿದರೆ ಕ್ರಿಮಿ ನಾಶವಾಗಿ ಸಂಪೂರ್ಣ ಗುಣಸಿಗುವುದು. ಪತ್ತು ಕೆಲವು ಸಮಯ ಹಾಗೆಯೇ ನಿಲ್ಲುವುದು.

**ತೂತುಬಿದ್ದು ಸಿಡಿಯುವ ಹಲ್ಲಿಗೆ:**

ಹತ್ತಿಯ ಬೀಜವನ್ನು ಮಸಿ ಮಾಡಿ ಆ ತೂತಿನಲ್ಲಿರಿಸಿದರೆ ಕ್ರಿಮಿನಾಶವಾಗಿ ಗುಣಸಿಗುವುದು.

**ಎಲ್ಲಾ ತರದ ದಂತರೋಗಕ್ಕೆ:**

ಹೂಬಾಳೆ ಗಡ್ಡೆಯನ್ನು ಬೂದಿ ಬೆಂಕಿಯಲ್ಲಿ ಬೇಯಿಸಿ ಸ್ವಲ್ಪ ಬೆಲ್ಲ ಕೂಡಿಸಿ ಜಜ್ಜಿ ಬಟ್ಟೆಯಲ್ಲಿ ಹಾಕಿ ರಸವನ್ನು ಹಲ್ಲು ನೋವಿನ ವಿರುದ್ಧ ಭಾಗದ ಕಿವಿಗೆ ಹಾಕಿದರೆ ಪೂರ್ಣ ಗುಣವಾಗುವುದು.

ತೆಂಗಿನ ಕಾಯಿಯ ತನಿಹಾಲಿನಲ್ಲಿ ಕೂರಾಂಬಲ ಸೊಪ್ಪನ್ನರೆದು ಪ್ರಾತಃಕಾಲ ತಲೆಗೆ ಹಾಕಿ ಒಂದು ಜಾವದ ನಂತರ ಮಿಯುವುದು. (ಮೂರು ದಿನ).

**ಹಲ್ಲುಗಳ ಸುಸ್ಥಿತಿಗೆ:**

ರೆಂಜೆ ಕೆತ್ತೆಯನ್ನು ಪಟಿಕಾರ ಸೇರಿಸಿ ಚೂರ್ಣ ಮಾಡಿ ಹಲ್ಲು ತಿಕ್ಕಿದರೆ ನೋವು, ಕೀವು ಇತ್ಯಾದಿ ಗುಣವಾಗಿ ಹಲ್ಲು ದೃಢವಾಗುವುದು.

ಜೀರಿಗೆ, ಉಪ್ಪು ಅಣಿಲೆಕಾಯಿ, ಗಾಮುಟೆಮುಳ್ಳು ಇವುಗಳನ್ನು ವಸ್ತ್ರಗಾಳಿತ ಚೂರ್ಣ ಮಾಡಿ ಹಲ್ಲುಜ್ಜಿದರೆ ಕ್ರಿಮಿ, ಶೂಲೆ, ಕೀವು, ನೋವು ಇತ್ಯಾದಿ ಗುಣವಾಗಿ ಹಲ್ಲು ಭದ್ರವಾಗುವುದು.

**ಹಲ್ಲು ಅಲ್ಲಾಡುವುದಿದ್ದರೆ:**

ಕಾಚಿತಿರುಳನ್ನೂ ತಾಳಿಮರದ ಬೇರನ್ನೂ ಕಷಾಯ ಮಾಡಿ ಬಾಯಿ ಮುಕ್ಕಳಿಸಿದರೆ ನೋವು ಗುಣವಾಗಿ ಹಲ್ಲು ಗಟ್ಟಿಯಾಗುವುದು.

# ಮೂಗಿನ ಆರೋಗ್ಯ

**ಮೂಗಿನಲ್ಲಿ ನೀರು ಸುರಿಯುತ್ತಿದ್ದರೆ:**

ಶುದ್ಧಿ ಮಾಡಿದ ಚಿತ್ರಮೂಲದ ಬೇರನ್ನು ಚೂರ್ಣ ಮಾಡಿ ಕಾಲು ತೊಲೆ ಚೂರ್ಣವನ್ನು ಜೇನಿನಲ್ಲಿ ಕಲಸಿ ಬೆಳಿಗ್ಗೆ ಸೇವಿಸುವುದು. (ಒಂದು ವಾರ)

**ಮೂಗಿನಲ್ಲಿ ರಕ್ತ ಸುರಿದರೆ:**

ನೆಲ್ಲಿಚಟ್ಟನ್ನು ತುಪ್ಪದಲ್ಲಿ ಹುರಿದು ಅರೆದು—ಅಥವಾ ಗಂಜಿ ತಿಳಿಯಲ್ಲಿ ಅರೆದು ತಲೆಗೆ ಹಾಕುವುದು.

ಹಸಿ ದರ್ಭೆಯ ರಸವನ್ನು ಮೂಗಿಗೆ ನಸ್ಯ ಹಾಕುವುದು.

ಅಮೃತಬಳ್ಳಿಯನ್ನು ಹಾಲು ಕಷಾಯ ಮಾಡಿ ಸಕ್ಕರೆ ಹಾಕಿ ಒಂದು ವಾರ ಸೇವಿಸುವುದರೊಂದಿಗೆ ಜ್ಯೇಷ್ಠಮಧುವನ್ನು ಮೊಲೆಹಾಲಿನಲ್ಲಿ ಅರೆದು ನಸ್ಯವೂ ಹಾಕಿದರೆ ಪೂರ್ಣ ಗುಣವಾಗುವುದು.

ಅರಸಿನ ಕಡ್ಡಿಯನ್ನು ಬತ್ತಿ ಮಾಡಿಹೊತ್ತಿಸಿ ಅದರ ಹೊಗೆಯನ್ನು ಮೂಗಿನಲ್ಲಿ ಸೇದುವುದು.

ದಾಳಿಂಬದೆಲೆ,ಅದರ ಹೂವಿನ ಮೊಗ್ಗೆ. ಗರಗ, ಅಣಿಲೆಕಾಯಿ ಇವು ಗಳನ್ನು ಸಮಾಂಶ ತೆಗೆದು ಅತ್ತಿ ಚಿಗುರಿನ ರಸದಲ್ಲರೆದು ನಸ್ಯ ಹಾಕುವುದು

ಮೂಗು ಕಟ್ಟಿದರೆ ನೀರುಳ್ಳಿಯ ರಸವನ್ನು ನಸ್ಯ ಹಾಕಿದರೆ ಎಲ್ಲಾ ತರದ ನಾಸಾರೋಗವೂ ಗುಣವಾಗುವುದು.

**ಪೀನಸಕ್ಕೆ:**

ಒಂದೊಂದು ತೊಲೆ ಶುಂಠಿ ರಸವನ್ನೂ ಜೇನನ್ನೂ ಸೇರಿಸಿ ಬೆಳಗ್ಗೆ ಸೇವಿಸುವುದು. (ಒಂದು ವಾರ)

ಕಾಮ ಕಸ್ತೂರಿಯೆಲೆಯ ರಸಕ್ಕೆ ಅದರ ಹನ್ನೆರಡನೆಯ ಒಂದಂಶ ಪಚ್ಚೆ ಕರ್ಪೂರ ಹಾಕಿ ಪ್ರತಿದಿನವೂ ಬೆಳಗ್ಗೆ ನಾಲ್ಕಾರು ಬಿಂದುಗಳಂತೆ ಮೂರು ಯಾ ಆರು ದಿನ ಮೂಗಿಗೆ ಹಾಕಿದರೆ ರಕ್ತ ಕೀವು ಸಿಂಬಳ ದುರ್ವಾಸನೆಗಳೆಲ್ಲಾ ಮಾಯವಾಗುವುವು.

**ಮೂಗು ಹುಣ್ಣಾದರೆ:**

ಹೊಂಗಾರೆಯೆಲೆಯ ರಸಕ್ಕೆ ಸಮಾಂಶ ಎಳ್ಳೆಣ್ಣೆ ಸೇರಿಸಿ ಎಣ್ಣೆಯ

ನಾಲ್ಕನೆಯ ಒಂದಂಶದಷ್ಟು ನೆಲ್ಲಿಚಟ್ಟನ್ನು ಅದೇ ರಸದಲ್ಲಿ ಅರೆದು ಕಲ್ಕ ಸೇರಿಸಿ ಕಾಯಿಸಿ ಸೋಸಿ ಎಣ್ಣೆಯನ್ನು ಲೇಪಿಸುವುದು.

**ಮೂಗಿನೊಳಗೆ ಗಂಟು ಬೆಳೆದರೆ:**

ಉತ್ತರಣೆಸೊಪ್ಪನ್ನು ನಿಂಬೆ ಹುಳಿಯ ರಸದಲ್ಲಿ ಅರೆದು ನಾಲ್ಕಾರು ದಿನ ಹಚ್ಚಿದರೆ ಗುಣವಾಗುವುದು. (ಓಪದೇಶನು ಅವಶ್ಯವಿಲ್ಲ.)

**ನೆಗಡಿ ಮತ್ತು ಶೀತವಾದರೆ:**

ಬಿಳಿ ಕಿರುಕೊಡಸಿಗೆಯ ಬೀಜ, ಸೀಗೆಕಾಯಿ, ಯಷ್ಟಿಮಧು, ವಂಶಸಿಲಿ ಇವುಗಳನ್ನು ಸಮಾಂಶ ಚೂರ್ಣ ಮಾಡಿ ಆಕಳ ತುಪ್ಪದಲ್ಲಿ ಅರೆದು ಬೆಂಕಿ ಕೆಡದಲ್ಲಿ ಹಾಕಿ ಬರುವ ಹೊಗೆಯನ್ನು ತಲೆಗೊಡ್ಡಿ ಕಾಯಿಸಿದರೆ ಕೆಮ್ಮು. ತಲೆನೋವು, ಕುತ್ತಿಗೆನೋವು, ತಲೆಭಾರ ಇತ್ಯಾದಿ ಗುಣವಾಗುವುದು.

**ಮೂಗಿನಲ್ಲಿ ಹುಳವಾದರೆ:**

ಸಮುದ್ರ ಫಲದ ಬೀಜ, ಅರಿದಳ ಇವುಗಳನ್ನು ಕಲಗಚ್ಚಿನಲ್ಲಿ ತೇದು ನಸ್ಯಹಾಕಿದರೆ ಹುಳವು ಸತ್ತುಹೋಗುವುದು.

**ಪೀನಸ ಶೀತ ರೋಗಗಳಿಗೆ:**

ಎರಡು ಪಾಲು ಜ್ಯೇಷ್ಠಮಧುವನ್ನೂ ಒಂದು ಪಾಲು ಶತಾವೆಯನ್ನೂ ಸೇರಿಸಿ ಚೂರ್ಣ ಮಾಡಿ ಹೊತ್ತಿಗೆ ಕಾಲು ತೊಲೆ ಚೂರ್ಣವನ್ನು ಅರ್ಧ ತೊಲೆ ಸಕ್ಕರೆ ಬೆರೆಸಿ ಸೇವಿಸುವುದು. ವಸಂತಕಾಲದಲ್ಲಿ ಸೇವಿಸುವುದು ಉತ್ತಮ ಫಲಪ್ರದವಾಗುವುದು.

# ನಾಲಿಗೆಯ ಆರೋಗ್ಯ

**ನಾಲಿಗೆ ದಪ್ಪವಾಗಿದ್ದರೆ:**

ಸಮೂಲ ಉತ್ತರಣೆ ಗಿಡದ ಅಷ್ಟಮಾಂಶ ಕಷಾಯ ಮಾಡಿ ಒಂದು ವಾರ ಸೇವಿಸುವುದು. ಅದರಿಂದ ನಾಲಿಗೆಯ ದಪ, ಸೀಳು, ಮಾತಾಡುವಾಗ ಬರುವ ತೊಡಕು ಇತ್ಯಾದಿ ಗುಣವಾಗುವುದು.

ಚಿತ್ರಮೂಲದ ಬೇರು, ಕಟುಕರೋಹಿಣಿ, ಇಂದುಪ್ಪು ಇವುಗಳನ್ನು ಸಮಾಂಶ ಚೂರ್ಣ ಮಾಡಿ ತುಪ್ಪದಲ್ಲರೆದು ನಾಲಿಗೆಗೆ ಲೇಪಿಸುವುದು.

ತ್ರಿಕಟು, ಯವಕ್ಷಾರ, ಅರಸಿನ, ಶುದ್ಧಿ ಮಾಡಿದ ಚಿತ್ರಮೂಲ ಇವುಗಳ ಚೂರ್ಣದಿಂದ ನಾಲಿಗೆಯನ್ನು ತಿಕ್ಕಿದರೆ ಎರಡೇ ದಿನಗಳಲ್ಲಿ ಸ್ವಚ್ಛವಾಗುವುದು.

**ನಾಲಿಗೆಯ ಎಲ್ಲಾ ವಿಧದ ದೋಷಗಳಿಗೆ:**

ಸಮುದ್ರ ಮಾಪಲ ಕಾಯನ್ನು ಮಜ್ಜಿಗೆಯಲ್ಲಿ ತೇದು ನಾಲಿಗೆಗೆ ತೊಡೆಯುವುದು.

ಒಂದಾಣೆ ತೂಕದಷ್ಟು ಸಮುದ್ರ ಮಾಫಲಕಾಯನ್ನು ಹಾಲಿನಲ್ಲಿ ತೇದು ಕದಡಿ ಮೂರು ಯಾ ಆರು ದಿನ ಸೇವಿಸಿದರೆ ನಾಲಿಗೆಯ ಒಡೆಯುವಿಕೆ ಹುಣ್ಣು, ತೊದಲು ಇತ್ಯಾದಿ ಎಲ್ಲಾ ತರದ ದೋಷವೂ ಗುಣವಾಗುವುದು.

ಹಸಿ ಶುಂಠಿಯನ್ನೂ ಬೆಲ್ಲವನ್ನೂ ಒಟ್ಟಿಗೆ ಜಗಿದು ತಿಂದರೆ ಹೊಟ್ಟೆಯು ಚುರುಕಾಗಿ ನಾಲಿಗೆಯ ದೋಷ, ಬಾಯಿ ಹುಣ್ಣು, ಅಜೀರ್ಣ, ಇತ್ಯಾದಿ ಗುಣವಾಗುವುದು.

ಅಶ್ವತ್ಥದ ಕೆತ್ತೆಯನ್ನು ಅದರೆಲೆಯ ರಸದಲ್ಲಿ ತೇದು ಜೇನು ಸೇರಿಸಿ ಲೇಪಿಸುವುದು.

ಪಟಿಕ್ಕಾರ ಯಾ ಪೊಂಗಾರವನ್ನು ಅರಳುಮಾಡಿ ಜೇನಿನಲ್ಲಿ ಅರೆದು ಲೇಪಿಸಿದರೆ ತತ್ಕಾಲ ಶಮನವಾಗುವುದು.

**ನಾಲಿಗೆಯಲ್ಲಿ ಮುಳ್ಳು ನೆಗೆದರೆ:**

ನಾಲ್ಕು ಭಾಗ ಅಣಲೆಕಾಯಿಯನ್ನೂ ಒಂದು ಭಾಗ ಜೀರಿಗೆಯನ್ನೂ ಇಾಳಿಸರದ ರಸದಲ್ಲಿ ಅರೆದು ದಿನದಲ್ಲಿ ಮೂರು ಸರ್ತಿ ನೆಕ್ಕಿಸುವುದು. (ಮೂರು ದಿನ)

**ನಾಲಿಗೆಯ ಅಗ್ರಕ್ಕೆ:**

ಗರಗದ ಎಲೆಯನ್ನು ನುಣ್ಣಗೆ ಅರೆದು ಪ್ರಾಯಕ್ಕೆ ತಕ್ಕಂತೆ ಅರ್ಧ ಅಥವಾ ಒಂದು ತೊಲೆಯಷ್ಟನ್ನು ದನದ ಹಾಲಿನಲ್ಲಿ ಕದಡಿ ಪ್ರತಿದಿನ ಎರಡು ವೇಳೆ ಸೇವಿಸುವುದು. ಹೀಗೆ ಮೂರು ಯಾ ಆರು ದಿನ ಹಾಲನ್ನ (ಮಧುರ ಆಹಾರ) ಕಡು ಪಥ್ಯದೊಂದಿಗೆ ಸೇವಿಸಿದರೆ ಎಲ್ಲಾ ತರದ ಅಗ್ರವೂ ಗುಣ ವಾಗುವುದು.

ಉಪ್ಪಳಿಗನ ಕೆತ್ತೆ, ಸೀಗೆ ಕೆತ್ತೆ, ಹುಣಸೆ ಕೆತ್ತೆ, ಇವುಗಳನ್ನು ಮದ್ದಿನ ಗಂಜಿ ಮಾಡಿ ಉಣ್ಣುವುದು, ಯಾ ಕಷಾಯ ಮಾಡಿ ಬಾಯಿ ಮುಕ್ಕಳಿಸು ವುದು. ಕಫ, ಅಗ್ರ, ಹಲ್ಲು, ವಸಡು, ನೋವು ಸಹ ಗುಣವಾದೀತು.

ಹುಣಸೆಯ ಬೀಜವನ್ನು ನಿಂಬೆಹುಳಿಯ ರಸದಲ್ಲಿ ತೇದು ನಾಲಿಗೆಗೆ ತೊಡೆಯುವುದು.

**ಕಠಿಣವಾದ ಅಗ್ರಕ್ಕೆ:**

ಪಾತಾಳ ಗರುಡನ ಬೇರು, ಈಶ್ವರ ಬಳ್ಳಿಯ ಬೇರು, ಗಂಟು ಭಾರಂಗಿ ಬೇರು ಇವುಗಳನ್ನು ನಿಂಬೆಹುಳಿಯ ರಸದಲ್ಲಿ ಅರೆದು ಸೇವಿಸಿದರೆ ಅಗ್ನಿ ಸರ್ಪ, ವಿಷ ಅಗ್ರ, ಇತ್ಯಾದಿ ಗುಣವಾಗುವುವು.

**ಮಕ್ಕಳ ದಪ್ಪವಾದ ಅಗ್ರಕ್ಕೆ:**

ಬಾಳೆಗೊನೆಯ ತುದಿಯಲ್ಲಿರುವ ಕೊಂಡಿ (ಕರಿಂಡಿಗೆ) ಯ ಮೇಣವನ್ನು ಬೆರಳಿನಲ್ಲಿ ನಾಲಿಗೆಗೆ ಉಜ್ಜಿ ಮೆಲ್ಲಗೆ ಬೆರಳಿನಲ್ಲಿ ಸವರಿದರೆ ಅಗ್ರ ಸುಲಭ ವಾಗಿ ಎದ್ದು ಬರುವುದು.

ಅಶ್ವತ್ಥದ ಕೆತ್ತೆಯನ್ನೂ ಕಂಕುಷ್ಠವನ್ನೂ ಜೇನಿನಲ್ಲಿ ತೇದು ನಾಲಿಗೆಗೆ ತಿಕ್ಕುವುದು.

**ನಾಲಿಗೆಯ ಕರಿ ಅಗ್ರಕ್ಕೆ**

ಸೇವಂತಿಗೆಯ ಅರೆಬಿರಿದ ಮೊಗ್ಗೆಯನ್ನು ಗಂಜಿ ತೆಳಿಯಲ್ಲಿ ಅರೆದು ಲೇಪಿಸುವುದು.

**ನಾಲಿಗೆ ಒಡೆದರೆ:**

ಕಾಡು ಮಂದಾರ ಕೆತ್ತೆಯನ್ನು ಕಷಾಯ ಮಾಡಿ ಕಷಾಯಕ್ಕೆ ಕಾಚಿ ಹುಡಿ ಹಾಕಿ ಚೆನ್ನಾಗಿ ಬಾಯಿ ಮುಕ್ಕಳಿಸುವುದು.

**ಸರ್ಪಾಗ್ರಕ್ಕೆ:**

ಲಕ್ಷಣ:—ನಾಭಿಯಿಂದಲೇ ಮೇಲೇರುತ್ತಾ ಬರುವ ರೋಗ. ಉಚಿತವಾದ ಮದ್ದು ಮಾಡದಿದ್ದರೆ ಪ್ರಾಣಾಪಾಯವಿದೆ.

ನೆಲಮುಚ್ಚಿರು ಗಿಡದ ಬೇರನ್ನೂ ಮಧ್ಯಾಹ್ನ ಮಲ್ಲಿಗೆಯ ಸಸಿಯ ಗಡ್ಡೆಯನ್ನೂ ಕಂಚು ಹುಳಿಯ ರಸದಲ್ಲಿ ತೇಯು ದಿನವೂ ಮೂರು ಹೊತ್ತು ನೆಕ್ಕುವುದು. (ಮೂರು ಯಾ ಆರು ದಿನ)

ಕಹಿದಾರಳೆಯ ಬೀಜವನ್ನು ತೇದು ಸ್ವಲ್ಪ ಮಾತ್ರ ನೆಕ್ಕುವುದು. (ಅಧಿಕವಾದರೆ ವಿಷವಾಗುವುದು. ಎಚ್ಚರವಿರಲಿ)

**ಮಕ್ಕಳ ನಾಲಿಗೆಯ ಅಗ್ರಕ್ಕೆ:**

ಚುಂಡೆಯ ಬೇರನ್ನು ತೇದು ಬೆಣ್ಣೆಯಲ್ಲಿ ಜಾಳಿಸಿ ದಿನವೂ ಎರಡು ಹೊತ್ತು ನೆಕ್ಕಿಸುವುದು. (ಮೂರು ದಿನ)

**ಮಕ್ಕಳ ಅಗ್ರ ಮತ್ತು ಬಾಯಿಹುಣ್ಣಿಗೆ:**

ಬೆಂಕಿ ಉರಿಸಿದ ಒಲೆಯಿಂದ ಬೆಳಗ್ಗೆ ಒಂದು ಚಿಟಿಕೆ ಬೂದಿ ತೆಗೆದು ಶುದ್ಧ ನೀರಿನಲ್ಲಿ ಕದಡಿ ಕುಡಿಸುವುದು. ಹೀಗೆ ಮೂರು ದಿನ ಕುಡಿಸಿದರೆ ಮಕ್ಕಳ ಬಾಯಿಯಲ್ಲಿ ಬರುವ ಹುಣ್ಣು, ಅಗ್ರ ಇತ್ಯಾದಿ ಗುಣವಾಗುವುದು.

**ಮಕ್ಕಳು ಮೊಲೆ ತಿನ್ನದಿದ್ದರೆ:**

ನೆಲ್ಲಿಚಟ್ಟು, ಅಣಿಲೆಕಾಯಿ, ಇಂದುಪ್ಪು ಇವುಗಳನ್ನು ತೇದು, ಹೆಚ್ಚು ಕಡಿಮೆ ಪ್ರಮಾಣದಲ್ಲಿ ಜೇನು ಮತ್ತು ತುಪ್ಪ ಹಾಕಿ (ಜೇನು ಮತ್ತು ತುಪ್ಪ ಪ್ರಮಾಣದಲ್ಲಿ ಸಮಾನವಾಗಿರಬಾರದು) ಒಟ್ಟಿಗೆ ಜಾಳಿಸಿ ಮಕ್ಕಳ ನಾಲಗೆಗೆ ಹಚ್ಚುವುದು.

**ಮಕ್ಕಳ ಉಗ್ಗು, (ಕಕ್ಕು, ಕೊಕ್ಕಳಿ) ಮಾತಿಗೆ:**

ಸಮುದ್ರ ಹಾಗಲ ಕಾಯಿಯನ್ನು ಜೇನಿನಲ್ಲಿ ತೇದು ನೆಕ್ಕಿಸುವುದು.

# ಮುಖ ಸೌಂದರ್ಯ

**ಬಾಯಿ ಹುಣ್ಣಿಗೆ:**

ಯಾಲಕ್ಕಿಬೀಜ, ಬೀಜದ್ರಾಕ್ಷೆ, ನೆಗ್ಗಿಲುಮುಳ್ಳು, ಸುಗಂಧಿಬೇರು ಇವುಗಳಲ್ಲಿ ಪ್ರತಿಯೊಂದನ್ನೂ ಅರ್ಧ ತೊಲೆಯಂತೆ ತೆಗೆದು ಸೇರಿಸಿ ಜಜ್ಜಿ ಹಾಲು ಕಷಾಯ ಮಾಡಿ ಸಕ್ಕರೆ ಹಾಕಿ ರಾತ್ರಿ ಊಟದ ನಂತರ ಸೇವಿಸುವುದು. (ಒಂದು ವಾರ)

ಸಮುದ್ರ ಹಾಗಲ ಕಾಯಿಯ ಒಳಗಿನ ಬೊಂಡನ್ನು (ಪಪ್ಪು) ಉಪ್ಪು ನೀರಿನಲ್ಲಿ ತೇದು ತೊಡೆದರೆ ನಾಲಿಗೆ ಕೌಳುಗಳಲ್ಲಿ ಬರುವ ಹುಣ್ಣುಗಳು ಗುಣವಾಗುವುವು.

ಆಡುಸೋಗೆಯ ಬೇರು ನಾಲ್ಕು ತೊಲೆ ತಂದು ಸ್ವಚ್ಛಪಡಿಸಿ ಜಜ್ಜಿ ಅಷ್ಟಮಾಂಶ ಕಷಾಯ ಮಾಡಿ ಸೇವಿಸುವುದು. (ಹನ್ನೆರಡು ದಿನ)

ಜಾಜಿಮಲ್ಲಿಗೆ ಯೆಲೆಯನ್ನು ಚೆನ್ನಾಗಿ ಜಗಿದು ರಸವನ್ನು ನುಂಗು ವುದು.

ಮಂಗುದರಸಿನದ ಕಷಾಯ ಮಾಡಿ ಸೋಸಿ ಬತ್ತಿಸಿ ರವೆಪಾಕದಲ್ಲಿ ಕಾವಿ ಚೂರ್ಣ ಹಾಕಿ ಇಳಿಸಿ ತಣಿದ ಮೇಲೆ ಜೇನಿನಲ್ಲಿ ಕಲಸಿ ಲೇಪಿಸು ವುದು,

ಕಾಡುಪಟಗಿಲ, ಕಹಿಬೇವು, ಜ್ಯೇಷ್ಠಮಧು, ಆಡುಸೋಗೆ, ಕರಿವೇಲ, (ಕರಿಜಾಲಿ) ಕಾಚಿ, ತ್ರಿಫಲೆ, ಇವುಗಳಲ್ಲಿ ಯಾವುದಾದರೂ ಒಂದನ್ನು ಕುಳ ಮಾಡಿ ಕಾವಿ, ಜೇನುಗಳನ್ನು ಸೇರಿಸಿ ಲೇಪಿಸುವುದರಿಂದ ಬಾಯಿಹುಣ್ಣು ಸ್ವಚ್ಛವಾಗಿ ಗುಣವಾಗುವುದು.

ತ್ರಿಫಲಾಚೂರ್ಣವನ್ನೂ ಇಪ್ಪೆ ತಿರುಳಿನ ಚೂರ್ಣವನ್ನೂ ಎಮ್ಮೆಯ ಬೆಣ್ಣೆಯಲ್ಲಿ ಜಾಳಿಸಿ ಲೇಪಿಸುವುದು.

ಕೊಟ್ಟೆ ಮುಳ್ಳು ಕೆತ್ತೆ, ಕಿಸ್ಕಾರಗಿಡದ ಬೇರು, ಬಂದನಾರು, ಕಾರೆ ಬೇರು, ಹಳದಿ ಹಣ್ಣಾಗುವ ಗೇರು ಬೀಜ ಮರದ ಕೆತ್ತೆ ಇವುಗಳ ಅಷ್ಟ ಮಾಂಶ ಕಷಾಯ ಮಾಡಿ ಬೆಲ್ಲ ಮೇಲ್ಪುಡಿ ಹಾಕಿ ದಿನದಲ್ಲಿ ಎರಡು ಹೊತ್ತಿನ ಪ್ರಕಾರ ಸೇವನೆ. ಮೂರು ಯಾ ಆರು ದಿನ. ಅಥವಾ—

ಈ ಮೇಲಿನ ಕೊಟ್ಟೆ ಮುಳ್ಳು ಕೆತ್ತೆ ಮೊದಲಾದ ಐದು ಬಗೆ ಮದ್ದು ಗಳನ್ನೇ ಹಾಕಿ ಮದ್ದಿನ ಗಂಜಿ ಮಾಡಿ ದಿನವೂ ಒಂದು ಹೊತ್ತು ಉಣ್ಣು ವುದು. ಮೂರು ಯಾ ಆರು ದಿನ.

ತೆಂಗಿನಕಾಯಿಯ ತನಿಹಾಲಿಗೆ ಚೆನ್ನಾಗಿ ಸಕ್ಕರೆ ಹಾಕಿ ದಪ್ಪ ಮಾಡಿ ಬಾಯಿ ಮುಕ್ಕುಳಿಸಿದರೆ ಬಾಯಿ ಹುಣ್ಣು ತತ್ಕಾಲ ಶಮನವಾಗುವುದು.

**ಬಾಯಿ ಹುಣ್ಣು ನಿಶ್ಶೇಷ ಗುಣವಾಗಲಿಕ್ಕೆ:**

ಹಸಿನೆಲ್ಲಿ ಕಾಯಿಯ ರಸಕ್ಕೆ ಜೀರಿಗೆಯ ಚೂರ್ಣ ಮತ್ತು ಮಜ್ಜಿಗೆ ಯನ್ನು ಸೇರಿಸಿ ದಿನದಲ್ಲಿ ಮೂರು ಸರ್ತಿ ಬಾಯಿ ಮುಕ್ಕುಳಿಸುವುದು ಮತ್ತು ದಿನದಲ್ಲಿ ಒಂದು ಸರ್ತಿ ಸೇವಿಸುವುದು. (ಮೂರು ಯಾ ಆರು ದಿನ)

ಜಾದಿ ಕಾಯಿಯನ್ನೂ ಕರಿಜೀರಿಗೆಯನ್ನೂ ಕಾಮ ಕಸ್ತೂರಿಯ ರಸ ದಲ್ಲರೆದು ಹಚ್ಚುವುದು.

ಸನ್ನಾಲಿ ಬೇರನ್ನು ಆಕಳ ಹಾಲಿನಲ್ಲಿ ಅರೆದು ಸೇವಿಸುವುದು.

ಹಾಲಿಕೆತ್ತೆ, ಲಾವಂಚ, ಕಾಟು ಪಟಗಿಲ, ಭದ್ರಮುಷ್ಟಿ, ಅಣಿಲೆ ಕಾಯಿ, ಕಟುಕರೋಹಿಣಿ, ಜೇಷ್ಠಮಧು, ಕೊಂದೆಕೆತ್ತೆ, ಶ್ರೀಗಂಧ ಇವು ಗಳ ಅಷ್ಟಮಾಂಶ ಕಷಾಯ ಮಾಡಿ ದಿನದಲ್ಲಿ ಎರಡು ಹೊತ್ತಿನ ಪ್ರಕಾರ ಸೇವನೆ. (ಮೂರು ಯಾ ಆರು ದಿನ)

ಕರಳೆಂಕಿ ನಾರು, ಗೋಳಿತ್ತಟ್ಟೆನಾರು, ಕೊಟ್ಟೆಮುಳ್ಳಿನ ಬೇರಿನ ಕೆತ್ತೆ ಕಾಚಿ ತಿರುಳು, ಈ ನಾಲ್ಕು ಬಗೆ ಮದ್ದುಗಳಲ್ಲಿ ಯಾವುದಾದರೂ ಒಂದನ್ನು ಅಷ್ಟಾವಶೇಷ ಕಷಾಯ ಮಾಡಿ ಸಕ್ಕರೆ ಹಾಕಿ ಸೇವಿಸುವುದು. ಆಗಾಗ ಸೇವಿಸುವುದು. (ಮೂರು ವಾ ಆರು ದಿನ)

**ವೀಳ್ಯ ಹಾಕುವಾಗ ಸುಣ್ಣ ಜಾಸ್ತಿಯಾಗಿ ಬಂದ ಬಾಯಿ ಹುಣ್ಣಿಗೆ:**

ಗಂಜಿ ತೆಳಿಗೆ ಸಮಾಂಶ ಎಳ್ಳೆಣ್ಣೆ ಸೇರಿಸಿ ಕೂಡಲೆ ಬಾಯಿ ಮುಕ್ಕುಳಿ ಸುವುದು.

ಹಸಿ ಅರಸಿನವನ್ನು ಅಥವಾ ಅಡಕೆಯನ್ನು ಅರೆದು ಲೇಪಿಸುವುದು.

**ಬಾಯಿ ಮತ್ತು ಮೂಗಿನಲ್ಲಿ ರಕ್ತ ಬರುವುದಿದ್ದರೆ:**

ಅಡುಸೋಗೆ ಸೊಪ್ಪಿನ ಎರಡು ತೊಲೆ ರಸಕ್ಕೆ ಒಂದು ತೊಲೆ ಜೇನು ಸೇರಿಸಿ ಬೆಳಗ್ಗೆ ಸೇವಿಸುವುದು. (ಮೂರು ಯಾ ಆರು ದಿನ) ಇದರಿಂದ

ಗುವ. ಗುಹ್ಯ ಮೊದಲಾದ ನವದ್ವಾರಗಳಲ್ಲಿ ಬರುವ ರಕ್ತಸ್ರಾವವೂ ಗುಣವಾಗುವುದು.

**ಬಾಯಾರಿ ನೀರು ಕುಡಿದಷ್ಟು ಸಾಲದಾದರೆ:**

ಕೊತ್ತಂಬರಿ ಕಷಾಯಕ್ಕೆ ಸಕ್ಕರೆ ಹಾಕಿ ಸೇವಿಸುವುದು.

**ಕಡೆವಾಯಿ ಮತ್ತು ತುಟಿಗಳೊಡೆದರೆ:**

ಕಿಂಕಿಣ ಗಿಡದ ಬೇರಿಗೆ ಸ್ವಲ್ಪ ಜೀರಿಗೆ ಸೇರಿಸಿ ನುಣ್ಣಗೆ ಅರೆದು ಬೆಣ್ಣೆಯಲ್ಲಿ ಜಾಳಿಸಿ ಸಕ್ಕರೆ ಹಾಕಿ ಸೇವಿಸಿದರೆ ಶೀಘ್ರದಲ್ಲಿ ಗುಣವಾಗುವುದು.

ಗುಗ್ಗುಲ, ಜೇನುಮೇಣ, ಬೆಲ್ಲಗಳನ್ನು ಎಮ್ಮೆಯ ತುಪ್ಪ ಹಾಕಿ ಕಾಯಿಸಿ ಹಚ್ಚುವುದು.

**ತುಟಿಯೊಡೆದರೆ:**

ಎಕ್ಕೆಯ ಹಸಿಯೆಲೆಯನ್ನು ಭಸ್ಮ ಮಾಡಿ ಎಮ್ಮೆಯ ಬೆಣ್ಣೆಯಲ್ಲಿ ಜಾಳಿಸಿ ತುಟಿಗೆ ಲೇಪಿಸುವುದು.

ತ್ರಿಫಲಾ ಚೂರ್ಣವನ್ನೂ ಇಪ್ಪೆ ತಿರುಳಿನ ಚೂರ್ಣವನ್ನೂ ಎಮ್ಮೆಯ ಬೆಣ್ಣೆಯಲ್ಲಿ ಜಾಳಿಸಿ ಲೇಪಿಸುವುದು.

**ಬಾಯಿ ವಾಸನೆ ಬರುವುದಿದ್ದರೆ:**

ದಾಳಿಂಬದ ಬೇರನ್ನು ನೀರಿನಲ್ಲರೆದು ಬಾಯಿ ಮುಕ್ಕಳಿಸುವುದು.

**ಮುಖದಲ್ಲಿ ಬೀಳುವ ಮುದ್ದಣಿಗೆ:**

ಲವಂಗವನ್ನು ಹಸಿನೀರಿನಲ್ಲಿ ಬೆಣ್ಣೆಯಂತೆ ಅರೆದು ರಾತ್ರಿ ಮಲಗುವಾಗ ನಾಲ್ಕಾರು ಬಾರಿ ಆರಿದಂತೆ ಲೇಪಿಸುವುದು. (ಮೂರು ದಿನ). ಇದರಿಂದ ಕಲೆಯೂ ಕೂಡ ಕಾಣದಂತೆ ಮಾಯುವುದು.

ಗಜಿಗೆ ಗಿಡದ ಬೇರನ್ನು ಕಲಗಚ್ಚಿನಲ್ಲರೆದು ಲೇಪಿಸಿದರೆ ಶೀಘ್ರದಲ್ಲಿ ಗುಣವಾಗುವುದು.

ಸಮುದ್ರ ಹಾಗಲ ಕಾಯಿಯನ್ನು ಮಜ್ಜಿಗೆಯಲ್ಲಿ ತೇದು ಹಚ್ಚಿದರೆ ಮುಖದ ಕುರ, ಕಲೆ, ನಾಲಿಗೆದೋಷ. ಬಾಯಿಹುಣ್ಣು ಇತ್ಯಾದಿ ಎಲ್ಲಾ ವಿಕಾರಗಳು ಗುಣವಾಗುವುವು.

**ಮುಖದ ಸಾಮಾನ್ಯ ರೋಗಕ್ಕೆ:**

ಸಮುದ್ರ ಫಲವನ್ನು ಸ್ತನ್ಯದಲ್ಲಿ ತೇದು ನಸ್ಯವೇರೆದರೆ ದೊಂಡೆ (ಗಂಟಲು) ನಾಲಿಗೆ, ಹಲ್ಲುಗಳಲ್ಲಿ ಬರುವ ಸಾಮಾನ್ಯ ಎಲ್ಲ ವಿಧದ ರೋಗಗಳು ಗುಣವಾಗುವುವು.

**ಕಪಾಲ ರೋಗಕ್ಕೆ:**

ನಾಂಗಲಿಕ (ಇದು ವಿಷ)ದ ಗಡ್ಡೆಯನ್ನು ಕಲ್ಕ ಹಾಕಿ ಎಣ್ಣೆ ಕಾಯಿಸಿ ತಲೆಗೆ ಹಾಕಿದರೆ ಕಪಾಲರೋಗವು ಗುಣವಾಗುವುದು.

**ಕೆಪ್ಪಟೆ ರಾಯುವಾದರೆ:**

ಪಾರಿಜಾತ ಬೀಜವನ್ನು ನಿಂಬೆಹಣ್ಣಿನ ರಸದಲ್ಲರೆದು ಲೇಪಿಸುವುದು.

ತುಂಬೆ ಗಿಡದ ಸ್ವರಸಕ್ಕೆ ಸುಣ್ಣ ಹಾಕಿ ಜಾಳಿಸಿ ಅರಿದಂತೆ ಲೇಪಿಸುವುದು.

**ಕಪಾಲ ವಾತಕ್ಕೆ:**

ಶತಾವರಿ ಬೇರನ್ನು ಗಂಜಿ ತಿಳಿಯಲ್ಲರೆದು ತಲೆಗೆ ಹಾಕುವುದು.

**ಮಕ್ಕಳ ಕೆಪ್ಪಟೆ ಹುಣ್ಣಾದರೆ:**

ಅಶ್ವತ್ಥದ ಕೆತ್ತೆಯನ್ನು ಕಲಗಚ್ಚಿನಲ್ಲಿ ತೇದು ತುಪ್ಪದಲ್ಲಿ ಜಾಳಿಸಿ ಲೇಪಿಸುವುದು.

**ಮಕ್ಕಳ ಬಾಯಲ್ಲಿ ಜೊಲ್ಲು ಸುರಿಯುತ್ತಿದ್ದರೆ:**

ಇಲಿಕಿವಿ ಗಿಡದ ಅಷ್ಟಾವಶೇಷ ಕಷಾಯ ಮಾಡಿ ಕುಡಿಸುವುದು. (ಹನ್ನೆರಡು ದಿನ)

# ಪರಿಶಿಷ್ಟ

**ಮುಖಕಾಂತಿಗೆ:**

ಬಣ್ಪಿನ ಕೆತ್ತೆ, ಮಂಜಿಷ್ಠ ಕಡ್ಡಿ, ಅಡುಸೋಗೆ ಬೇರು ಇವುಗಳನ್ನು ಸಮಾಂಶ ತಗೆದು ನೊರೆ ಹಾಲಿನಲ್ಲರೆದು ಮುಖಕ್ಕೆ ಲೇಪಿಸಿದರೆ ಮುದ್ದಣು, ಕಪ್ಪು ಬಿಳಿ ಕಲೆ ಇತ್ಯಾದಿ ನೀಗಿ ಮುಖವು ಸ್ವಚ್ಛವಾಗುವುದು.

ಹಸಿ ಅರಸಿನಗಡ್ಡೆ, ರಕ್ತಚಂದನ ಇವುಗಳನ್ನು ಎಮ್ಮೆಯ ಹಸಿ ಹಾಲಿನಲ್ಲಿ ಅರೆದು ಅರಿದಂತೆ ಲೇಪಿಸುವುದು. ಮುಖದ ವ್ಯಂಗ, ಮುದ್ದಣು, ಕಪ್ಪು, ಬಿಳಿ ಕಲೆ, ಚಿಕ್ಕ ತುರಿಗಜ್ಜಿಗಳು ಇತ್ಯಾದಿ ಗುಣವಾಗಿ ಮುಖವು ನಯವಾಗಿ ಶೋಭಿಸುವುದು.

**ಮುಖದ ಬಿಳಿ ಕಲೆಗೆ:**

ಬಿಳಿ ಶಂಖಪುಷ್ಪದ ಬೇರನ್ನು ಅಥವಾ ಹುಲಿಯ ಚರ್ಮವನ್ನು ಕ್ಷಾರ ಮಾಡಿ ಎಳ್ಳೆಣ್ಣೆಯಲ್ಲಿ ಕಲಸಿ ಲೇಪಿಸುವುದು.

ಎಲೆಹುರಿ ಗಿಡದ (ಏೀವದಿಗನ) ಬೇರಿನ ಸಿಪ್ಪೆಯನ್ನು ಅದರೆಲೆಯ ರಸದಲ್ಲರೆದು ಲೇಪಿಸುವುದು.

ತುಪ್ಪ, ಗೋಮೂತ್ರ, ಸಕ್ಕರೆ ಇವುಗಳನ್ನು ಸೇರಿಸಿ ಕುದಿಸಿ ಲೇಪಿಸುವುದು. (ಮೂರು ದಿನ)

**ಮುಖದ ಕಲೆಗೆ:**

ಉತ್ತರಣೆಯ ಕ್ಷಾರವನ್ನು ಗೋಮೂತ್ರದಲ್ಲರೆದು ಲೇಪಿಸುವುದು.

# ಎದೆಯ ಆರೋಗ್ಯ

**ಎದೆ ನೋವಾದರೆ (ಉರಃಕ್ಷತ):**

ಹರಳೆ ಗಿಡದ ಬೇರನ್ನು ಅಷ್ಟಾವಶೇಷ ಕಷಾಯ ಮಾಡಿ ಯವಕ್ಷಾರವನ್ನು ಮೇಲ್ಪುಡಿ ಹಾಕಿ ರಾತ್ರಿ ಮತ್ತು ಬೆಳಿಗ್ಗೆ ಸೇವಿಸುವುದು. ಮೂರು ದಿನ–ಆರು ದಿನ.

ಬೂದಿ ಕುಂಬಳದೆಲೆಯ ಒಂದು ಔನ್ಸು ರಸಕ್ಕೆ ಒಂದು ಚಮಚ ಎಳ್ಳೆಣ್ಣೆ ಹಾಕಿ ಬೆಳಿಗ್ಗೆ ಸೇವಿಸುವುದು. (ಮೂರು ಯಾ ಆರು ದಿನ)

ಒಂದು ತುಂಡು ಕೋಲರಗು ಬಟ್ಟೆ ಚೂರಿನಲ್ಲಿ ಕಟ್ಟಿ ಚೆನ್ನಾಗಿ ಕುದಿಯುವ ಒಂದು ಕುಡ್ತೆ ನೀರಿನಲ್ಲಿ ಮುಳುಗಿಸಿರಿಸಿ ನೀರು ಕೆಂಪಾಗಿ ಕಷಾಯವಾದಾಗ ಸೋಸಿ ಚೆನ್ನಾಗಿ ತಣಿಸಿ ಸ್ವಲ್ಪ ಹಾಲು ಸಕ್ಕರೆಗಳನ್ನು ಸೇರಿಸಿ ತಣಿಸಿ ಒಂದು ತೊಲೆ ಜೇನನ್ನು ಹಾಕಿ ಮಿಶ್ರ ಮಾಡಿ ಸೇವಿಸುವುದು. (ಒಂದು ವಾರ)

**ಹೃದ್ರೋಗ (ಹೃದಯ ಕೋಶದ ರೋಗ) ವಿದ್ದರೆ:**

ಪಾಲಾಶ ಬೀಜವನ್ನು ಅರೆ ಹಣ್ಣಾದ ನಿಂಬೆಹುಳಿಯ ರಸದಲ್ಲಿ ಅರೆದು ಗಜಿಗೆಕಾಯಿ ಗಾತ್ರ ಮಾತ್ರೆ ಮಾಡಿ ಸೂರ್ಯೋದಯದ ಹೊತ್ತಿಗೆ ಒಂದು ಮಾತ್ರೆಯನ್ನು ಸೇವಿಸುವುದು. ಹಾಲನ್ನ ಪಥ್ಯ. ಹೀಗೆ ಒಂದು ಮಾತ್ರೆಯ ಸೇವನೆಯಿಂದಲೇ ಗುಣಸಿಗುವುದು. ಅವಶ್ಯ ಕಂಡಲ್ಲಿ ಮಾತ್ರ ಮರುದಿನವೂ ಓೕಗೆಯೇ ಇನ್ನೊಂದು ಮಾತ್ರೆಯನ್ನು ಸೇವಿಸುವುದು.

**ಸೈಕಲ್ ಸವಾರಿ ಮಾಡಿ ಬಂದ ಎದೆ ನೋವಾದರೆ:**

ಕಡಲೆಯ ಕಾಳಿನಷ್ಟು ಬೆಲ್ಲವನ್ನು ಬಾಯಿಯಲ್ಲಿ ಹಾಕಿಕೊಂಡು ಹಾಯಾಗಿ ಅಂಗಾತ ಮಲಗಿ ಬೆಲ್ಲವನ್ನು ಜಗಿಯದೆ ಒಸರಿದಂತೆ ಅದರ ರಸವನ್ನು ನುಂಗುತ್ತಿರಬೇಕು. ಹೀಗೆ ದಿನದಲ್ಲಿ ಎರಡು ಹೊತ್ತಿನಂತೆ ಒಂದು ವಾರ ಸೇವನೆಯಿಂದ ಪೂರ್ಣ ಗುಣವಾಗುವುದು.

**ಮಕ್ಕಳ ಎದೆ ಗುಂಡಿಗೆ ರೋಗ (ಪಕ್ಕೆರೋಗ) ವಾದರೆ:**

ಪಲ್ಲೆ ಬಳ್ಳಿಯ ಕೆತ್ತೆಯನ್ನು ದನದ ಕಾಯಿಸಿದ ಹಾಲಿನಲ್ಲಿ ಕಿವುಚಿ ಪ್ರತಿದಿನವೂ ಬೆಳಗ್ಗೆ ಕುಡಿಸಿದರೆ ಕೆಲವೇ ದಿನಗಳಲ್ಲಿ ಗುಣವಾಗುವುದು.

# ಉಬ್ಬಸ

**ಉಬ್ಬಸಕ್ಕೆ:**

ಶಾಂತಿಕಾಯಿಯ ಒಂದು ಚಮಚ ಚೂರ್ಣವನ್ನು ೨ ಚಮಚ ಜೇನಿನಲ್ಲಿ ಕಲಸಿ ರಾತ್ರಿಯೂಟದ ಅನಂತರ ನಿಧಾನವಾಗಿ ನೆಕ್ಕುವುದು.

ಹಾಗಲ ಸೊಪ್ಪಿನ ಸ್ವರಸಕ್ಕೆ ಸಮಪಾಲು ಎಮ್ಮೆಯ ಮೊಸರು ಹಾಕಿ ಪ್ರತಿದಿನವೂ ಬೆಳಗ್ಗೆ ಕಾಲು ಯಾ ಅರ್ಧ ಕುಡ್ತೆಯಂತೆ ಸೇವಿಸುವುದು. ಮೂರು ದಿನ. ಇದರಿಂದ ಕೃಮಿಯೂ ಮಾಯವಾಗಿ ಉಬ್ಬಸವು ಗುಣವಾಗುವುದು.

ಒಂದು ತೊಲೆ ಕರಿತುಳಸಿಯ ಎಲೆಯನ್ನು ನುಣ್ಣಗೆ ಅರೆದು ಅರ್ಧ ಕುಡ್ತೆ ನೊರೆ ಹಾಲಿನಲ್ಲಿ ಕದಡಿ ಬೆಳಗ್ಗೆ ಮಾತ್ರ ಸೇವಿಸುವುದು. ಒಂದು ವಾರ. ಪಥ್ಯಕ್ಕೆ ಸಪ್ಪೆ ಆಹಾರ ಸೇವನೆ.

ಕೋಞಾಣು ಚೂರ್ಣವನ್ನು ಬಿಸಿ ನೀರಿನಲ್ಲಿ ಹಾಕಿ ಹಾಲನ್ನೂ ಸಕ್ಕರೆಯನ್ನೂ ಸೇರಿಸಿ ಸೇವಿಸುವುದು.

**ತೈಲ ಯೋಗ:**

ನೆಲಕ್ಕಂಚಿ ಸಪ್ಪಿನ ನಾಲ್ಕು ಪಾಲು ರಸಕ್ಕೆ ಒಂದು ಪಾಲು ಎಳ್ಳೆಣ್ಣೆ ಸೇರಿಸಿ ಇಟ್ಟೀವು ಚಿಗುರು, ಮಾವಿನ ಚಿಗುರು, ನೇರಳೆ ಚಿಗುರು, ಇವುಗಳನ್ನು ಸಮಾಂಶವಾಗಿ ತೆಗೆದು ಕಲ್ಕ ಸೇರಿಸಿ ಕಾಯಿಸಿ ಅರಗು ಪಾಕವಲ್ಲಿಳಿಸಿ ಪ್ರತಿದಿನವೂ ಒಂದು ಚಮಚ ಎಣ್ಣೆಯನ್ನು ಬಿಸಿನೀರಿನಲ್ಲಿ ಹಾಕಿ ಸೇವಿಸಿದರೆ ಉಬ್ಬಸ, ಕಫದ ಗೂಡು, ಕೃಮಿಯೂ ಸಹ ಹೋಗಿ ಆರೋಗ್ಯವು ಸಿದ್ಧಿಸುವುದು.

**ಉಬ್ಬಸಕ್ಕೆ:**

ಕಂಚುವಾಳಿಯ ಒಳಗಿನ ಕುಸುಮ, ಕರಿಮೆಣಸಿನ ಚೂರ್ಣ, ಇಂದುಪ್ಪು, ಇವುಗಳನ್ನು ಸಮಾಂಶವಾಗಿ ಸೇರಿಸಿ ಹಳೆಜೇನನ್ನೂ ಸೇರಿಸಿ ಕಲಸಿ ಅಡಕೆಯ ಗಾತ್ರದಷ್ಟು ಉಂಡೆ ಮಾಡಿ ಬೆಳಗ್ಗೆ ತಿಂದೇ ಏಳುವುದು. ಹೀಗೆ ಮೂರು ದಿನ. ಇದರಿಂದ ಕಾಸಶ್ವಾಸ. ಮೇಲುಬ್ಬಸ, ಎಕ್ಸ್ಟ್, ಇತ್ಯಾದಿ ಗುಣವಾಗುವುದು.

ಅತ್ತಿ ಕೋಡಿಯನ್ನು ಪಕ್ವ ಹಾಲು ಸೇರಿಸಿ ಅರೆದು ಜೇನಿನಲ್ಲಿ ಕಲಸಿ ದಿನಕ್ಕೊಂದು ತೊಲಿಯಂತೆ ಸೇವಿಸುವುದು. ಮೂರು ದಿನ.
ಪಥ್ಯಕ್ಕೆ—ತೊಗರಿಸಾರು ಮತ್ತು ಅನ್ನವು.

ಆರು ಪಾಲು ಅಣಲೆಕಾಯಿ ಸಿಪ್ಪೆಯೊಂದಿಗೆ ಒಂದು ಪಾಲು ಸೈಂಧವವನ್ನು ಸೇರಿಸಿ ಕರಿನುಕ್ಕಿಯ ರಸದಲ್ಲರೆದು ಕಡಲೆಯ ಗಾತ್ರದಷ್ಟು ಮಾತ್ರೆಗಳನ್ನಾಗಿ ಮಾಡಿ ಹೊತ್ತಿಗೆ ಒಂದರಂತೆ ಎರಡು ಹೊತ್ತು ಸೇವನೆ ಮಾಡುವುದು.

**ಪಂಚ ದೀಪಕಾದಿ ಚೂರ್ಣ:**

ಶುಂಠಿ, ಮೆಣಸು, ಹಿಪ್ಪಲಿ, ಜೀರಿಗೆ, ಯಾಲಕ್ಕಿ ಇವುಗಳನ್ನು ಸಮಾಂಶವಾಗಿ ತಗೆದು ಸೇರಿಸಿ ಚೂರ್ಣಿಸಿ ಚೂರ್ಣದಷ್ಟೆ ಸಕ್ಕರೆ ಸೇರಿಸಿ ಸೇವಿಸುವುದು.

ಒಂದು ದೊಡ್ಡ ಶಾಂತಿಕಾಯಿಯನ್ನು ಎರಡು ಭಾಗಗಳಾಗುವಂತೆ ಒಡೆದು ಒಳಗಿನ ಓಡು ತಿರುಳು ಬಿಸುಟು ಶಾಂತಿಕಾಯಿಯ ಎಂಟನೆ ಒಂದಂಶ ಶುದ್ಧ ಕುಂಕುಮ ಕೇಸರಿಯನ್ನು ಅದರೊಳಗೆ ತುಂಬಿ ಮುಚ್ಚಿ ಮಣ್ಣು ಮೆತ್ತಿ ಬೆಂಬೂದಿಯಲ್ಲಿ ಬೇಯಿಸಿ ತೆಗೆದು ಅನಂತರ ಆ ಶಾಂತಿಕಾಯಿ ಸಿಪ್ಪೆ, ಕುಂಕುಮ ಕೇಸರಿ ಒಟ್ಟಿಗೆ ನುಣ್ಣಗೆ ಅರೆದು ತೊಗರಿ ಗಾತ್ರದ ಮಾತ್ರೆ ಮಾಡಿ ಮೂರು ಹೊತ್ತೂ ಊಟದ ನಂತರ ಸೇವಿಸುವುದು.

ಎರಡು ತೊಲೆ ಕೊತ್ತಂಬರಿಯನ್ನು ಜಜ್ಜಿ 4 ಕುಡ್ತೆ ನೀರು ಹಾಕಿ ಕಷಾಯವಿರಿಸಿ ಬತ್ತಿಸಿ ಒಂದು ಕುಡ್ತೆ ಮಾಡಿ ಚೆನ್ನಾಗಿ ತಣಿಸಿ ಒಂದು ತೊಲೆ ಜೇನು ಹಾಕಿ ಹೊತ್ತಿಗೆ ಅರ್ಧ ಕುಡ್ತೆ ಪ್ರಕಾರ ಎರಡು ಹೊತ್ತು ಸೇವನೆ. ಹನ್ನರಡು ಯಾ ಇಪ್ಪತ್ತನಾಲ್ಕು ದಿನ.

ಹಸಿ ಶುಂಠಿಯನ್ನೂ ಅಂಬೆ ಹಳದಿಯನ್ನೂ ಜಜ್ಜಿ ಮಜ್ಜಿಗೆಯಲ್ಲಿ ಹಾಕಿ ಕುದಿಸಿ ಮಜ್ಜಿಗೆಯನ್ನು ಮಾತ್ರ ಕುಡಿಸುವುದು ಅಥವಾ ಕೋ[illegible]ಣವನ್ನು ಮಜ್ಜಿಗೆಯಲ್ಲಿ ಕುದಿಸಿ ಆ ಮಜ್ಜಿಗೆ ಸೇವನೆ.

ನೆಲ್ಲಿ ಸೊಪ್ಪನ್ನು ಹುರಿದು ಸಮಾಂಶ ಮಧ್ಯಾಹ್ನಮಲ್ಲಿಗೆ ಸೊಪ್ಪು ಸೇರಿಸಿ ಚೂರ್ಣ ಮಾಡಿ ಒಂದು ಚಿಟಿಕೆ ಚೂರ್ಣವನ್ನು ಜೇನಿನಲ್ಲಿ ಕಲಸಿ ಎರಡು ಹೊತ್ತು ನೆಕ್ಕಿಸುವುದು.

ನೊರೆಕಾಯಿ ಬೀಜದ ಪಪ್ಪುವಿಗೆ ಸಮಪಾಲು ಶುಂಠಿ ಸೇರಿಸಿ ಚೂರ್ಣ ಮಾಡಿ ಬೆಲ್ಲದಲ್ಲಿ ಕಲಸಿ ಬೊಗರಿಯ ಗಾತ್ರ ದಿನದಲ್ಲಿ ಎರಡು ಹೊತ್ತು ಸೇವಿಸುವುದು. ಒಂದು ವಾರ.

**ಅಂಜನ:** ದಂತಿ ಬೀಜ, ಹರಳಬೀಜ, ಬೇರದ ಬೀಜ, ಇವುಗಳ ಪೈಕಿ ಯಾವುದಾದರೂ ಒಂದನ್ನು ಮೊಲೆ ಹಾಲಿನಲ್ಲಿ ತೇದು ಪ್ರಾತಃಕಾಲ ಕಣ್ಣಿಗೆ ಹಾಕುವುದು. ಮೂರು ದಿನ.

ಪಂಚ ಪತ್ರೆಯೆಲೆಯ ಅರ್ಧ ಯಾ ಒಂದು ಔನ್ಸ್‌ರಸಕ್ಕೆ ಒಂದು ತೊಲ ಸಕ್ಕರೆ ಹಾಕಿ ದಿನಾ ಬೆಳಗ್ಗೆ ಸೇವನೆ ಮಾಡುವುದು. ಒಂದುವಾರ.

**ಉಕ್ಕುವ ಉಬ್ಬಸಕ್ಕೆ:**

ಒಂದು ಚಮಚ ಎಕ್ಕೆ ಹಾಲನ್ನು ಹಾಕಿ ಅಕ್ಕಿಯನ್ನರೆದು ರೊಟ್ಟಿ ಮಾಡಿ ಎಳ್ಳೆಣ್ಣೆಯಲ್ಲಿ ಬೇಯಿಸಿ ದಿನಕ್ಕೊಂದು ರೊಟ್ಟಿಯಂತೆ ಸೇವಿಸುವುದು. ಮೂರು ದಿನ. ಇದರಿಂದ ಊರ್ಧ್ವಶ್ವಾಸವು ಕಡಿಮೆಯಾಗುವುದು.

ಹುಣಸೆ ಮರದಲ್ಲಿ ಒಡೆದು ಎದ್ದು ನಿಂದಿರುವ ಕೆತ್ತೆಯನ್ನು ಎಬ್ಬಿಸಿ ಭಸ್ಮಮಾಡಿ ದಿನದಲ್ಲಿ ಒಂದು ಚಿಟಿಕೆ ಭಸ್ಮವನ್ನು ಹಸಿ ನೀರಿನಲ್ಲಿ ಕವಡಿ ಸೋಸಿ ಸೇವಿಸುವುದು.

ಭಜೆಯ ಭಸ್ಮವನ್ನು ಬೆಲ್ಲದಲ್ಲಿಯೂ ನೀರಿನಲ್ಲಿ ಸೇವಿಸುವುದು.

ನುಗ್ಗೆ ಕೆತ್ತೆ, ಅಗಸೆ ಕೆತ್ತೆ ಗಜಿಗ, ಶುದ್ಧಮಾಡಿದ ಚಿತ್ರಮೂಲ ಇವುಗಳನ್ನು ಸಮಾಂಶವಾಗಿ ಚೂರ್ಣಮಾಡಿ ಮಜ್ಜಿಗೆಯಲ್ಲಿ ಸೇವಿಸುವುದು.

**ಕಠಿಣ ಉಬ್ಬಸಕ್ಕೆ:**

ಯಾಲಕ್ಕಿ, ಲವಂಗ, ಪತ್ರೆ, ಶುಂಠಿ, ಹಿಪ್ಪಲಿ, ಕರಿಮೆಣಸು, ನೆಲ ಗುಳ್ಳದ ಗಿಡದ ಬೇರು, ಗಂಟು ಭಾರಂಗಿ ಬೇರು, ಇವುಗಳನ್ನು ಪ್ರತ್ಯೇಕ ಎರಡಾಣೆ ತೂಕದಂತೆ ಸೇರಿಸಿ ಜಜ್ಜಿ ನಾಲ್ಕು ಕುಡ್ತೆ ನೀರಿನಲ್ಲಿ ಕಷಾಯ ಏರಿಸಿ ಅರ್ಧ ಕುಡ್ತೆಯಾದಾಗ ಇಳಿಸಿ ಆರಿಸಿ ತಣಿಸಿ ಒಂದು ಚಮಚ ಜೇನನ್ನೂ ಒಂದು ಚಿಟಿಕೆ ಹಿಪ್ಪಲೀ ಚೂರ್ಣವನ್ನೂ ಹಾಕಿ ದಿನದಲ್ಲೊಂದು ಹೊತ್ತು ಸೇವಿಸುವುದು. ಒಂದುವಾರ. ಪಥ್ಯಕ್ಕೆ ಸಾರನ್ನ ಹಾಗೂ ಸಪ್ಪೆ ಯಾಹಾರವು.

ಆಡುಸೋಗೆಯ ಪಂಚಾಂಗವನ್ನು (ಬೇರು, ಕೆತ್ತೆ, ಸಪ್ಪು, ಹೂ, ಕಾಯಿ) ಅಷ್ಟಮಾಂಶ ಕಷಾಯಃ ಮಾಡಿ ತಣಿಸಿ ಒಂದು ಚಮಚ ಎಳ್ಳೆಣ್ಣೆ

ಯನ್ನೂ ಅಷ್ಟೇ ಜೇನನ್ನೂ ಹಾಕಿ ಎರಡು ಹೊತ್ತು ಸೇವಿಸುವುದು. ಒಂದು ವಾರ. ಪಥ್ಯಕ್ಕೆ ಚಪ್ಪೆಯಾಹಾರವು.

ಮುಕ್ಕಾಲು ತೊಲೆ ಹುರಿದ ಇಂಗು, ಒಂದೂವರೆ ತೊಲೆ ಶುದ್ಧಿ ಮಾಡಿದ ಚಿತ್ರಮೂಲದ ಬೇರು, ಮೂರು ತೊಲೆ ಸುವರ್ಣಗಡ್ಡೆ, ನಾಲ್ಕೂವರೆ ತೊಲೆ ಹಿಪ್ಪಲಿ, ನಾಲ್ಕು ತೊಲೆ ಶುಂಠಿ, ಒಂದು ತೊಲೆ ಸಂದು ಬಳ್ಳಿ ಇವುಗಳ ಚೂರ್ಣಮಾಡಿ ಸಮಾಂಶ ಬೆಲ್ಲದ ರವೆಯನ್ನು ಸೇರಿಸಿ ಹೊತ್ತಿಗೆ ಮುಕ್ಕಾಲು ತೊಲೆಯಂತೆ ಎರಡು ಹೊತ್ತು ಸೇವಿಸುವುದು. ಒಂದುವಾರ. ಪಥ್ಯಕ್ಕೆ ತೊಗರಿ ಸಾರು ಅನ್ನ. ಇದರಿಂದ ಕ್ಷಯವು ಸಹ ಗುಣವಾಗುವುದು.

**ಎಕ್ಕುವ ಉಬ್ಬಸಕ್ಕೆ:**

ಬಲೀಂದ್ರಪಾಲೆ ಮರದ ಸೊಪ್ಪಿನ ರಸಕ್ಕೆ ಸಮಾಂಶ ಜೇನು ಸೇರಿಸಿ ಜಾಳಿಸಿ ನೆಕ್ಕುವುದು,

**ವಿ. ಸೂ.**–ಮೇಲಿನ ಔಷಧ ಸೇವನಾನಂತರ ತ್ರಿಫಲಾ ಖದಿರ ಕಷಾಯ ಅಥವಾ ಭೇದಿಗೆ ಯಾವುದಾದರೂ ಔಷಧ ತೆಗೆದುಕೊಂಡರೆ ಶೀಘ್ರದಲ್ಲೇ ಗುಣವಾಗುವುದು.

**ನೇವಸಕ್ಕೆ:**

ಚಿತ್ರಮೂಲದ ಬೇರು (ಶುದ್ಧಿ) ನೆಲಗುಳ್ಳದ ಬೇರು, ಕರಿಮೆಣಸಿನ ಬೇರು, ಆಡುಸೋಗೆ ಬೇರು, ಹಿಪ್ಪಲಿ, ಕಾಡು ಹಿಪ್ಪಲಿಬೇರು, ಶುಂಠಿ ಇವುಗಳ ಅಷ್ಟಮಾಂಶ ಕಷಾಯ ಮಾಡಿ ಸೇವಿಸುವುದು.

ಬಾಲಮೆಣಸು ೧, ಏಲಕ್ಕಿ ೨, ಲವಂಗ ೨, ಹಿಪ್ಪಲಿ ೩, ಜೇಷ್ಠಮಧು ೩, ದಾಲಚೀನಿ ೩, ಕರಿಮೆಣಸು ೪, ಶುಂಠಿ ೪, ಜಿರುತೇಕು ೪, ಈ ಪ್ರಕಾರ ಪಾಲುಗಳನ್ನಾಗಿ ತೆಗೆದು ಸೇರಿಸಿ ಹೊತ್ತಿಗೊಂದು ತೊಲೆಯಂತೆ ದಿನ ಒಂದು ಹೊತ್ತು ಸೇವಿಸುವುದು. (ಒಂದು ವಾರ)

ಒಂದು ತೊಲೆ ಹರಳೆಣ್ಣೆಯನ್ನೂ, ಐದು ತೊಲೆ ಜೇನನ್ನೂ ಸೇರಿಸಿ ಮಿಶ್ರಣಮಾಡಿ ಒಂದೊಂದು ಚಮಚ ಪ್ರಕಾರ ರಾತ್ರೆ ಮತ್ತು ಬೆಳಗ್ಗೆ ಸೇವಿಸುವುದು. (ಒಂದು ವಾರ) ಇದರಿಂದ ಸಂಪೂರ್ಣ ಗುಣವಾಗುವುದು.

ಒಂದು ತೊಲೆ ಲವಂಗವನ್ನು ಅರ್ಧಕುಡ್ತೆ ನೀರಿನಲ್ಲಿ ಹಾಕಿ ಶೀತ ಕಷಾಯ ಮಾಡಿ ಅರ್ಧಕುಡ್ತೆಯಂತೆ ಆಯಾ ಹೊತ್ತು ತಯಾರಿಸಿ ಮೂರು ಹೊತ್ತು ಸೇವಿಸುವುದು. (ಹನ್ನೆರಡು ದಿನ)

**ನೇವಸಕ್ಕೆ:**

ನೆಕ್ಕರಿಕನ ಚಿಗುರಿನ ಸ್ವರಸಕ್ಕೆ ಸಮಾಂಶ ಕಂಚು ಹುಳಿಯ ರಸವನ್ನು ಸೇರಿಸಿ ಪ್ರಾತಃ ಅರ್ಧ ಔನ್ಸು ಸೇವಿಸುವುದು.

ಮುಚ್ಚಿರು ಮರದ ಕೆತ್ತೆಯ ರಸದಲ್ಲಿ ರಾತ್ರಿ ಅಕ್ಕಿಹಾಕಿ ಅರೆದು ಮಣ್ಣಿ ಕಾಯಿಸಿಟ್ಟು ಬೆಳಗ್ಗೆ ಜೇನು ಹಾಕಿ ತಿನ್ನುವುದು.

ಕಾಲು ಕಾಲು ತೊಲೆ ಹಿಪ್ಪಲಿಯನ್ನೂ, ಜ್ಯೇಷ್ಠ ಮಧುವನ್ನೂ ಮಜ್ಜಿಗೆಯಲ್ಲರೆದು ಕುದಿಸಿ ಸೇವಿಸುವುದು.

ತುಳಸಿಯೆಲೆ, ಗರಗ, ಇವುಗಳನ್ನು ಸಮಾಂಶ ಮಜ್ಜಿಗೆಯಲ್ಲಿ ಹಾಕಿ ಬೇಯಿಸಿ, ಶುಂಠಿ, ಮೆಣಸು (ಕಾಳಮೆಣಸು) ಓಮಗಳನ್ನು ಚೂರ್ಣ ಮಾಡಿ ಹಾಕಿ ಸೇವಿಸುವುದು.

ಕಾಡು ಹಿಪ್ಪಲಿ ಬೇರನ್ನೂ, ನುಕ್ಕಿ ಚಿಗುರನ್ನೂ ಮಜ್ಜಿಗೆಯಲ್ಲರೆದು ಕುದಿಸಿ ಸೇವಿಸುವುದು.

ಒಣ ಅರಸಿನ ಗಡ್ಡೆ, ಹಿಪ್ಪಲಿ, ಕರಿಮೆಣಸು, ಶುಂಠಿ. ಇವುಗಳನ್ನು ಸಮಾಂಶ ತೆಗೆದು ಚೂರ್ಣಮಾಡಿ ಬೆಲ್ಲವನ್ನೂ; ಎಳ್ಳೆಣ್ಣೆಯನ್ನೂ ಸೇರಿಸಿ ಕಲಸಿ ದಿನವೂ ಒಂದೊಂದು ತೊಲೆ ಸೇವಿಸುವುದು. ಹನ್ನೆರಡು ದಿನ ಪಥ್ಯಕ್ಕೆ—ಹಾಲನ್ನ ಚಪ್ಪೆಯಾಹಾರ.

**ಮಕ್ಕಳ ನೇವಸಕ್ಕೆ:**

ಏಲಕ್ಕಿ, ಲವಂಗಪಟ್ಟೆ, ಇವುಗಳನ್ನು ಚೂರ್ಣಮಾಡಿ ಜೇನಿನಲ್ಲಿ ಚಾಳಿಸಿ ದಿನವೂ ಎರಡು ವೇಳೆ ಸೇವಿಸುವುದು. ಐದು ದಿನ.

**ಮಕ್ಕಳ ಉಬ್ಬಸ ಮೊದಲಾದ್ದಕ್ಕೆ:**

ಹಿಪ್ಪಲಿಯನ್ನು ವಸ್ತ್ರಗಾಳಿತ ಚೂರ್ಣ ಮಾಡಿ ಪ್ರತಿದಿನವೂ ಬೆಳಗ್ಗೆ ಜೇನಿನಲ್ಲಿ ಕಲಸಿ ನೆಕ್ಕಿಸುವುದು. ಇದರಿಂದ ಮಕ್ಕಳ ಜೊಲ್ಲು, ಉಬ್ಬಸ, ಕೆಮ್ಮು, ಹೊಟ್ಟೆಬಾವು, ಉಬ್ಬರ ಇತ್ಯಾದಿ ಗುಣವಾಗುವುವು.

**ಕಫ ಕಟ್ಟಿ ಉಬ್ಬಸವಾಗುವುದಿದ್ದರೆ:**

ಅಂಡೆ ಪಾಚೋವು ಸೊಪ್ಪು, ಓಮ, ಕರಿಮೆಣಸು, ಇವುಗಳನ್ನು ಸಮಾಂಶ ಕಂಚುಹುಳಿ ರಸದಲ್ಲಿ ನುಣ್ಣಗೆ ಅರೆದು ಕಡಲೆಯ ಕಾಳಿನ ಗಾತ್ರ

ದಷ್ಟು ಮಾತ್ರೆ ಮಾಡಿ ದಿನವೂ ಒಂದು ಮಾತ್ರೆಯಂತೆ ಸೇವಿಸುವುದು. ಹದಿನೈದು ದಿನ. ಇದು ನ್ಯೂಮೋನಿಯಾ ಜ್ವರಕ್ಕೂ ಹಿತವಾಗಿದೆ.

**ಅಜೀರ್ಣವಾಗಿ ಉಬ್ಬಸ ಬರುವುದಿದ್ದರೆ:**

ಒಂದು ಪಾಲು ಏಲಕ್ಕಿ, ಎರಡು ಪಾಲು ಲವಂಗ ಚಕ್ಕೆ, ಮೂರು ಪಾಲು ನಾಗಕೇಸರ, ನಾಲ್ಕು ಪಾಲು ಕರಿಮೆಣಸು, ಐದು ಪಾಲು ಹಿಪ್ಪಲಿ, ಆರು ಪಾಲು ಶುಂಠಿ ಇವುಗಳನ್ನು ಚೂರ್ಣ ಮಾಡಿ ಕಾಲುತೊಲೆ ತೆಗೆದು ಸಮಾಂಶ ಸಕ್ಕರೆ ಸೇರಿಸಿ ಸೇವಿಸುವುದು. ಇದರಿಂದ ಜೀರ್ಣಶಕ್ತಿ ಬಂದು ಉಬ್ಬಸ ನಿಲ್ಲುವುದು.

**ಕಾಸ ಶ್ವಾಸಗಳಿಗೆ:**

ಬಿಲ್ವಪತ್ರೆಯ ಬೇರನ್ನು ನೀರಿನಲ್ಲಿ ನುಣ್ಣಗೆ ತೇದು ಬೆಣ್ಣೆಯಲ್ಲಿ ಜಾಳಿಸಿ ನೆಕ್ಕುವುದು. ಇದರಿಂದ ಉಬ್ಬಸ, ಕೆಮ್ಮು ಇತ್ಯಾದಿ ಗುಣವಾಗುವುದು.

ಎಲವದಿಗನ ಬೇರನ್ನು ತೆಂಗಿನಕಾಯಿಯ ನೀರಿನಲ್ಲಿ ತೇದು ಸೇವಿಸುವುದು. ಇದರಿಂದ ವಾಯು ಶಮನವಾಗಿ ಗುಣವಾಗುವುದು.

ಲೊಕ್ಕಿಯೆಲೆಯ ರಸ ನಾಲ್ಕು ತೊಲೆ. ಹಿಪ್ಪಲಿ ಚೂರ್ಣ ಎರಡು ತೊಲೆ, ದನದ ತುಪ್ಪ ಒಂದು ತೊಲೆ ಇವುಗಳನ್ನು ಸೇರಿಸಿ ಲೇಹ ಪಾಕವಾಗಿ ಕಾಯಿಸಿ ದಿನದಲ್ಲಿ ಒಂದು ತೊಲೆ ಪ್ರಕಾರ ಸೇವಿಸುವುದು. (ಏಳುದಿನ) ಪಥ್ಯಕ್ಕೆ ತೊಗರಿ ಸಾರನ್ನ.

ಸಮೂಲ ಆಡುಸೋಗೆಯನ್ನು ಅಷ್ಟಾವಶೇಷ ಕಷಾಯ ಮಾಡಿ ನಾಲ್ಕು ತೊಲೆ ಕಷಾಯಕ್ಕೆ ಒಂದು ತೊಲೆ ಅದರೆಲೆಯನ್ನರೆದು ಸೇರಿಸಿ ಲೇಹ ಪಾಕವಾಗಿ ಕಾಯಿಸಿ ದಿನದಲ್ಲಿ ಒಂದು ತೊಲೆ ಪ್ರಕಾರ ಸೇವಿಸುವುದು. (ಏಳುದಿನ) ಮೇಲಿನಂತೆ ಪಥ್ಯವು. ಇದರಿಂದ ತಮಕಶ್ವಾಸವು ಗುಣವಾಗುವುದು.

ಶುಂಠಿ, ಕರಿಮೆಣಸು, ಯಾಲಕ್ಕಿ, ಕಾವಿಕಲ್ಲು. ಇವುಗಳನ್ನು ಸಮಾಂಶ ಸೇರಿಸಿ ಚೂರ್ಣ ಮಾಡಿಟ್ಟುಕೊಂಡು ದಿನವೂ ಎರಡು ಹೊತ್ತು ಕಾಲು ಕಾಲು ತೊಲೆಯಂತೆ ಅರ್ಧ ತೊಲೆ ಜೇನಿನಲ್ಲಿ ಕಲಸಿ ನೆಕ್ಕುವುದು.

ನೊರೆಕಾಯಿಯ ರಸವನ್ನು (ಎರಡು ಬಿಂದು) ಹಸಿ ನೀರಿನಲ್ಲಿ ಹಾಕಿ ದಿನವೂ ಎರಡು ಹೊತ್ತು ಸೇವಿಸುವುದು.

**ಕಾಸಶ್ವಾಸ, ಉಬ್ಬಸ, ಎಕ್ಕ್ಯಟ್‌ಗಳಿಗೆ:**

ಒಂಬತ್ತು ತೊಲೆ ಗರಗದ ರಸ, ಮೂವತ್ತಾರು ತೊಲೆ ದನದ ತುಪ್ಪ, ಇವುಗಳಿಗೆ ಒಂದೊಂದು ಗುಂಜಿಯಂತೆ ವಿಶಾಲರಿ, ಹಿಪ್ಪಲಿ, ಜ್ಯೇಷ್ಠಮಧು, ಇವುಗಳನ್ನು ಚೂರ್ಣ ಮಾಡಿ ಸೇರಿಸಿ ಕಾಯಿಸಿ ಹದಪಾಕದಲ್ಲಿ ಆರಿಸಿ ಪುನಃ ಪುನಃ ಈ ತುಪ್ಪಕ್ಕೆ ಇದೇ ಮದ್ದುಗಳನ್ನು ಸೇರಿಸಿ ಕಾಯಿಸಿ ಆರಿಸುವುದು. ಹೀಗೆ (ಕ್ಷೀರಬಲಾದಂತೆ) ಆವರ್ತಿಸಿ ಈ ತುಪ್ಪವನ್ನು ತೊಗರಿಯ ಗಾತ್ರದಷ್ಟು, ಜೀರಿಗೆಯ ಕಷಾಯದಲ್ಲಿ ಹಾಕಿ ಸೇವಿಸುವುದು. ದಿನದಲ್ಲಿ ಎರಡು ಹೊತ್ತಿನ ಪ್ರಕಾರ ಒಂದು ವಾರ. ಅನಂತರ ಪ್ರತಿ ತಿಂಗಳೂ ಮೂರು ಮೂರು ದಿನದಂತೆ ಮೂರು ತಿಂಗಳು. ಪುನಃ ವರ್ಷದಲ್ಲಿ ಒಂದು ವಾರದಂತೆ ಮೂರು ವರ್ಷ ಸೇವಿಸಿದರೆ ಸಂಪೂರ್ಣ ಗುಣವಾಗಿ ಆರೋಗ್ಯ ಖಂಡಿತ ದೊರಯುವುದು.

**ಎಕ್ಕ್ಯಟಿಗೆ:**

ಶ್ರೀಗಂಧ ಅಥವಾ ಪಚ್ಚೆ ಕರ್ಪೂರವನ್ನು ಮೊಲೆ ಹಾಲಿನಲ್ಲಿ ತೇಯ್ದು ನಸ್ಯವೆರೆಯುವುದು.

ಶುದ್ಧಿ ಮಾಡಿದ ಇಂಗು, ಸೈಂಧವ, ಶುಂಠಿ, ಇವುಗಳನ್ನು ಚೂರ್ಣ ಮಾಡಿ ಬಿಸಿ ನೀರಿನಲ್ಲಿ ಸೇವಿಸಿದರೆ ಕೂಡಲೆ ಗುಣವಾಗುವುದು.

**ಸೌಖ್ಯವಿದ್ದವರಿಗೂ ಬರುವ ಎಕ್ಕ್ಯಟಿಗೆ:**

ಜಾಜಿಕಾಯಿಯನ್ನು ಕಲಗಚ್ಚಿನಲ್ಲಿ ತೇದು ನಾಲಿಗೆಗೆ ಹಾಕಿ ತಿಕ್ಕುವುದರಿಂದ ಗುಣವಾಗುವುದು.

**ಮಕ್ಕಳ ಎಕ್ಕ್ಯಟ್ ಮತ್ತು ವಾಂತಿಗೆ:**

ಹಿಪ್ಪಲಿ, ಜ್ಯೇಷ್ಠಮಧು, ಇವುಗಳನ್ನು ಮಾದಲ ಹುಳಿಯ ರಸದಲ್ಲಿ ಅರೆದು ಜೇನು ಹಾಕಿ ನೆಕ್ಕಿಸುವುದು.

# ಕೆಮ್ಮು

**ಕೆಮ್ಮು—ಕಾಸಕ್ಕೆ:**

ನೆಕ್ಕಿ ಸೊಪ್ಪು, ಅಮೃತಬಳ್ಳಿ ಸೊಪ್ಪು, ನೆಲಗುಳ್ಳದ ಸೊಪ್ಪು, ಇವುಗಳಲ್ಲಿ ಯಾವುದಾದರೂ ಒಂದನ್ನು ಉಪ್ಪು ಸೇರಿಸಿ ಜಗಿದು ಅದರ ರಸವನ್ನು ನುಂಗುವುದು ಅಥವಾ ಅದನ್ನು ತುಪ್ಪ ಹಾಕಿ ಹುರಿದು ತಿನ್ನುವುದು.

ಆಡುಸೋಗೆ ಚಿಗುರುಗಳನ್ನೂ ಇಂದುಪ್ಪನ್ನೂ ಸಮಾಂಶವಾಗಿ ತೆಗೆದು ಅರೆದು ನೆಲ್ಲಿಕಾಯಿಯಷ್ಟು ಬೆಳಗ್ಗೆ ಒಂದು ಹೊತ್ತು ಮೂರು ದಿನ ಸೇವಿಸುವುದು.

ಹೊಂಗಾರೆ ಕೆತ್ತೆಯನ್ನು ಜಜ್ಜಿ ರಸ ತೆಗೆದು ಒಂದೊಂದು ಔನ್ಸಿನಂತೆ ಕುಡಿಯುವುದು. (ಮೂರು ದಿನ). ಇದರಿಂದ ಕ್ರಿಮಿಯು ಮಾಯವಾಗಿ ಕೆಮ್ಮು ಗುಣವಾಗುವುದು.

ಹುಣಸೆಹಣ್ಣು ಮತ್ತು ಸುಣ್ಣ ಸಮಾಂಶ ಸೇರಿಸಿ ಅರೆದು ಕಡಲೆ ಕಾಳಿನ ಗಾತ್ರದ ಮಾತ್ರೆ ಮಾಡಿ ಸೇವಿಸುವುದು ಇದರಿಂದ ನಾಯಿಕೆಮ್ಮು ಸಹ ಗುಣವಾಗುವುದು.

ಹಸಿ ನೆಲ್ಲಿಕಾಯಿಯ ರಸಕ್ಕೆ ಅದರಷ್ಟೆ ಎಳ್ಳೆಣ್ಣೆ ಸೇರಿಸಿ ಒಂದು ಔನ್ಸು ಸೇವಿಸುವುದು. ಇದರಿಂದ ಕೋವೆ ಕೆಮ್ಮು ಸಹ ಗುಣವಾಗುವುದು.

ವಿಶಾಲರಿ, ಏಲಕ್ಕಿ, ಪುಷ್ಕರಮೂಲ, ಅಣಲೆಕಾಯಿ, ನೆಲ್ಲಿಚಟ್ಟು ಇವುಗಳನ್ನು ಸಮಾಂಶ ಚೂರ್ಣಮಾಡಿ ಧಾನ್ಯಾಮ್ಲದಲ್ಲಿ ಅರೆದು ಇಂದುಪ್ಪಿನ ಪುಡಿಯನ್ನು ಹಾಕಿ ಕಾಯಿಸಿ ಮಾತ್ರೆಮಾಡಿ ತಿನ್ನುವುದು.

ಹಿಪ್ಪಲಿಯನ್ನೂ ಬೆಳುಗಾರದ ಅರಳನ್ನೂ ಚೂರ್ಣಮಾಡಿ ಜೇನಿನಲ್ಲಿ ಕಲಸಿ ನೆಕ್ಕುವುದು.

ನಿಂಬೆಯ ಹಣ್ಣಿನ ರಸ, ಹೊನಗೊನ್ನೆಯ ರಸ, ಇವುಗಳನ್ನು ಸೇರಿಸಿ ಅರೆದು ಒಣಗಿಸಿ ಆಡುಸೋಗೆ ಸೊಪ್ಪಿನ ರಸ ಹಾಕಿ ಮರ್ದಿಸಿ ಜೇನಿನಲ್ಲಿ ಕಲಸಿ

ನೆಲ್ಲಿಕಾಯಿಯಂತೆ ಮಾತ್ರೆಮಾಡಿ ಹೊತ್ತಿಗೊಂದರಂತೆ ದಿನ ಎರಡು ಹೊತ್ತು ಸೇವಿಸುವುದು, (ಮೂರು ದಿನ). ಇದರಿಂದ ಎಲ್ಲಾ ತರದ ಕೆಮ್ಮು ಗುಣವಾಗುವುದು.

**ದೀರ್ಘಕಾಲವಾದ ಕೆಮ್ಮಿಗೆ:—**

ಹಿಪ್ಪಲಿಯನ್ನು ಚೂರ್ಣಮಾಡಿ ಸಣ್ಣ ಬದನೆಯೆಲೆಯ ಸ್ವರಸದಲ್ಲಿ ಕದಡಿ ಜೇನು ಹಾಕಿ ಸೇವಿಸುವುದು.

**ಕಫ ಕೆಮ್ಮಿಗೆ:—**

ಹಾಗಲ ಬೇರು, ಬದನೆ ಬೇರು, ಆಡುಸೋಗೆ ಬೇರು, ಶುಂಠಿ, ರಾಶ್ಮೆ ಇವುಗಳ ಅಷ್ಟಮಾಂಶ ಕಷಾಯ ಮಾಡಿ ಸೇವಿಸುವುದು.

ಅಳಲೆಕಾಯಿ, ಶುಂಠಿ, ಕಾಳಮೆಣಸು ಇವುಗಳನ್ನು ಹುರಿದು ಚೂರ್ಣಮಾಡಿ ಸಮಾಂಶ ಬೆಲ್ಲದಲ್ಲಿ ಕಲಸಿ ಎಳ್ಳೆಣ್ಣೆ ಸೇರಿಸಿ ಒಂದು ತೊಲೆ ಸೇವಿಸುವುದರಿಂದ ಕೂಡಲೆ ಗುಣಸಿಗುವುದು.

**ರಸಾಯನ:—**ಹಸಿ ಶುಂಠಿಯ ಒಂದು ಪಾವು ಹನಿಸಿದ ಶುದ್ಧ ರಸವನ್ನು ಐದು ತೊಲೆ ಬೆಲ್ಲ ಹಾಕಿ ಕಾಯಿಸಿ ಐದು ತೊಲೆ ಹಿಪ್ಪಲಿಯನ್ನೂ ಐದು ತೊಲೆ ಭತ್ತದ ಅರಳನ್ನೂ ಚೂರ್ಣಮಾಡಿ ಪಾಕಕ್ಕೆ ಹಾಕಿ ತೊಳಸಿ ಇಳಿಸುವುದು. ಚೆನ್ನಾಗಿ ತಣಿದ ಮೇಲೆ ಐದು ತೊಲೆ ಜೇನು ಹಾಕಿ ತೊಳಸಿ ಅರ್ಧ ತೊಲೆಯ ಪ್ರಕಾರ ಸೇವಿಸುವುದು. ಇದರಿಂದ ಕಫ, ಕೆಮ್ಮು, ಮಂದಾಗ್ನಿ, ಶೀತಪಿತ್ಥ ಇತ್ಯಾದಿ ಗುಣವಾಗುವುದು.

ಎಣಿಸಿ ಹತ್ತು ಬೆಳ್ತಿಗೆ ಅಕ್ಕಿಕಾಳುಗಳು, ಏಳು ತುಂಬೆಚಿಗುರು ಸೇರಿಸಿ ತುಂಬೆಯ ರಸದಲ್ಲಿ ಅರೆದು ಕುದಿಸಿ ಉಂಡೆಮಾಡಿ ಜೇನು ಹಾಕಿ ರಾತ್ರಿ ಸೇವಿಸುವುದು. (ಮೂರು ದಿನ). ಇದರಿಂದ ಕಠಿನ ಕೆಮ್ಮು, ಶೀತ, ನಂಜು ಸಹ ಗುಣವಾಗುವುದು.

ಕರಿ ತುಳಸಿಯ ರಸದಲ್ಲಿ ಮೂರು ಕರಿಮೆಣಸನ್ನು ಅರೆದು ಸೇವಿಸುವುದು. ಮಕ್ಕಳಿಗಾದರೆ ಈ ರಸದಲ್ಲಿ ಕರಿಮೆಣಸನ್ನು ಮೂರು ಸುತ್ತು ತೇದು ನೆಕ್ಕಿಸುವುದು.

**ಮೋಹ ಕೆಮ್ಮಿಗೆ:**

ಸಂದು ಬಳ್ಳಿಯನ್ನು ಬಾಡಿಸಿ ರಸ ತೆಗೆದು ಒಂದು ಔನ್ಸು ರಸಕ್ಕೆ ಒಂದು ತೊಲೆ ಜೇನು ಹಾಕಿ ಸೇವಿಸುವುದು.

ತೊಂಡೆ ಹಣ್ಣುಗಳನ್ನು ಸಕ್ಕರೆ ಸೇರಿಸಿ ಸೇವಿಸುವುದು. (ಮೂರು ದಿನ)

**ಕಠಿಣ ಕೆಮ್ಮಿಗೆ:**

ಈರೋಳಿಸರದ ಒಂದು ಔನ್ಸು ರಸಕ್ಕೆ ಕರಿಮೆಣಸಿನ ಚೂರ್ಣವನ್ನೂ ಸಕ್ಕರೆಯನ್ನೂ ಒಂದೊಂದು ಚಮಚ ಹಾಕಿ ಒಂದೌನ್ಸು ನೊರೆ ಹಾಲನ್ನೂ ಸೇರಿಸಿ ಸೇವಿಸುವುದು (ಮೂರು ಯಾ ಆರು ದಿನ). ಇದರಿಂದ ಮೂತ್ರ ದೋಷದಿಂದ ಬರುವ ಶೂಲೆ, ಕೆಮ್ಮು, ಉಬ್ಬಸ, ಮೇಹ ಕೆಮ್ಮು ಇತ್ಯಾದಿ ಗುಣವಾಗುವುದು.

ಬೆಳ್ಳುಳ್ಳಿ ಮತ್ತು ಕರಿಮೆಣಸುಗಳನ್ನು ನೀರಿನಲ್ಲಿ ಅರೆದು ಬೆಲ್ಲಪಾಕದಲ್ಲಿ ಕಾಯಿಸಿ ನೆಲ್ಲಿಕಾಯಿಯಂತೆ ಮಾತ್ರೆಗಳನ್ನು ಮಾಡಿ ದಿನವೂ ರಾತ್ರಿಯೂಟದ ನಂತರ ಒಂದು ಮಾತ್ರೆಯನ್ನು ಬಾಯಿಯಲ್ಲಿ ಹಾಕಿ ರಸವನ್ನು ನುಂಗುತ್ತಿರುವುದು.

**ನಾಯಿ ಕೆಮ್ಮಿಗೆ:**

ಬೆಳ್ಳುಳ್ಳಿಯನ್ನರೆದು ಎಳ್ಳೆಣ್ಣೆ ಸೇರಿಸಿ ಸೇವಿಸುವುದು.

ಗೋಳಿ ಹಾಲಿಗೆ ತುಸು ಸಕ್ಕರೆ ಹಾಕಿ ಕಲಸಿ ಹೊತ್ತಿಗೆ ಒಂದೊಂದು ಚಮಚದಂತೆ ಎರಡು ಹೊತ್ತು ಸೇವಿಸುವುದು. (ಒಂದು ವಾರ).

**ಒಣ ಕೆಮ್ಮಿಗೆ:**

ಜೀರಿಗೆಯನ್ನು ಹುರಿದು ಚೂರ್ಣಮಾಡಿ ತುಪ್ಪದಲ್ಲಿ ಕಲಸಿ ನೆಕ್ಕುವುದು.

ಜ್ಯೇಷ್ಠಮಧುವನ್ನು ಹಾಲುಕಷಾಯ ಮಾಡಿ ಸಕ್ಕರೆಯನ್ನೂ ತುಪ್ಪವನ್ನೂ ಹಾಕಿ ಸೇವಿಸುವುದು.

**ಸ್ವರಬಿದ್ದು ಒಣಕೆಮ್ಮು ಬಂದರೆ:**

ಗಟ್ಟಿದ ಗೇರಿನ ಸೊನೆಯನ್ನು ಬೆರಳಿನಲ್ಲಿ ತೆಗೆದು ಕಿರುನಾಲಿಗೆಗೆ ತಾಗಿಸಿದರೆ ಗುಣವಾಗುವುದು.

**ಉಷ್ಣ ಪಿತ್ತದ ಕೆಮ್ಮಿಗೆ:**

ಒಂದು ಹಿಡಿ ಸಮೂಲ ಹೊಸಗೊನ್ನೆ ಗಿಡವನ್ನು ತಂದು ಸ್ವಚ್ಛಪಡಿಸಿ ರಾತ್ರಿ ಹನಿ ತಾಗುವಂತೆ ಇರಿಸಿ ಬೆಳಗ್ಗೆ ಪೂಜಿ ಸೇರು ಸೇರಿಸಿ ಜಜ್ಜಿ ರಸ ತೆಗೆದು ಸಕ್ಕರೆ ಹಾಕಿ ಬೆಳಗ್ಗೆ ಸೇವಿಸುವುದು, (ಮೂರು ದಿನ). ಇದರಿಂದ ಕೆಮ್ಮು, ಶೀತ, ಕಫ, ಸಂಜೂ ಸಹ ಗುಣವಾಗುವುದು.

**ಪ್ರಾಯಸ್ಥರ ಕೆಮ್ಮಿಗೆ:**

ಅಳಲೆಕಾಯಿ, ಶುಂಠಿ, ಭದ್ರಮುಷ್ಟಿಗಡ್ಡೆ ಇವುಗಳನ್ನು ಸಮಾಂಶ ತೆಗೆದು ಚೂರ್ಣಮಾಡಿ ಅದರ ಎರಡು ಪಾಲು ಬೆಲ್ಲ ಸೇರಿಸಿ ನೆಲ್ಲಿಕಾಯಿ ಗಾತ್ರದಷ್ಟು ಉಂಡೆಗಳನ್ನಾಗಿ ಮಾಡಿ ಸೇವಿಸುವುದು. (ವಿ. ಸೂ: ಯುವಕರಾದವರು ಸೇವಿಸುವುದಿದ್ದರೆ ಜೇನು ಮತ್ತು ತುಪ್ಪ ಇವುಗಳನ್ನು ಒಂದು ಹೆಚ್ಚು ಒಂದು ಕಡಿಮೆಯಾಗಿ ಸೇರಿಸಿ ಅದರಲ್ಲಿ ಈ ಮಾತ್ರೆಯನ್ನು ತೇದು ಸೇವಿಸುವುದು). ದಶಮೂಲಗಳನ್ನು ಆಡಿನ ಹಾಲಿನಿಂದ ಕಷಾಯಮಾಡಿ ಕಲ್ಲುಸಕ್ಕರೆ ಹಾಕಿ ಸೇವಿಸುವುದು, (ಒಂದು ವಾರ). ಇದರಿಂದ ಎಲ್ಲಾ ತರದ ಕೆಮ್ಮು, ಉಬ್ಬಸ, ಆಯಾಸ, ಕ್ಷಯ ಇತ್ಯಾದಿಗಳು ಸಹ ಗುಣ ಗುಣವಾಗುವುವು.

**ಕ್ಷಯ ಕೆಮ್ಮಿಗೆ:**

ಆಡುಸೋಗೆ ಎಲೆಯನ್ನು ಹುರಿದು ಸಮಾಂಶ ಅರಳು ಸೇರಿಸಿ ಚೂರ್ಣ ಮಾಡಿ ಸಕ್ಕರೆ ಕೂಡಿಸಿ ತಿನ್ನುವುದು.

ಒಂದಾಣೆ ತೂಕ ಕರಿಮೆಣಸಿನ ಚೂರ್ಣವನ್ನು ಬೆಣ್ಣೆಯಲ್ಲಿ ಕಲಸಿ ನೆಕ್ಕುವುದು, (ನಾಲ್ವತ್ತೆಂಟು ದಿನ). ಇದರಿಂದ ಕಫ. ಕೆಮ್ಮು. ಉಬ್ಬಸ. ಕ್ಷಯ ಸಹ ಗುಣವಾಗುವುದು.

**ಉರಃಕ್ಷತಕ್ಕೆ:**

ಅರಗಿನ ಚೂರ್ಣವನ್ನು ಜೇನಿನಲ್ಲಿ ಜಾಳಿಸಿ ನೆಕ್ಕುವುದು. ಅಥವಾ ಕಷಾಯಮಾಡಿ ಹಾಲು. ಸಕ್ಕರೆ ಮತ್ತು ಜೇನುಗಳನ್ನು ಹಾಕಿ ಸೇವಿಸುವುದು. ಇದರಿಂದ ಎದೆನೋವು. ರಕ್ತ ಬರುವಿಕೆ ಇತ್ಯಾದಿ ಗುಣವಾಗುವುದು.

**ಉರೋಗ್ರಹಕ್ಕೆ:—**

ಎಳೆ ಸೀಯಾಳದ ಸಿಪ್ಪೆಯನ್ನು ಪಾದಾವಶೇಷ ಕಷಾಯಮಾಡಿ ಒಂದು ಕುಡ್ತೆಯಾದಾಗ ಒಂದು ಕುಡ್ತೆ ದನದ ಮಜ್ಜಿಗೆ ಹಾಕಿ ಬತ್ತಿಸಿ ಮಜ್ಜಿಗೆ ಮಾತ್ರ ಉಳಿಸಿ ಇಳಿಸಿ ಸೋಸಿ ಇಂದುಪ್ಪು ಹಾಕಿ ಸೇವಿಸುವುದು. ಇದರಿಂದ ಕಫ, ಬಾವು, ಎದೆನೋವು, ಉಬ್ಬಸ, ಇತ್ಯಾದಿ ಗುಣವಾಗುವುದು.

ಜೀರಿಗೆಯನ್ನೂ ಸಾಸಿವೆಯನ್ನೂ ಹುರಿದು ಚೂರ್ಣಮಾಡಿ ಸಮಾಂಶ ತುಪ್ಪ ಮತ್ತು ಬೆಲ್ಲದಲ್ಲಿ ಕಲಸಿ ಹೊತ್ತಿಗೆ ಅರ್ಧ ತೊಲೆಯಂತೆ ಎರಡು ಹೊತ್ತು ಸೇವಿಸುವುದು, ಒಂದು ವಾರ. (ಇದು ರಕ್ತಗ್ರಹಣಿಗೂ ಹಿತವಾಗಿದೆ).

ನೇರಳೆ ಸೊಪ್ಪಿನ ರಸವನ್ನು ಆಡಿನ ಹಾಲಿನಲ್ಲಿ ಹಾಕಿ ಕಾಯಿಸಿ ಸೇವಿಸುವುದು.

ಜೀರಿಗೆಯನ್ನು ಗೋಳಿಬೀಣಿನ ರಸದಲ್ಲರೆದು ದನದ ನೊರೆಹಾಲಿನಲ್ಲಿ ಕದಡಿ ಸೇವಿಸುವುದು, (ಮೂರು ದಿನ).

ಸಾಸಿವೆಯನ್ನೂ ಜೀರಿಗೆಯನ್ನೂ ಬೇರೆ ಬೇರೆ ಹುರಿದು ಚೂರ್ಣಮಾಡಿ ಸಮಾಂಶ ಸೇರಿಸಿ ಪ್ರತಿದಿನ ಒಂದಾಣೆ ತೂಕ ಚೂರ್ಣವನ್ನು ಬೆಲ್ಲದಲ್ಲಿ ಕಲಸಿ ತುಪ್ಪದಲ್ಲಿ ಜಾಳಿಸಿ ನೆಕ್ಕುವುದು. (ಮೂರು ಯಾ ಆರು ದಿನ).

**ಉಗುಳಿನಲ್ಲಿ ರಕ್ತ ಬಿದ್ದರೆ:—**

ಒಂದು ಹಿಡಿ ಆಡುಸೋಗೆಯೆಲೆಯನ್ನು ಸಣ್ಣದಾಗಿ ಕತ್ತರಿಸಿ ಒಂದು ಕುಡ್ತೆ ಹಸಿನೀರು ಹಾಕಿ ರಾತ್ರಿ ಭದ್ರವಾಗಿ ಮುಚ್ಚಿರಿಸಿ ಬೆಳಗ್ಗೆ ಸೋಸಿ ಒಂದು ಔನ್ಸು ಸೇವಿಸುವುದು. ಇದರಿಂದ ಕೆಮ್ಮಿನಲ್ಲಿ ರಕ್ತ ಬರುವುದು ನಿಲ್ಲುವುದು.

**ಮಕ್ಕಳ ಕೆಮ್ಮು ಮತ್ತು ಕಫ ಕಟ್ಟುವುದಕ್ಕೆ:—**

ಲವಂಗವನ್ನು ಚೂರ್ಣಮಾಡಿ ಸಮಭಾಗ ಸಕ್ಕರೆ ಬೆರಸಿಜೇನಿನಲ್ಲಿ ಕಲಸಿ ನೆಕ್ಕಿಸುವುದು.

**ಮಕ್ಕಳ ಕಫ ಕೆಮ್ಮಿಗೆ:—**

ಪೊಲಿಬಳ್ಳಿಯ ಬೇರನ್ನು ತುಪ್ಪಹಾಕಿ ಹದವಾಗಿ ಹುರಿದು ಚೂರ್ಣ ಮಾಡಿ ಜೇನಿನಲ್ಲಿ ಜಾಳಿಸಿ ನೆಕ್ಕಿಸುವುದು.

ಶುಂಠಿ, ಕರಿಮೆಣಸು, ಹಿಪ್ಪಲಿ, ಇಂದುಪ್ಪು ಇವುಗಳನ್ನು ಚೂರ್ಣ ಮಾಡಿ ಬೆಲ್ಲದ ಪಾನಕದಲ್ಲಿ ಹಾಕಿ ಚೆನ್ನಾಗಿ ಕುದಿಸಿ ಹದ ಬಿಸಿಯಿರುವಾಗ ಕುಡಿಸುವುದು.

**ಮಕ್ಕಳ ಕಫ, ಕೆಮ್ಮು, ಜ್ವರ ಇತ್ಯಾದಿಗಳಿಗೆ:—**

ಚೆರುತೇಕಿನ ಬೇರನ್ನು ಜೇನಿನಲ್ಲಿ ತೇದು (ಪ್ರಾಯಾನುಸಾರ) ಪದೇ ಪದೇ ನೆಕ್ಕಿಸುವುದು. (ಒಂದು ವಾರ ಯಾ ಇಪ್ಪತ್ನಾಲ್ಕು ದಿನ).

**ಮಕ್ಕಳ ಕೆಮ್ಮಿಗೆ:—**

ಭದ್ರಮುಷ್ಠಿ, ಅತಿವಿಡಯ, ಆಡುಸೋಗೆ ಬೇರು, ಹಿಪ್ಪಲಿ ಇವುಗಳನ್ನು ಸಮಾಂಶ ತೆಗೆದು ಗರಗದ ರಸದಲ್ಲಿ ಅರೆದು ಗುಂಜಾಗಾತ್ರದ ಮಾತ್ರೆಮಾಡಿ ಬೇಕಾದಾಗ ಜೇನಿನಲ್ಲಿ ತೇದು ಕೊಡುವುದು. ಇದರಿಂದ ಎಲ್ಲಾ ತರದ ಕೆಮ್ಮೂ ಗುಣವಾಗುವುದು

**ಮಕ್ಕಳ ಒಣ ಕೆಮ್ಮಿಗೆ:—**

ಕಾಲು ಕುಡ್ತೆ ದನದ ಹಾಲಿಗೆ ಕಾಲು ಕುಡ್ತೆ ನೀರು ಸೇರಿಸಿ ಒಂದು ತೊಲೆ ತುಂಬೆ ಹೂವನ್ನೂ ಕಾಲು ತೊಲೆ ನೀರುಳ್ಳಿಯನ್ನೂ ಹಾಕಿ ಚೆನ್ನಾಗಿ ಕಾಯಿಸಿ ಹಾಲಿನಷ್ಟೆ ಆದಾಗ ಇಳಿಸಿ ಸೋಸಿ ಸಕ್ಕರೆ ಹಾಕಿ ಸೇವಿಸುವುದು.

**ಮಕ್ಕಳ ಕೆಮ್ಮು ಉಬ್ಬಸಗಳಿಗೆ:—**

ಅಕ್ಕಿ ತೊಳೆದ ನೀರಿನಲ್ಲಿ ಕೊತ್ತಂಬರಿಯನ್ನರೆದು ಸೋಸಿ ಸಕ್ಕರೆ ಹಾಕಿ ಕುಡಿಸುವುದು.

ನಾಯಿ ಸೊಣಜಿಗ್ನ ಬೀಜ, ಹಿಪ್ಪಲಿ, ಅಣಿಲೆಕಾಯಿ ಇವುಗಳನ್ನು ವಸ್ತ್ರಗಾಳಿತ ಚೂರ್ಣ ಮಾಡಿ ದಿನಕ್ಕೆ ಎರಡು ಹೊತ್ತು ಜೇನಿನಲ್ಲಿ ನೆಕ್ಕಿಸುವುದು. (ಮೂರು ಯಾ ಆರು ದಿನ)

**ವಂಶಲೋಚನ:—**

ಬಿದಿರ ಉಪ್ಪು ಚೂರ್ಣಮಾಡಿ ಒಂದು ಚಟಿಕೆಯಷ್ಟನ್ನು ಜೇನಿನಲ್ಲಿ ಕಲಸಿ ನೆಕ್ಕುವುದು.

ಅಮೃತಬಳ್ಳಿ, ಆಡುಸೋಗೆ ಬೇರು, ಚಿತ್ರಟೆ ಬೇರು ಇವುಗಳ ಹಾಲು ಕಷಾಯ ಮಾಡಿ ಕುಡಿಸುವುದು.

ಗರಗದ ರಸಕ್ಕೆ ಅಣಲೆಕಾಯಿಯ ಚೂರ್ಣ ಹಾಕಿ ಬೆಲ್ಲ ಸೇರಿಸಿ ಬೆಳಗೆ ಒಂದು ಔನ್ಸಿನ ಪ್ರಕಾರ ಸೇವಿಸುವುದು. (ಒಂದು ವಾರ).

**ಚಿಕ್ಕ ಮಕ್ಕಳ ಕೆಮ್ಮಿಗೆ:**

ಹಿಪ್ಪಲಿಯನ್ನು ಜೇನಿನಲ್ಲಿ ತೇದು ತಾಯಿಯ ಮೊಲೆಗೆ ಲೇಪಿಸಿ ಮೊಲೆ ಉಣಿಸುವುದು.

**ಮಕ್ಕಳ ಕಠಿನ ಕೆಮ್ಮಿಗೆ:**

ಒಂದು ಪಾಲು ಹುರಿದ ಆಡುಸೋಗೆ ಎಲೆಗೆ ಒಂದು ಪಾಲು ತ್ರಿಕಟು ವನ್ನು ಹುರಿದು ಸೇರಿಸಿ ಚೂರ್ಣ ಮಾಡಿ ಸಮಾಂಶ ಸಕ್ಕರೆ ಸೇರಿಸಿ ಜೇನಿನಲ್ಲಿ ಕಲಸಿ ಬೆಳಗ್ಗೆ ನೆಕ್ಕಿಸುವುದು

# ಕುತ್ತಿಗೆಯ ಆರೋಗ್ಯ

**ಸ್ವರಬಿದ್ದರೆ(ಧ್ವನಿ ಬಿದ್ದರೆ—ಸ್ವರಸಾದ):**

ಹಿಪ್ಪಲಿ, ಬೀಜದ್ರಾಕ್ಷೆ, ಆಡುಸೋಗೆ ಬೇರು, ಇವುಗಳ ಕಷಾಯ ತಯಾರಿಸಿ ಚೆನ್ನಾಗಿ ತಣಿಸಿ ಜೇನು ಮೇಲ್ಪೊಡಿ ಹಾಕಿ ಸೇವಿಸಿದರೆ ಸ್ವರ ಬರುವುದು.

ನೆಲ್ಲಿಚಟ್ಟನ್ನು ದನದ ನೊರೆ ಹಾಲಿನಲ್ಲಿ ಅರೆದು ಸೋಸಿ ಸೇವಿಸಿದರೆ ಸ್ವರಭೇದವು ಗುಣವಾಗುವುದು.

ಅಡಕೆಯ ಗಾತ್ರದಷ್ಟು ಗರಗವನ್ನರೆದು ದನದ ಮಜ್ಜಿಗೆಯಲ್ಲಿ ಕದಡಿ ಸೇವಿಸಿದರೆ ಸ್ವರ ಬರುವುದು.

ಒಂದೆಲಗ (ಉರಗೆ=ತಿಮರೆ)ದ ಗಡ್ಡೆಯನ್ನು ಅರೆದು ಜೇನಿನಲ್ಲಿ ಕಲಸಿ ನೆಕ್ಕಿದರೆ ಸ್ವರಭೇದವು ಗುಣವಾಗುವುದು.

ಮಾವಿನ ಎಲೆಯ ಕಷಾಯ ಮಾಡಿ ಚೆನ್ನಾಗಿ ತಣಿಸಿ ಜೇನು ಮೇಲ್ಪೊಡಿ ಹಾಕಿ ರಾತ್ರಿ ಮತ್ತು ಬೆಳಗ್ಗೆ ಸೇವಿಸಿದರೆ ಸ್ವರವು ಶುದ್ಧವಾಗುವುದು.

ಹಿಪ್ಪಲಿ, ಶಾಂತಿಕಾಯಿ, ಇಂದುಪ್ಪು ಇವುಗಳನ್ನು ಸಮಾಂಶ ಚೂರ್ಣ ಮಾಡಿ ಬಿಸಿನೀರಿನಲ್ಲಿ ಕದಡಿ ಸೇವಿಸಿದರೆ ಸ್ವರವು ಸುಮಧುರವಾಗುವುದು.

**ಗಂಟಲಿನಲ್ಲಿ ಕಫ ಕಟ್ಟಿದರೆ:**

ಅಣಿಲೆಕಾಯಿ, ಹಿಪ್ಪಲಿ, ಶುಂಠಿ, ಕರಿಮೆಣಸು ಇವುಗಳ ಚೂರ್ಣವನ್ನು ಜೇನಿನಲ್ಲಿ ಕಲಸಿ ನೆಕ್ಕಿದರೆ ಗುಣವಾಗುವುದು.

ಜ್ಯೇಷ್ಠಮಧುವನ್ನೂ ಬೆಳ್ಳುಳ್ಳಿಯನ್ನೂ ಸಮಾಂಶ ಸೇರಿಸಿ ನುಣ್ಣಗೆ ಅರೆದು ನೀರು ಸೇರಿಸಿ ಕದಡಿ ಅದರ ರಸವನ್ನು ಚಮಚದಿಂದ ಸ್ವಲ್ಪ ಸ್ವಲ್ಪವಾಗಿ ಕುಡಿಸಿದರೆ ಕಫ ಬಿಟ್ಟು ಗಂಟಲು ಸ್ವಚ್ಛವಾಗುವುದು.

ಮೊಡಂಬಡಿ ಗಿಡ(ದೊಡ್ಡ ದಡಬಡಿಕೆ ಗಿಡ)ದ ಬೇರನ್ನು ಹಸಿಶುಂಠಿಯ ರಸದಲ್ಲಿ ತೇದು ನೆಕ್ಕಿಸಿದರೆ ಯಾವದೇ ತರದ ಕಫವಾದರೂ ಕರಗಿ ನೀರಾಗಿ ಗಂಟಲು ಶುದ್ಧವಾಗುವುದು.

ಆಡುಸೋಗೆ ಎಲೆಯನ್ನು ಬಾಡಿಸಿ ತೆಗೆದ ರಸದಲ್ಲಿ ಕರಿಮೆಣಸಿನ ಚೂರ್ಣ ಹಾಕಿ ಸೇವಿಸಿದರೆ ಕಫ ಬಿಟ್ಟು ಗಂಟಲು ಶುದ್ಧವಾಗುವುದು.

**ಎಲ್ಲಾ ವಿಧ ಕಫ ದೋಷಕ್ಕೂ:**

ತ್ರಿಫಲೆ, ತ್ರಿಕಟು, ಚವಲ್ಕಾರ, ಮರೆದರಸಿನ, ನಾಗದಂತಿಯ ಬೇರು, ರಸಾಂಜನ, ಹಾಡೆಗಡ್ಡೆ, ಚೆರುಪುನ್ನರಿ, ಕಹಿಬೇವಿನ ಕೆತ್ತೆ, ಇವುಗಳನ್ನು ಸಮಾಂಶ ಸೇರಿಸಿ ಗೋಮೂತ್ರದಲ್ಲಿ ಬೇಯಿಸಿ ಅರೆದು ಖರ್ಜೂರ ಬೀಜದ ಗಾತ್ರ ಮಾತ್ರೆ ಮಾಡಿ ಬಾಯಿಯಲ್ಲಿರಿಸಿ ದುಷ್ಟ ನೀರು ಒಸರಿದಂತೆ ಉಗುಳು ತ್ತಿರುವುದು. ಇದರಿಂದ ಎಲ್ಲಾ ವಿಧ ಕಫ-ದೋಷ ಪರಿಹಾರವಾಗುವುದು.

ತಾಳೀಸಪತ್ರೆ, ಗೃಹಧೂಮ (ಪುಜಂಗರಿ), ಕಾಡು ಹಿಪ್ಪಲಿ ಬೇರು, ಕಾಡು ಮೆಣಸಿನ ಬೇರು, ಶುಂಠಿ, ಶುದ್ಧಿಮಾಡಿದ ಚಿತ್ರಮೂಲದ ಬೇರು ಏಲಕ್ಕಿ, ಕರಿಮೆಣಸು, ಪಾಲಾಶದ ಕೆತ್ತೆಯ ಭಸ್ಮ, ಚವಲ್ಕಾರ, ಇವುಗಳನ್ನು ಸಮಾಂಶ ತೆಗೆದು ಚೂರ್ಣಮಾಡಿ ಬೆಲ್ಲದಲ್ಲಿ ಕಲಸಿ ಮಾತ್ರೆ ಮಾಡಿ ಬಾಯಿ ಯಲ್ಲಿರಿಸಿ ನೀರು ಒಸರಿದಂತೆ ಆ ನೀರನ್ನು ಉಗುಳುತ್ತಿದ್ದರೆ ಗುಣವಾಗುವುದು.

**ನಿತ್ರಾಣದಿಂದ ನೀರು ಕುಡಿಯುವಾಗ ಗಂಟಲು ಕಟ್ಟಿದರೆ:—**

ನೀರುಳ್ಳಿ ಗಡ್ಡೆಯನ್ನು ಸ್ವಲ್ಪ ಸೀಳಿ ಅದರೊಳಗೆ ಸೈಂಧವ ಲವಣದ ಚೂರ್ಣವನ್ನು ತುಂಬಿಸಿ ಬಾಳೆಯೆಲೆಯಲ್ಲಿ ಸುತ್ತಿ ಕಟ್ಟಿ ಮಣ್ಣು ಮೆತ್ತಿ ಬೆಂಕಿ ಯಲ್ಲಿ ಹಾಕಿ ಬೇಯಿಸಿ ತೆಗೆದು ಬಿಡಿಸಿ ನೀರುಳ್ಳಿಯನ್ನು ಜಗಿದು ನುಂಗಿದರೆ ಕೂಡಲೆ ನೀರು ಕುಡಿಯುವಾಗ ದೊಂಡೆ (ಗಂಟಲು) ಕಟ್ಟುವುದುಬಿಟ್ಟು ಸುಖವಾಗುವುದು.

**ಕುತ್ತಿಗೆಯ ಹೊರಗೆ ಬಾವು ಆದರೆ:—**

ಅರಸಿನವನ್ನು ಎಕ್ಕೆ ಹಾಲಿನಲ್ಲಿ ಅರೆದು ಬೆಲ್ಲ ಹಾಕಿ ಹರಳೆಣ್ಣೆಯಲ್ಲಿ ಜಾಳಿಸಿ ಲೇಪಿಸಿದರೆ ಕುತ್ತಿಗೆಯ ಹೊರಗಾದ ಕಲ್ಲುಬಾವು ಸಹ ಗುಣ ವಾಗುವುದು.

ಶುಂಠಿಯನ್ನು ಮಜ್ಜಿಗೆಯಲ್ಲಿ ಯಾ ಗರಗದ ರಸದಲ್ಲಿ ಅರೆದು ಲೇಪಿಸಿ ದರೆ ಗುಣವಾಗುವುದು.

ಅಣಿಲೆಕಾಯಿ, ಚೇಳು ಬಾಲದ ಗಿಡ, ಎಕ್ಕೆ ಬೇರು, ಶುಂಠಿ, ಕೊರುಂಗು ಮರದ ಕೆತ್ತೆ, ನುಗ್ಗೆ ಕೆತ್ತೆ, ಉಪ್ಪು ಇವುಗಳನ್ನು ಸಮಾಂಶ ತೆಗೆದು ಸೇರಿಸಿ

ಗೋಮೂತ್ರದಲ್ಲರೆದು ಕುದಿಸಿ ಪದೇ ಪದೇ ಲೇಪಿಸಿದರೆ ಅಪಚಿ, ಗಂಡಮಾಲೆ, ಗಳಗಂಡ, ಮೈಲಿಗೆ ಹುಣ್ಣು ಇತ್ಯಾದಿ ಹೊರಬಾವು ಮತ್ತು ಒಳಬಾವು ಸಹ ಗುಣವಾಗುವುದು.

**ಗಂಟಲಿನೊಳಗೆ ಬಾವಾದರೆ:—**

ವಾಯುವಿಳಂಗದ ಬೇರಿನ ಕಷಾಯ ತಯಾರಿಸಿ ಅದರಲ್ಲಿ ಬಾಯಿ ಮುಕ್ಕಳಿಸಿದರೆ ಗಂಟಲಿನಲ್ಲಾದ ಬಾವು ಗುಣವಾಗುವುದು.

**ಗಳ ಶುಂಡಿಗೆ:—**

(ಲಕ್ಷಣ:-ಇದು ದೊಂಡೆಯಲ್ಲಿ (ಗಂಟಲಿನಲ್ಲಿ) ಮೂಗಿನ ಬುಡದಲ್ಲಿ ತಾಲುಮೂಲದಲ್ಲಿ ಬರುವ ಬಾವು, ದಾಹ, ಕೆಮ್ಮು, ವಾಂತಿ ಇತ್ಯಾದಿ ಇದರ ಆರಂಭ ಲಕ್ಷಣ)

**ಚಿಕಿತ್ಸೆ:**—ಮರದರಸಿನ, ಕಹಿಬೇವಿನ ಕೆತ್ತೆ, ಕೊಡಗಪ್ಪಾಲರಿ, ಮಾಕೇರ ಕಲ್ಲು (ಶುದ್ಧಿ) ಇವುಗಳನ್ನು ಪ್ರತ್ಯೇಕ ಅರ್ಧ ತೊಲೆಯಂತೆ ಸೇರಿಸಿ ಒಂದು ಸೇರು ನೀರಿನಲ್ಲಿ ಕಷಾಯವಿಟ್ಟು ಬತ್ತಿಸಿ ಒಂದು ಪಾವು ಮಾಡಿ ರಾತ್ರಿ ಮತ್ತು ಬೆಳಗ್ಗೆ ಸೇವಿಸುವುದು. (ಒಂದು ವಾರ).

ಅಕ್ಕಲ್‌ಕರೆ, ಅರತ್ತೆ (ರಾಶ್ನೆ) ಶುಂಠಿ, ಇವುಗಳ ಕಷಾಯ ಮಾಡಿ ಈ ಕಷಾಯದಲ್ಲಿ ಬಾಯಿ ಮುಕ್ಕಳಿಸುವುದು.

**ತಾಲು ಕಂಟಕ(ದೊಂಡೆ ಬಾವು):—**

ಅಗ್ರದ ಕಾಯಿಯನ್ನು ಜೇನಿನಲ್ಲಿ ತೇದು ಕೆಲವು ದಿನ ಹಚ್ಚುವುದರಿಂದ ಗುಣವಾಗುವುದು.

**ಕಳ್ಳಪರು(ಗಳಗಂಡ)ವಿಗೆ:—**

ಈಂದಿನ ಮರವನ್ನು ಕಲ್ಲಿನಿಂದ ಜಜ್ಜಿ ಕೆತ್ತೆ ತೆಗೆದು ತಂದು ಉಪ್ಪು ಸೇರಿಸಿ ಅರೆದು ಬಿಸಿ ಮಾಡಿ ಹಚ್ಚುವುದು.

ಸೋಮಾರದ ಬೇರನ್ನು ನಿಂಬೆಯ ರಸದಲ್ಲಿ ತೇದು ಅರಸಿನವನ್ನೂ ಉಪ್ಪನ್ನೂ ಸೇರಿಸಿ ಒಳಗೆ ತೊಡೆದರೆ ಕೂಡಲೆ ಬಾವು ಒಡೆಯುವುದು.

**ಪಥ್ಯ:**—ಗುಣವಾಗುವ ವರೆಗೆ ಪಸೆ, ಜಿಡ್ಡು ಪದಾರ್ಥಗಳನ್ನು ಸೇವಿಸ ಬಾರದು.

ಕಲ್ಲುಶುಂಠಿ, ಕೋಷ್ಠಾಣು (ಶುಂಠಿಯ ಜಾತಿ), ಜಾಪತ್ರಿ, ಜಾಯಿ ಕಾಯಿ, ಬೆಳ್ಳುಳ್ಳಿ, ಹೊಗೆಕರಿ (ಗೃಹಧೂಮ) ಇವುಗಳನ್ನರೆದು ಬಟ್ಟೆಚೂರಿನಲ್ಲಿ ಲೇಪಿಸಿ ಬಾವಿನ ಮೇಲೆ ಇರಿಸಿ ಬೆರಳಿನಿಂದ ಒತ್ತಿದರೆ ಕೂಡಲೆ ದೊಂಡೆ ಬಾವು (ಗಂಟಲು ಬಾವು) ಒಡೆದು ಹೋಗುವುದು.

**ಕುತ್ತಿಗೆಯ ಮೇಲೆ ಬಂದ ಎಲ್ಲಾ ಕುರು ಮತ್ತು ಬಾವುಗಳಿಗೆ:—**

ಸಮುದ್ರ ಮಾಫಲ ಕಾಯಿಯನ್ನು ಮಜ್ಜಿಗೆಯಲ್ಲರೆದು ಲೇಪಿಸಿದರೆ ಶೀಘ್ರ ಗುಣವಾಗುವುದು.

**ಮಕ್ಕಳ ದೊಂಡೆಯಲ್ಲಿ (ಗಂಟಲಿನಲ್ಲಿ) ಬಾವಾದರೆ:**

ಅಣಿಲೆಕಾಯಿ, ಬಜೆ, ಜಂಗಲ್ ಕೋಷ್ಠ ಇವುಗಳನ್ನು ಸಮಪ್ರಮಾಣದಲ್ಲಿ ತೆಗೆದು ಮೊಲೆಹಾಲಿನಲ್ಲಿ ಅರೆದು ಜೇನಿನಲ್ಲಿ ಜಾಳಿಸಿ ನೆಕ್ಕಿಸಿದರೆ ತಾಲು ಕಂಟಕರೋಗವು ಕೂಡಲೆ ಗುಣವಾಗುವುದು.

**ಮಕ್ಕಳಿಗೆ ಕಫ ಕಟ್ಟುವುದಿದ್ದರೆ:—**

ತುಂಬೆ ಗಿಡದ ಒಂದು ಪಾಲು ಸ್ವರಸಕ್ಕೆ ಎರಡು ಪಾಲು ಜೇನನ್ನೂ ಸ್ವಲ್ಪ ಕಂಕಣ ಕಾರದ ಅರಳನ್ನೂ ಸೇರಿಸಿ ಜಾಳಿಸಿ ನೆಕ್ಕಿಸಿವರೆ ಗುಣವಾಗುವುದು.

**ಅಪಚಿ (ನೋವಿಲ್ಲದ ಬಾವು) ಯಾದರೆ:—**

ಬಿಳಿ ಮಾದೇರಿಯ ಬೇರನ್ನು ಜಗಿದು ರಸವನ್ನು ನುಂಗುವುದು. (ಕೆಲವು ದಿನ.) ಅಥವಾ ಬಿಳಿ ಮಾದೇರಿಯ ಬೇರನ್ನು ನಿಂಬೆ ಹಣ್ಣಿನ ರಸದಲ್ಲಿ ಅರೆದು ಲೇಪಿಸಿದರೆ ಬೇಗನೆ ಗುಣವಾಗುವುದು.

ಲೋಳಿ ಸರದ ಗಡ್ಡೆಯನ್ನು ಬೆಂಬೂದಿಯಲ್ಲಿ ಹಾಕಿ ಬೇಯಿಸಿ ರಸ ತೆಗೆದು ಎರಡು ತೊಲೆ ರಸಕ್ಕೆ ಒಂದು ತೊಲೆ ಅರಸಿನ ಹುಡಿ ಹಾಕಿ ಕಲಸಿ ಸೇವಿಸಿದರೆ ಕೆಲವೇ ದಿನಗಳಲ್ಲಿ ಪ್ಲೀಹವೃದ್ಧಿ, ಅಪಚಿ, ಮತ್ತು ಬಾವು ಸಹ ಗುಣವಾಗುವುದು.

ತೆಂಗಿನ ಇಂಡಿಗೆ ಗಿಡದ ರಸ ಒಂದು ಔನ್ಸು ಪ್ರಕಾರ ಕೆಲವು ದಿನ ಸೇವಿಸುವುದು.

**ಮಕ್ಕಳ ಕುತ್ತಿಗೆಯ ಕುರಕ್ಕೆ:**

ಭದ್ರಮುಷ್ಠಿ ಗಡ್ಡೆಯನ್ನು ಮಜ್ಜಿಗೆಯಲ್ಲರೆದು ಲೇಪಿಸುವುದು.

**ಗಂಡಮಾಲೆಗೆ:—**

ಬಿಳಿ ದಾಸವಾಳದ ಹೂವನ್ನು ಅಥವಾ ಮೇಕೆಯ ಹಾಲನ್ನು ಕೊಬರಿ ಯೆಣ್ಣೆಯಲ್ಲಿ ಜಾಳಿಸಿ ಪೂಸಿದರೆ ಶ್ರೀಘದಲ್ಲಿ ಗುಣವಾಗುವುದು.

ಸಬ್ಬಸಿಗೆ, ಶುದ್ಧಿಮಾಡಿದ ಚಿತ್ರಮೂಲದ ಬೇರು, ಏಲಕ್ಕಿ ಇವು ಗಳನ್ನು ಸಮಾಂಶ ತೆಗೆದು ಅರೆದು ಲೇಪಿಸುವುದು.

ಜಾಜಿ ಮಲ್ಲಿಗೆ ಸೊಪ್ಪು, ಕಾಸರ್ಕನಚಿಗುರು, ಇವುಗಳನ್ನು ನುಣ್ಣಗೆ ಅರೆದು ಎಳ್ಳೆಣ್ಣೆಯಲ್ಲಿ ಹಾಕಿ ಕಾಯಿಸಿ ಮಾತ್ರ ಪಾಕಕ್ಕೆ ಸ್ವಲ್ಪ ಅಫೀಮು ಹಾಕಿ ಆ ಎಣ್ಣೆಯನ್ನು ಹಚ್ಚಿದರೆ ಚಿರಿ ಪುಣಚ, ಭಗಂದರ, ಕೆವಳಸರ ಕಂಠಮಾಲೆ, ಕೂದಲು ಬೀಳುವಿಕೆ ಇತ್ಯಾದಿ ಗುಣವಾಗುವುದು.

ಅತ್ತಿಯ ಬೇರನ್ನು ಚೂರ್ಣ ಮಾಡಿ ಅರ್ಧ ತೊಲೆಯಷ್ಟನ್ನು ಇಂಗು ಕೂಡಿಸಿ ಎಣ್ಣೆಯಲ್ಲಿ ಕಲಸಿ ಲೇಪಿಸಿದರೆ ಗಂಡಮಾಲೆಯು ಕೂಡಲೆ ಗುಣ ವಾಗುವುದು.

**ಮಕ್ಕಳ ಕುತ್ತಿಗೆಯಲ್ಲಿ ಕಲ್ಲುಬಾವು (ಅಪಚಿ) ಆದರೆ:**

ಕಾಡು ಹತ್ತಿಯ ಗಿಡದ ಬೇರನ್ನು ಅಕ್ಕಿಯೊಂದಿಗೆ ಅರೆದು ರೊಟ್ಟಿ ಮಾಡಿ ತಿನಿಸಿದರೆ ಗ್ರಂಥಿಗಳು ಶೀಘ್ರ ಗುಣವಾಗುವುವು.





## ಆಂಧ್ರ

**ಅಂಡವು ಬೀಗಿದರೆ:**

ಈಂದಿನ ಮರವನ್ನು ಕಲ್ಲಿನಿಂದ ಜಜ್ಜಿ ಕೆತ್ತೆಯೆಬ್ಬಿಸಿ ಉಪ್ಪನ್ನು ಸೇರಿಸಿ ಅರೆದು ಬಿಸಿ ಮಾಡಿ ಹಚ್ಚುವುದು.

**ಅಂಡವು ಸ್ತಬ್ಧವಾದರೆ:**

ಮರದರಸಿನದ ಅಷ್ಟಮಾಂಶ ಕಷಾಯ ಮಾಡಿ ಸಮಪಾಲು ಗೋಮೂತ್ರದಲ್ಲಿ ಸೇರಿಸಿ ಬೆಳಗ್ಗೆ ಎರಡು ಔನ್ಸಿನಷ್ಟು ಸೇವಿಸುವುದು. (ಒಂದುವಾರ)

**ಆಂತ್ರವೃದ್ಧಿಯಾದರೆ:**

ಹತ್ತಿಯೆಲೆಯ ರಸಕ್ಕೆ ಎಳ್ಳೆಣ್ಣೆ ಹಾಕಿ ಒಂದು ಔನ್ಸು ಸೇವಿಸುವುದು. ಮತ್ತು ಕುಂದುರುಕ್ಕವನ್ನು ನೀರಿನಲ್ಲಿ ತೇದು ಆರಿದಂತೆ ಲೇಪಿಸುವುದು. (ಕೆಲವು ದಿನ).

**ಅಂಡವು ವೃದ್ಧಿಯಾದರೆ:**

ಅಣಲೆಕಾಯಿ ಸಿಪ್ಪೆಯ ಚೂರ್ಣವನ್ನು ಹರಳೆಣ್ಣೆಯಲ್ಲಿ ಕಲಸಿ ಸೇವಿಸುವುದು. ಮತ್ತು ಮಾವಿನ ಮರದ ಮಯಣವನ್ನು ಗೋಮೂತ್ರದಲ್ಲರೆದು ಲೇಪಿಸುವುದು, ಯಾ ಬೆಳ್ಳುಳ್ಳಿ ಮತ್ತು ಸವಸಾಗರವನ್ನು ಅರೆದು ಲೇಪಿಸುವುದು. (ಒಂದು ಅಥವಾ ಎರಡು, ಮೂರು ವಾರ)

**ಆಂಥ್ರಕ್ಕೆ:**

ಭಜೆ, ಸಾಸಿವೆಗಳನ್ನು ಕಲಗಚ್ಚಿನಲ್ಲಿ ಅರೆದು ಬಿಸಿ ಮಾಡಿ ಯಾ ಬಿಸಿ ನೀರಿನಲ್ಲಿ ಅರೆದು ಲೇಪಿಸುವುದು.

ಹಳೆಯ ಹುಣಸೆ ಹುಳಿಯನ್ನೂ ಸುಣ್ಣವನ್ನೂ ಸಮಾಂಶವಾಗಿ ತೆಗೆದ ಕಲಸಿ ಆರಿದಂತೆ ಲೇಪಿಸುವದು.

ಕೊಬರಿಯ ಹೋಳನ್ನೂ ಹರಳ ಬೀಜದ ಬೊಂಡನ್ನೂ ನೀರಿನಲ್ಲಿ ಅರೆದು ಕುದಿಸಿ ಆರಿದಂತೆ ಲೇಪಿಸುವುದು.

ಗದ್‌ಗನ (ಗಜಿಗೆಯ) ಚಿಗುರನ್ನು ಹರಳೆಣ್ಣೆಯಲ್ಲಿ ಅರೆದು ಬಿಸಿ ಮಾಡಿ ಹದಬಿಸಿಯಾಗಿ ಲೇಪ ಹಾಕಿ ಕಟ್ಟುವುದು.

ಹಸಿಶುಂಠಿಯನ್ನು ಸಣ್ಣದಾಗಿ ಕತ್ತರಿಸಿ ಜೇನಿನಲ್ಲಿ ಹಾಕೀಸಿಕೊಂಡು ನಿತ್ಯವೂ ಸೇವಿಸುತ್ತಿದ್ದರೆ ಬದ್ಧಕೋಷ್ಠ, ವೃಷಣವಾತ. ಶೀತ್ರವಾತ ಅಜೀರ್ಣ, ಇತ್ಯಾದಿ ಗುಣವಾಗುವುದು.

**ಅಂಡವಾತಕ್ಕೆ**

ನಾಚಿಕೆಮುಳ್ಳಿನ ಗಿಡದ ಬೇರು, ಗಿಜಿ ಗಿಜಿ ಕಾಯಿ ಗಿಡದ ಬೇರು ಇವುಗಳನ್ನು ಅನ್ನದ ತೆಳಿಯಲ್ಲಿ ಅರೆದು ಲೇಪಿಸುವುದು.

## ಕಾಮಿಲೆ (ಮಣ್ಣುತಿನ್ನುವ ರೋಗ)

**ಮಕ್ಕಳು ಯಾ ಇತರರು ಮಣ್ಣು ತಿನ್ನುವ ಪಾಂಡು ಕಾಮಲೆಗೆ:**

ಮಣ್ಣು ತಿನ್ನುವವರಿಗೆ ಶುದ್ಧವಾದ ಕಾವಿ ಮಣ್ಣನ್ನೇ ತಿನ್ನಿಸಬೇಕು; ಇದರಿಂದ ಅದರ ಚಟವೇ ನೀಗಿ ಹೋಗುವುದು.

ಶುದ್ಧಿಮಾಡಿದ ಇಂಗನ್ನು ಚುಂಡೆ ಬದನೆಕಾಯಿಯ ರಸದಲ್ಲಿ ತೇದು ನೆಕ್ಕಿಸುವುದು. ಇದರಿಂದ ರೋಗ ನಿವಾರಣೆಯಾಗುವುದು.

# ಗ್ರಹಣೀ

**ಗ್ರಹಣಿಗೆ:**

ಉತ್ತರಣೆಯೆಲೆಯನ್ನು ನುಣ್ಣಗೆ ಅರೆದು ಸಮಾಂಶ ಬೆಲ್ಲವನ್ನು ಸೇರಿಸಿ ಕಲಸಿ ಹೊತ್ತಿಗೆ ಒಂದು ತೊಲೆಯಂತೆ ರಾತ್ರಿ ಮತ್ತು ಬೆಳಗ್ಗೆ ಒಂದು ವಾರ ಸೇವಿಸುವುದು.

ಎಳತಾದ ಬಿಲ್ವಪತ್ರೆಯ ಕಾಯಿಯನ್ನು ಸಮಾಂಶ ಬೆಲ್ಲ ಸೇರಿಸಿ ಶುಂಠಿಯ ಚೂರ್ಣದೊಡನೆ ಅರೆದು ಬೆಳಗ್ಗೆ ಸೇವಿಸುವುದು. ಮಜ್ಜಿಗೆಯನ್ನ ಪಥ್ಯ.

ಇಂದುಪ್ಪು, ಚಿತ್ರಟೆ ಬೇರು, ಓಮ ಇವುಗಳಲ್ಲಿ ಯಾವುದಾದರೂ ಒಂದನ್ನು ಮಜ್ಜಿಗೆಯಲ್ಲಿ ಹಾಕಿ ಕುದಿಸಿ ಸೋಸಿ ಸೇವಿಸುವುದು.

ಓಮವನ್ನು ಹುರಿದು ಅದರ ಚೂರ್ಣವನ್ನು ಜೇನಿನಲ್ಲಿ ಜಾಳಿಸಿ ನೆಕ್ಕುವುದು.

ತ್ರಿಕಟು, ಅಣಿಲೆಕಾಯಿಯ ಚೂರ್ಣ, ಇಂದುಪ್ಪು ಇವುಗಳನ್ನು ಸಮಾಂಶ ಮಜ್ಜಿಗೆಯಲ್ಲಿ ಕದಡಿ ಸೇವಿಸುವುದು.

ಒಂದು ಭಾಗ ಸೈಂಧವ, ಎರಡು ಭಾಗ ಓಮ, ನಾಲ್ಕು ಭಾಗ ಹಿಪ್ಪಲಿ ಆರು ಭಾಗ ಅಣಿಲೆಕಾಯಿ, ಇವುಗಳನ್ನು ಸೇರಿಸಿ ವಸ್ತ್ರಗಾಳಿತ ಚೂರ್ಣ ಮಾಡಿ ಮಜ್ಜಿಗೆಯಲ್ಲಿ ಕದಡಿ ಸೇವಿಸುವುದು.

ಶುದ್ಧಿ ಮಾಡಿದ ರಾವು ಬೀಜದ ಕೆತ್ತೆ, ಬಿಲ್ವಪತ್ರೆ ಬೇರು, ಕಾಡು ಮೆಣಸಿನ ಬೇರು, ತೆಗ್ಲಾಮೆಯ (ಪುನರ್ನವಾ) ಬೇರು, ಅಣಿಲೆಕಾಯಿ ಸಿಪ್ಪೆ ಶುಂಠಿ, ಇವುಗಳನ್ನು ಅಷ್ಟಮಾಂಶ ಕಷಾಯ ಮಾಡಿ ಸೇವಿಸುವುದು.

ಶುಂಠಿ, ಅಣಿಲೆಕಾಯಿ, ಸೈಂಧವ, ಇವುಗಳನ್ನು ಸಮಾಂಶ ತೆಗೆದು ಚೂರ್ಣ ಮಾಡಿ ಸೀಯಾಳದಲ್ಲಿ ಅಥವಾ ಮಜ್ಜಿಗೆಯಲ್ಲಿ ಸೇವಿಸುವುದು.

ಪಾರೆತುಂಬೆ (ಪಾರೆ ತುಳಸಿ)ಯ ಸೊಪ್ಪು, ಕಾಡುಮಲ್ಲಿಗೆ (ಹಾಲು ಮಲ್ಲಿಗೆ)ಯ ಸೊಪ್ಪು, ಇವುಗಳನ್ನು ಹಾಲಿನಲ್ಲಿ ಬೇಯಿಸಿ ಅರೆದು ಮೂರು ದಿನ ತಲೆಗೆ ಹಾಕುವುದು. ಅನಂತರ ಮೂರು ದಿನ ಇದರದೇ ಗಂಜಿ ಮಾಡಿ ದನದ ನೊರೆ ಹಾಲನ್ನು ಹಾಕಿ ಚಪ್ಪೆಯಾಗಿ ಉಣ್ಣುವುದು. ಇದರಿಂದ ಗ್ರಹಣೀ (ಕ್ರಾಣಿ) ರೋಗವು ನಿವಾರಣೆಯಾಗುವುದು.

**ಗ್ರಹಣಿಗೆ ತಂಬಳಿ:**

ಹೊನಗೊನ್ನೆ, ಗರಗ, ಇವೆರಡೂ ಸೇರಿ ಅರ್ಧಾಂಶ, ಶುಂಠಿ, ಮಧ್ಯಾಪ ಮಲ್ಲಿಗೆಗಡ್ಡೆ, ಕಪ್ಪರ ಶುಂಠಿ, ದಿವಾಳಿ ಓಟೆಯಗಡ್ಡೆ, ಇವು ನಾಲ್ಕೂ ಸೇರಿ ಅರ್ಧಾಂಶ, ಇವುಗಳ ನಾಲ್ಕನೆಯೊಂದಂಶ ಕೊಡಸಿಗೆ ಬೀಜ, ಇವುಗಳೆಲ್ಲ ವನ್ನೂ ಸೇರಿಸಿ ದನದ ಮಜ್ಜಿಗೆಯಲ್ಲಿ ಬೇಯಿಸಿ ಕಡೆದು ಅನ್ನಕ್ಕೆ ಕಲಸಿ ಉಣ್ಣುವುದು. ಪಥ್ಯಕ್ಕೆ ದನದ ಹಾಲು, ಮಜ್ಜಿಗೆ, ತುಪ್ಪಗಳನ್ನು ಮಾತ್ರ ಉಪಯೋಗಿಸುತ್ತಾ ಕಡುಪಥ್ಯದಿಂದಿದ್ದರೆ ಗ್ರಹಣಿಯು ಶೀಘ್ರದಲ್ಲೇ ಗುಣ ವಾಗುವುದು.

ಓಮ, ಶುಂಠಿ, ಹುಣಸೆ ಮರದ ಕೆತ್ತೆ. ಸೈಂಧವಲವಣ, ಇವುಗಳನ್ನು ಸಮಾಂಶ ಸೇರಿಸಿ ಒಂದು ಭಾಗ, ಆ ಒಂದು ಭಾಗದಷ್ಟು ಅಣಿಲೆಕಾಯಿಯ ಸಿಪ್ಪೆಯನ್ನೂ ಸೇರಿಸಿ ಚೂರ್ಣ ಮಾಡಿ ದಿನವೂ ಒಂದೊಂದು ತೊಲೆಯಂತೆ ದನದ ಮಜ್ಜಿಗೆಯಲ್ಲಿ ಕದಡಿ ಬೆಳಗ್ಗೆ ಒಂದು ವಾರ ಸೇವಿಸುವುದು.

ಓಮ, ಶುಂಠಿ, ಸೈಂಧವಲವಣಗಳನ್ನು ಸಮಾಂಶ ಸೇರಿಸಿ ಹುಣಸೆ ಮರದ ಕೆತ್ತೆಯ ರಸದಲ್ಲಿ ಅರೆದು ಕಡಲೆಯ ಗಾತ್ರದಷ್ಟು ಮಾತ್ರೆ ಮಾಡಿ ಒಂದೊಂದು ಮಾತ್ರೆಯಂತೆ ದಿನದಲ್ಲಿ ಎರಡು ಹೊತ್ತು ಹುಣಸೆ ಮರದ ಕೆತ್ತೆಯ ರಸದಲ್ಲಿ ಅರೆದು ಸೇವಿಸುವುದು. (ಒಂದು ವಾರ)

ಪುಳಿಯಾರಿಲೆಯ ಸೊಪ್ಪು ಒಂದು ತೊಲೆಯನ್ನು ಹುಣಸೆ ಸೊಪ್ಪಿನ ರಸದಲ್ಲಿ ಅರೆದು ಕುದಿಸಿ ಸೇವಿಸಿದರೆ ಗ್ರಹಣಿ, ಅತಿಸಾರ ಮೊದಲಾದವು ಗಳೆಲ್ಲ ಗುಣವಾಗುವುವು.

ಏಲಕ್ಕಿ, ಓಮ, ಕೊಡಸಿಗೆಯ ಬೀಜ, ಅರಸಿನ, ಹಿಪ್ಪಲಿ, ಶುಂಠಿ, ಅಂಬಟೆ ಮರದ ಚಿಗುರು ಇವುಗಳ ಅಷ್ಟಾವಶೇಷ ಕಷಾಯ ಮಾಡಿ ಸೇವಿ ಸುವುದು ಹಿತ.

ರಾವು ಬೀಜದ ಮರದ ಚಿಗುರು, ಕೊರುಂಗು ಮರದ ಚಿಗುರು, ಕೆಂಪುತ್ತರಣೆಯ ಚಿಗುರು, ಶುಂಠಿ, ಅಣಿಲೆಕಾಯಿ, ಚವಲ್ಕಾರ, ಸೈಂಧವ ಇವುಗಳ ಅಷ್ಟಾವಶೇಷ ಕಷಾಯ ಮಾಡಿ ಸೇವಿಸುವುದು.

ದಾಲಚೀನ ಕೆತ್ತೆ, ಮರದರಸಿನ, ಕಾಡುಬೆಂಡೆ ಬೇರು, ಭದ್ರಮುಷ್ಠಿ ಗಡ್ಡೆ, ಅತಿವಿಡೆಯ, ಕರಿಮೆಣಸು, ಇವುಗಳ ಕಷಾಯ ಮಾಡಿ ಸೇವಿಸುವುದು.

ಅಥವಾ—

ಮೇಲಿನ ಮೂರು ಯೋಗಗಳಲ್ಲಿ ಹೇಳಿದ ಮದ್ದುಗಳನ್ನು ಯೋಗ ಪ್ರಕಾರ ಸೇರಿಸಿ ಚೂರ್ಣ ಮಾಡಿ ಮಜ್ಜಿಗೆಯಲ್ಲಿ ಯಾ ಬಿಸಿನೀರಿನಲ್ಲಿ ಸೇವಿಸುವುದು. ಇದರಿಂದ ಗ್ರಹಣೀರೋಗವು ಶಮನವಾಗುವುದು.

ಭದ್ರಮುಷ್ಠಿ ಗಡ್ಡೆಯನ್ನೂ ನೆಲಪ್ಪನೆ ಗಡ್ಡೆಯನ್ನೂ ಅಷ್ಟಾವಶೇಷ ಕಷಾಯ ಮಾಡಿ ಇಪ್ಪತ್ನಾಲ್ಕು ಅಥವಾ ನಲುವತ್ತೆಂಟು ದಿನ ಸೇವಿಸಿದರೆ ಗುಣವಾಗುವುದು.

ನೆಲತುಂಬೆ (ನೆಲನೆಕ್ಕರೆ), ಮತ್ತು ಗರಿಕೆಹುಲ್ಲು ಇವುಗಳನ್ನು ಸಮೂಲವಾಗಿ ಸಮಾಂಶ ಸೇರಿಸಿ ಅಷ್ಟಾವಶೇಷ ಕಷಾಯ ಮಾಡಿ ಸೇವಿಸಿದರೆ ಗ್ರಹಣೀ ಕಾಯಿಲೆ ನಿವಾರಣೆಯಾಗುವುದು.

ಪುದೆಲು ಗಾವುಟೆ ಗಿಡದ ಬೇರಿನ ತೊಗಟೆಯನ್ನು ಹುಳಿಮಜ್ಜಿಗೆಯಲ್ಲಿ ಅರೆದು ಬೋಗರಿಗಾತ್ರದಷ್ಟು ಮಾತ್ರೆ ಮಾಡಿ ಉಪ್ಪಿನಲ್ಲಿ ಹುಗಿದು ಒಣಗಿಸಿಟ್ಟು ಕೊಂಡು ಮಜ್ಜಿಗೆಯಲ್ಲಿ ಕದಡಿ ಆರು ಅಥವಾ ಹನ್ನೆರಡು ದಿನ ಸೇವಿಸುವುದು. ಮತ್ತು,

ಅರಿಮರದ ಸೊಪ್ಪನ್ನು ಜೀರಿಗೆ ಸೇರಿಸಿ ಅರೆದು ಬಟ್ಟೆಯಲ್ಲಿ ಹಾಕಿ ನಾಲ್ಕು ನಾಲ್ಕು ಬಿಂದುಗಳಷ್ಟು ರಸವನ್ನು ಬೆಳಗ್ಗೆ ಎರಡು ಕಣ್ಣುಗಳಿಗೂ ಹಾಕುವುದು. ಮತ್ತು,

ನಾಗಸಂಪಗೆಯ ಸೊಪ್ಪಿನ ಕಷಾಯದಲ್ಲಿ ಮಿಂಯುವುದು. (ಮೂರು ವಾ ಆರು ದಿನ)

ಕಾಡುಮಲ್ಲಿಗೆ ಬಳ್ಳಿಯ ಬೇರು, ಚೆನ್ನಾರೆ ಬಳ್ಳಿಯ ಬೇರು, ನೆಕ್ಕರಿಕನ ಬೇರು, ಪುದೆಲು ಗಾವುಟೆ ಬೇರು, ಇವುಗಳ ಮದ್ದಿನ ಗಂಜಿ ಮಾಡಿ ದನದ ಮಜ್ಜಿಗೆ ಹಾಕಿ ಮೂರು ದಿನ ಬೆಳಗ್ಗೆ ಉಣ್ಣುವುದು. ಮತ್ತು ಕಾಡು ಮಲ್ಲಿಗೆಯದೇ ಸೊಪ್ಪನ್ನು ನೊರೆ ಹಾಲಿನಲ್ಲರೆದು ತಲೆಗೆ ಹಾಕುವುದು.

**ಗ್ರಹಣೀ ದೀಪನಕರವಾದ ಕಷಾಯ:**

ರಾವು ಬೀಜದ ಮರದ ಕೆತ್ತೆ (ಶುದ್ಧಿಮಾಡಿ) ಬಿಲ್ವಪತ್ರೆ ಬೇರಿನ ತಿರುಳು, ಕರಿಮೆಣಸು, ಅಣಿಲೆಕಾಯಿ ಸಿಪ್ಪೆ, ತೆಗ್ಗಾಲೆ, ಶುಂಠಿ, ಇವುಗಳ ಅಷ್ಟಾವಶೇಷ ಕಷಾಯ ಸೇವಿಸುವುದು.

## ಗ್ರಹಣಿಯಿಂದ ಮೈಯಲ್ಲಿಮುಳ್ಳು ಏಳುವುದಿದ್ದರೆ:

ಉಮಿಗುಳ್ಳದ ಸೊಪ್ಪು, ಎಮ್ಮೆ ಸೆಗಣಿ, ಇವುಗಳನ್ನು ಅರೆದು ಮೂರು ದಿನ ಲೇಪಿಸುದು. ಆ ಮೇಲೆ ಇವುಗಳನ್ನೇ ಕಲ್ಕವಾಗಿ ಸೇರಿಸಿ ಎಣ್ಣೆ ಹಾಕಿ ಕಾಯಿಸಿ ಪೂಸಿವರೆ ನಿಶ್ಯೇಷ ಗುಣವಾಗವುದು.

ಕುಕ್ಕುಸನ (ಎಂಜಿರು ಬಳ್ಳಿ), ಬೇರಿನ ಕೆತ್ತೆ ಕಿಸ್ಕಾರ ಬೇರಿನ ಸಿಪ್ಪೆ (ಕೇಪಳ) ಇವುಗಳನ್ನು ಸ್ವಚ್ಚಪಡಿಸಿ ಎಂಟೆಂಟು ತೊಲೆಯಂತೆ ತೆಗೆದು ಸುಣ್ಣಗೆ ಅರೆದು ದನದ ಮಜ್ಜಿಗೆಯಲ್ಲಿ ಕದಡಿ ಕಾಯಿಸಿ ಕಾಲು ಕಾಲು ಸೇರು ಬೆಲ್ಲವನ್ನೂ ಸಕ್ಕರೆಯನ್ನೂ, ಅರ್ಧ ತೊಲೆ ಕರಿಮೆಣಸಿನ ಚೂರ್ಣವನ್ನೂ. ಎರಡು ತೊಲೆ ದನದ ತುಪ್ಪವನ್ನೂ ಸೇರಿಸಿ ಲೇಹಪಾಕವಾಗಿ ಕಾಯಿಸಿ ಇಳಿಸಿ ಭದ್ರವಾಗಿರಿಸಿಕೊಂಡು ದಿನದಲ್ಲಿ ಎರಡು ಹೊತ್ತು ಒಂದೊಂದು ತೊಲೆಯಂತೆ ಸೇವಿಸುವುದು. (ಎರಡು ಯಾ ಮೂರು ವಾರ)

ಲೇಪಕ್ಕೆ—ನೊರೆಕ್ಕಾಯಿ ಸೊಪ್ಪನ್ನು ದನವ ಹಾಲಿನಲ್ಲಿ ಬೇಯಿಸಿ ಅರೆದು ಮೂರು ದಿನ ನೆತ್ತಿಗೆ ಹಾಕುವುದು. ಇದರಿಂದ ಮುಳ್ಳೆಬ್ಬಿಸುವ ಗ್ರಹಣಿಯು ನಿರ್ನಾಮವಾಗುವುದು.

## ಪಿತ್ತಗ್ರಹಣಿಗೆ:

ಸಂಭಾರಬೇವಿನ ಎಲೆ, ಶುಂಠಿ, ಅರಸಿನ ಇವುಗಳನ್ನು ಸಮಾಂಶ ತೆಗೆದು ಚೂರ್ಣ ಮಾಡಿ ಒಂದು ತೊಲೆ ಚೂರ್ಣವನ್ನು ಮಜ್ಜಿಗೆಯಲ್ಲಿ ಕದಡಿ ಸೇವಿಸುವುದು.

## ಮಕ್ಕಳ ಗ್ರಹಣಿಗೆ:

ಬಿಲ್ವಫಲದ ಗುಳ, ಭದ್ರಮುಷ್ಠಿ, ಅತಿವಿಡಯ, ಕೊಡಗಪ್ಪಾಲರಿ ಇವುಗಳ ಚೂರ್ಣವನ್ನು ಜೇನಿನಲ್ಲಿ ಕದಡಿ ಸೇವಿಸಿದರೆ ಎಲ್ಲಾ ತರದ ಗ್ರಹಣಿಯೂ ಗುಣವಾಗುವುದು.

ಸಣ್ಣ ಮುಂಡಂಗಿ ಕಾಯಿ ಹಾಕಿ ಮದ್ದಿನ ಗಂಜಿ ಮಾಡಿ ತೆಂಗಿನ ಕಾಯಿಯ ತನಿಹಾಲನ್ನು ಹಾಕಿ ಬೆಳಗ್ಗೆ ಒಂದುಹೊತ್ತು ಉಣಿಸುವುದು. ಹೀಗೆ ಮೂರು ದಿನ ಉಣಿಸಿದರೆ ಗ್ರಹಣಿಯ ವಿಕಾರವು ಶಾಂತವಾಗುವುದು

ಕಾಡು ಮಲ್ಲಿಗೆಯ ಎಲೆಯ ಸ್ವರಸಕ್ಕೆ ಒಂದು ಪಾಲು ತೆಂಗಿನೆಣ್ಣೆ ಸೇರಿಸಿ ಬಾಲಪಾಕದಲ್ಲಿ ಕಾಯಿಸಿ ಸೋಸಿ ಇಪ್ಪತ್ನಾಲ್ಕು ದಿವಸ ಅಭ್ಯಂಗ ಮಾಡಿಸಿದರೆ ಗ್ರಹಣಿ ದೋಷವು ಗುಣವಾಗುವುದು.

ಉರಿಸಣಗೆ (ಆಕೀರೆ, ತುರುಚನ ಗಿಡ) ಯ ಬೇರಿನ ಅಷ್ಟಮಾಂಶ ಕಷಾಯ ಮಾಡಿ ದಿನದಲ್ಲಿ ಎರಡು ಹೊತ್ತು ಪ್ರಕಾರ ಹನ್ನೆರಡು ದಿನ ಸೇವಿಸುವುದು. ಇದರಿಂದ ಗ್ರಹಣಿ, ವಿಸರ್ಪ, ಇತ್ಯಾದಿ ದೋಷಗಳು ನಾಶ ವಾಗಿ ಆರೋಗ್ಯವು ಸಿದ್ಧಿಸುವುದು.

**ಮಕ್ಕಳ ಕಫ ಗ್ರಹಣಿಗೆ:**

ಶುಂಠಿ, ಭದ್ರಮುಷ್ಠಿಗಡ್ಡೆ, ಬಿಲ್ವಪತ್ರೆ ಹಣ್ಣಿನ ಗುಳ, ಶುದ್ಧ ಮಾಡಿದ ಚಿತ್ರಮೂಲದ ಬೇರು, ಕಾಡುಮೆಣಸಿನ ಬೇರು, ಅಣಿಲೆಕಾಯಿಯ ಸಿಪ್ಪೆ ಇವುಗಳ ಚೂರ್ಣವನ್ನು ಜೇನಿನಲ್ಲಿ ಕಲಸಿ ಸೇವಿಸಿದರೆ ಗುಣವಾಗುವುದು.

# ಕ್ಷಯರೋಗ

ಕ್ಷಯಕ್ಕೆ:

ಆಡುಸೋಗೆ ಹೂವಿನ ರಸ ಜೇನು ಸೇರಿಸಿ ಒಂದು ಚಮಚದ ಪ್ರಕಾರ ಪ್ರತಿದಿನವೂ ಸೇವಿಸಿದರೆ ಗುಣವಾಗುವುದು.

ಆನೆ ಕುರುಂದೋಟೆ ಬೇರಿನ ಚೂರ್ಣವನ್ನು ಜೇನು ಮತ್ತು ತುಪ್ಪ ದೊಂದಿಗೆ ಕಲಸಿ ನೆಕ್ಕಿದರೆ ನಿವಾರಣೆಯಾಗುವುದು.

ನೆಲಪ್ಪನೆ ಗಡ್ಡೆಯ ಹಾಲು ಕಷಾಯ ಮಾಡಿ ಸೇವಿಸುವುದು. (ನಲುವತ್ತೆಂಟು ದಿನ)

ನೆಗ್ಗಿಲು ಮುಳ್ಳಿನ ಹಾಲು ಕಷಾಯ ಮಾಡಿ ಸೇವಿಸುವುದರಿಂದ ಗುಣ ವಾಗುವುದು. (ಒಂದು ಮಂಡಲವರೇಗೆ)

ಸಮೂಲ ವಿಷ್ಣುಕ್ರಾಂತಿಯನ್ನು ಹಾಲು ಕಷಾಯ ಮಾಡಿ ನಲು ವತ್ತೆಂಟು ದಿನ ಸೇವಿಸಿದರೆ ಕ್ಷಯ, ರಕ್ತದ ಒತ್ತಡ, ಉಬ್ಬಸ, ಕಫದೋಷ ಮೂತ್ರದೋಷ ಇತ್ಯಾದಿ ಗುಣವಾಗಿ ದೇಹ ಪುಷ್ಟಿಯಾಗುವುದು. ಮಕ್ಕಳಿ ಗಾದರೂ, ವೃದ್ಧರಿಗಾದರೂ, ಯುವಕರಿಗಾದರೂ, ಸ್ತ್ರೀಯರಿಗಾದರೂ ಈ ಯೋಗವು ಉತ್ತಮ ಫಲಕಾರಿಯಾಗಿದೆ. ವಿಷ್ಣುಕ್ರಾಂತಿ ಗಿಡವು ಹಸಿಯಾಗಿ ಸಿಗದಿದ್ದಾಗ ಒಣಗಿಸಿ ಇಟ್ಟ ಗಿಡದ ಚೂರ್ಣವನ್ನು ಅರ್ಧ ತೊಲೆ ಸಕ್ಕರೆ ಸೇರಿಸಿ ಹಾಲಿನಲ್ಲಿ ಕದಡಿ ಸೇವಿಸಬಹುದು.

ಒಂದು ತೊಲೆ ದನದ ಬೆಣ್ಣೆಗೆ ಒಂದು ತೊಲೆ ಕಲ್ಲು ಸಕ್ಕರೆ ಅರ್ಧ ತೊಲೆ ಜೇನು ಸೇರಿಸಿ ಚೆನ್ನಾಗಿ ಜಾಳಿಸಿ ನಿಧಾನವಾಗಿ ನೆಕ್ಕಿ ತಿನ್ನುವುದು ಹೀಗೆ ಕೆಲವು ದಿನ ತಿನ್ನುವುದರಿಂದ ಧಾತುವೃದ್ಧಿಯಾಗಿ ದೇಹಕ್ಕೆ ತ್ರಾಣ ಬರುವುದು.

ಗರಗ ಮತ್ತು ಕರಿಮೆಣಸು ಒಂದೊಂದು ತೊಲೆ ಸೇರಿಸಿ ದನದ ನೊರೆ ಹಾಲಿನಲ್ಲಿ ಅರೆದು ಸೇವಿಸುವುದು. ಹಾಲನ್ನ, ಸಪ್ಪೆಯಾಹಾರ ಸೇವಿಸಿ ಪಥ್ಯವಾಗಿರುವುದು. ಇದರಿಂದ ಕ್ಷಯರೋಗ ಗುಣವಾಗುವುದು.

ಹರಳ ಗಿಡದ ಚಿಗುರು, ಗಜಿಗೆ ಗಿಡದ ಚಿಗುರು, ನೆಲನೆಲ್ಲಿ ಗಿಡ ಇವು ಮೂರನ್ನೇ ಆಗಲಿ ಇವುಗಳೊಂದಿಗೆ ಗರಗವನ್ನು ಮತ್ತು ಕರಿಬೇವಿನ ಚಿಗುರನ್ನು ಸೇರಿಸಿಯಾಗಲಿ, ಅವುಗಳನ್ನು ನುಣ್ಣಗೆ ಅರೆದು ಸಮಾಂಶ ಕರಿಮೆಣಸಿನ ಚೂರ್ಣವನ್ನು ಸೇರಿಸಿ ಹಾಲಿನಲ್ಲಿ ಕದಡಿ ಸೇವಿಸಿದರೆ ಜ್ವರವು ಬಿಟ್ಟು ದೇಹವು ಪುಷ್ಟಿಯಾಗುವುದು.

ಅಣಲೆಕಾಯಿ ಸಿಪ್ಪೆ, ಒಣಶುಂಠಿ, ಗಜಿಗೆಕಾಯಿ ತಿರುಳು, ಓಮ, ಸಾಸಿವೆ, ಸೈಂಧವ ಲವಣ, ಇವುಗಳನ್ನು ಸಮಾಂಶ ಸೇರಿಸಿ ವಸ್ತ್ರಗಾಳಿತ ಚೂರ್ಣಮಾಡಿ ಕಲಗಚ್ಚಿನಲ್ಲಿ ಕದಡಿ ಸೇವಿಸಿದರೆ ಗುಣವಾಗುವುದು.

ಹುಣಸೆ ಮರದಲ್ಲಿ ಮರದಿಂದ ಬಿಟ್ಟು ಎದ್ದು ನಿಂದಿರುವ ಕೆತ್ತೆಯನ್ನು ಸ್ವಚ್ಛಪಡಿಸಿ ಅಂತರ್ಧೂಮ ಭಸ್ಮಮಾಡಿ ವಸ್ತ್ರದಲ್ಲಿ ಗಾಳಿಸಿ ಈ ಭಸ್ಮ ಒಂದು ಚಿಟಿಕೆಯನ್ನು ಹಸಿನೀರಿನಲ್ಲಿ ಕದಡಿ ಸೇವಿಸುವುದು ಹಿತ.

ಅಣಲೆಕಾಯಿ ಸಿಪ್ಪೆ, ನೆಲ್ಲಿಕಾಯಿ ಸಿಪ್ಪೆ, ಒಣಶುಂಠಿ, ಇವುಗಳ ಚೂರ್ಣವನ್ನು ಹಾಲಿನಲ್ಲಿ ಕದಡಿ ಸಕ್ಕರೆ ಹಾಕಿ ಮೂರು ದಿನ ಸೇವಿಸುವುದು

ಜೇನು ಮತ್ತು ತುಪ್ಪ ಬೇರೆ ಬೇರೆ ಪ್ರಮಾಣದಲ್ಲಿ ಸೇರಿಸಿ ಚೆನ್ನಾಗಿ ಜಾಳಿಸಿ ಬೆರಳಿನಿಂದ ತೆಗೆದು ಚೀಪಿ ಬಾಯಲ್ಲಿ ರಸವಾದಂತೆ ನಿಧಾನವಾಗಿ ನುಂಗುವುದು. ದಿನದಲ್ಲಿ ನಾಲ್ಕಾರು ಬಾರಿಯಾಗಿ ಒಂದು ಯಾ ಒಂದೂವರೆ ತೊಲೆಯಿಂದ ಹೆಚ್ಚಾಗದಂತೆ ನಲುವತ್ತೆಂಟು ದಿನ ಸೇವಿಸುವುದರಿಂದ ಧಾತು ವೃದ್ಧಿಯಾಗಿ ದೇಹ ಪುಷ್ಟಿಯಾಗುವುದು. ಇದು ಕ್ಷಯಕ್ಕೆ ಅತ್ಯುತ್ತಮವಾದ ಟಾನಿಕ್.

ಬಿಲ್ವಪತ್ರೆ ಬೇರು, ಅಮೃತಬಳ್ಳಿ, ಭದ್ರಮುಷ್ಠಿ ಗಡ್ಡೆ, ಅಡುಸೋಗೆ ಬೇರು, ಒಣಶುಂಠಿ, ಕರಿಮೆಣಸು, ಹಿಪ್ಪಲಿ, ಜೀರಿಗೆ ಇವುಗಳ ಅಷ್ಟಾವಶೇಷ ಕಷಾಯ ಮಾಡಿ ಸೇವಿಸುವುದು. ನಲುವತ್ತೆಂಟು ದಿನ ಸೇವಿಸುವುದರಿಂದ ಗುಣವಾಗುವುದು.

**ಶುಕ್ಲ ಕ್ಷಯಕ್ಕೆ:**

ಅಶ್ವಗಂಧಿ ಮತ್ತು ಏಲಕ್ಕಿ ಚೂರ್ಣಮಾಡಿ ಸಮಾನ ತೂಕ ಸೇರಿಸಿ ಎರಡಾಣೆ ತೂಕದಷ್ಟು ದನದ ಬೆಣ್ಣೆಯಲ್ಲಿ ಕಲಸಿ ಸೇವಿಸುವುದು. ಹೀಗೆ ನಲುವತ್ತೆಂಟು ದಿನ ಸೇವಿಸುವುದರಿಂದ ದೇಹಕ್ಕೆ ತ್ರಾಣ ಬರುವುದು.

ಹಿಪ್ಪಲಿ ಹಾಲು ಕಷಾಯಮಾಡಿ ಚೆನ್ನಾಗಿ ತಣಿಸಿ ಒಂದು ತೊಲೆ ಜೇನು, ಒಂದು ತೊಲೆ ಸಕ್ಕರೆ, ಮುಕ್ಕಾಲು ತೊಲೆ ದನದ ತುಪ್ಪ ಹಾಕಿ ರಾತ್ರಿ ಊಟದ ನಂತರ ಸೇವಿಸುವುದು. ನಲುವತ್ತೆಂಟು ದಿನ ಸೇವನೆ ಯಾದಾಗ ಕ್ಷಯ ನಿವಾರಣೆಯಾಗಿ ಸುಖವಾಗುವುದು.

**ಧಾತು ಕ್ಷಯಕ್ಕೆ:**

ನೆಗ್ಗಿಲು ಮುಳ್ಳು, ಪಾಷಾಣಭೇದಿ, ಕಲ್ಲೂರ್ವಣಿಗಿ, ಕಡಿರ ಬೇರು, ಇವುಗಳ ಅಷ್ಟಾವಶೇಷ ಕಷಾಯ ಮಾಡಿ ಬತ್ತಿಸಿ ನಾಲ್ಕು ಕುಡ್ತೆ ಇರುವಾಗ ಇಳಿಸಿ ಎರಡು ಕುಡ್ತೆ ತೆಗೆದಿರಿಸಿ ಉಳಿದುದನ್ನು ಬತ್ತಿಸಿ ಅರ್ಧಕುಡ್ತೆ ಮಾಡಿ ಇಳಿಸಿ ಸೋಸಿ ಇಟ್ಟುಕೊಳ್ಳುವುದು. ತೆಗೆದ ಎರಡು ಕುಡ್ತೆ ಕಷಾಯಕ್ಕೆ ಒಂದು ಕುಡ್ತೆ ದನದ ಹಾಲು ಹಾಕಿ ಕಾಯಿಸಿ ಬತ್ತಿಸಿ ಒಂದು ಕುಡ್ತೆ ಮಾಡಿ ಇಳಿಸಿ ಸೋಸಿ ಒಂದು ಚಮಚ ಸಕ್ಕರೆ ಹಾಕಿ ರಾತ್ರಿ ಊಟದ ನಂತರ ಸೇವನೆ. ಬೆಳಗ್ಗೆ ಮುಖ ತೊಳೆದೊಡನೆ ಬತ್ತಿಸಿ ಇರಿಸಿದ ಅರ್ಧ ಕುಡ್ತೆ ಕಷಾಯಕ್ಕೆ ಒಂದು ಚಮಚ ಸಕ್ಕರೆ ಹಾಕಿ ಸೇವನೆ. ಇದರಿಂದ ಜೀರ್ಣಶಕ್ತಿ ಹೆಚ್ಚಾಗಿ ಧಾತು ವೃದ್ಧಿಯಾಗುವುದು.

ಜ್ಯೇಷ್ಠಮಧುವನ್ನು ವಸ್ತ್ರಗಾಳಿತ ಚೂರ್ಣ ಮಾಡಿ ತುಪ್ಪ ಮತ್ತು ಜೇನು ಹಾಕಿ ಕಲಸಿ ತಿನ್ನುವುದು ಮತ್ತು ಹಾಲು ಕುಡಿಯುವುದು.

**ದುಶ್ಚೇಷ್ಟೆಯಿಂದಾದ ನಷ್ಟೇಂದ್ರಿಯಕ್ಕೆ:**

ಕರಿಲೊಕ್ಕಿ ಗಿಡದ ಒಂದು ತೊಲೆ ಚೂರ್ಣವನ್ನು ಬೆಲ್ಲದಲ್ಲಿ ಕಲಸಿ ಯಾ ಒಂದು ಕುಡ್ತೆ ಚೆನ್ನಾಗಿ ಕಾಯಿಸಿದ ದನದ ಹಾಲಿನಲ್ಲಿ ಕದಡಿ ಒಂದು ತೊಲೆ ಸಕ್ಕರೆಯನ್ನೂ ಸೇರಿಸಿ ಸೇವಿಸುವುದು. ಬೆಳಗ್ಗೆ ಒಂದು ಹೊತ್ತು ಆರು ದಿನ ಸೇವಿಸುವುದರಿಂದ **ನಷ್ಟೇಂದ್ರಿಯವು** ನಿವಾರಿಸಲ್ಪಡುವುದು. ಮಾತ್ರವಲ್ಲದೆ ಅಗ್ನಿದೀಪ್ತಿಯುಂಟಾಗಿ ಧಾತು ವೃದ್ಧಿಯಾಗುವುದು.

ಕೊಂದೆ ಮರದ ಐದು ಚಿಗುರುಗಳನ್ನು ನಿಂಬೆಹಣ್ಣಿನ ರಸದಲ್ಲಿ ಅರೆದು ಬೆಳಗ್ಗೆ ಸೇವಿಸುವುದು. ಮೂರು ದಿನ ಸೇವಿಸಲು ಗುಣವಾಗುವುದು. ಇದರಿಂದ ಅಗ್ನಿದೀಪನವಾಗಿ ಧಾತು ವೃದ್ಧಿಯಾಗುವುದು.

ನುಗ್ಗೆ ಬೇರಿನ ಕೆತ್ತೆ ಒಂದು ತೊಲೆಯನ್ನು ಒಂದು ಕುಡ್ತೆ ನೀರೆ ಹಾಲಿನಲ್ಲಿ ಅರೆದು ೩ ದಿವಸ ಬೆಳಗ್ಗೆ ಸೇವಿಸುವುದು. ಮೂರು ದಿನ ಸೇವಿಸಿದರೆ ಧಾತು ವೃದ್ಧಿಯಾಗುವುದು.

ಸಾಸಿವೆಯನ್ನು ಚೂರ್ಣಮಾಡಿ ಒಂದು ಚಿಟಿಕೆ ಚೂರ್ಣವನ್ನು ಬಿಸಿ ನೀರಿನಲ್ಲಿ ಹಾಕಿ ಮುಚ್ಚಿರಿಸಿ ತಣ್ಣಗಾದಾಗ ಇರಿಸಿ ದಿನದಲ್ಲಿ ಎರಡು ಹೊತ್ತು ಸೇವನೆ. ಹೀಗೆ ಐದು ದಿನ ಸೇವಿಸುವುದರಿಂದ ಧಾತು ಕ್ಷಯವು ನಿವಾರಣೆಯಾಗುವುದು.

ಬಿಲ್ವಪತ್ರೆ ಮರದ ಕೆತ್ತೆಯನ್ನು ಹಾಲು ಕಷಾಯ ಮಾಡಿ ಹುರಿದ ಜೀರಿಗೆಯ ಚೂರ್ಣ ಒಂದು ಚಿಟಿಕೆ ಮತ್ತು ಒಂದು ಚಮಚ ಸಕ್ಕರೆ ಸಹ ಹಾಕಿ ದಿನದಲ್ಲಿ ಒಂದು ಹೊತ್ತು ಸೇವನೆ. ಒಂದು ವಾರ ಸೇವಿಸಿದರೆ ಧಾತು ಕ್ಷಯವು ನಾಶವಾಗಿ ಆರೋಗ್ಯ ಲಾಭವಾಗುವುದು.

ಗೋಳಿ ಬೀಣೆನ ಚಿಗುರನ್ನು ಶೀತ ಕಷಾಯ ಮಾಡಿ ಪ್ರತಿದಿನವೂ ಬೆಳಗ್ಗೆ ಸೇವಿಸುವುದು. ಹೀಗೆ ಒಂದು ವಾರ ಸೇವಿಸುವುದರಿಂದ ಧಾತು ವಿಕಾರ ಹಾಗೂ ಮೂತ್ರ ದೋಷವು ಗುಣವಾಗುವುದು.

ಶುದ್ಧಿ ಮಾಡಿದ ಚಿತ್ರಮೂಲದ ಬೇರಿನ ಹಾಲು ಕಷಾಯ ಸೇವಿಸಲು ಧಾತುಕ್ಷಯ, ಗ್ರಹಣಿ, ಅಗ್ನಿಮಾಂದ್ಯ ಇತ್ಯಾದಿ ಗುಣವಾಗುವುದು,

**ಪಿತ್ತ ಕ್ಷಯಕ್ಕೆ:**

ಉರಗೆಯ (ಒಂದೆಲಗ) ಎಲೆಯನ್ನು ನೆರಳಿನಲ್ಲಿ ಒಣಗಿಸಿ ಚೂರ್ಣ ಮಾಡಿ ಸಮಾಂಶ ಸಕ್ಕರೆ ಸೇರಿಸಿ ದಿನದಲ್ಲಿ ಒಂದು ಹೊತ್ತು ಅರ್ಧ ತೊಲೆ ಪ್ರಕಾರ ನಲುವತ್ತೆಂಟು ದಿನ ಸೇವಿಸುವುದು. ಹುಳಿ, ಮೆಣಸು, ಸಂಭಾರಗಳನ್ನು ಬಿಟ್ಟು ಹಾಲನ್ನ, ಸಪ್ಪೆಯಾಹಾರ ಸೇವಿಸುವುದು. ಎರಡುತಿಂಗಳು ಬ್ರಹ್ಮಚರ್ಯ ಪಾಲಿಸುವುದು. ಇದರಿಂದ ಪಿತ್ತಕ್ಷಯ ನಿವಾರಿಸಲ್ಪಟ್ಟು ದೇಹ ಸದೃಢವಾಗುವುದು.

**ಹೃದಯ ಕ್ಷಯಕ್ಕೆ:**

ಹಿಪ್ಪಲಿ, ದ್ರಾಕ್ಷೆ, ಇವುಗಳ ಅಷ್ಟಾವಶೇಷ ಕಷಾಯ ಮಾಡಿ ಚೆನ್ನಾಗಿ ತಣಿಸಿ ಜೇನು ತುಪ್ಪ ಮೇಲ್ಪುಡಿ ಹಾಕಿ ಸೇವಿಸುವುದು.

ಶುಂಠಿ, ಕರಿಮೆಣಸು, ಹಿಪ್ಪಲಿ, ಇವುಗಳನ್ನು ಸಮಾಂಶ ಸೇರಿಸಿ ಅರೆದು ತೊಗರಿಕಾಯಿಯ ಗಾತ್ರ ಮಾತ್ರೆ ಮಾಡಿ ದಿನದಲ್ಲಿ ಒಂದು ಮಾತ್ರೆಯ ಪ್ರಕಾರ ಜೇನಿನಲ್ಲಿ ತೇದು ಸೇವಿಸುವುದು. ನಲುವತ್ತೆಂಟು ದಿನ ಸೇವನೆಯಿಂದ ಅಗ್ನಿದೀಪನವಾಗುವುದು. ಮಾತ್ರವಲ್ಲದೆ ಹೃದಯಕ್ಕೆ ಬಲ ಬಂದು ಆರೋಗ್ಯ ಉತ್ತಮವಾಗುವುದು.

ಅಶ್ವಗಂಧಿ ಮತ್ತು ಹಿಪ್ಪಲಿ ಸಮಾಂಶ ಸೇರಿಸಿ ವಸ್ತ್ರಗಾಳಿತ ಚೂರ್ಣ ಮಾಡಿ ಕಾಲು ಯಾ ಅರ್ಧ ತೊಲೆ ಚೂರ್ಣವನ್ನು ಚೆನ್ನಾಗಿ ಕಾಯಿಸಿದ ಆಡಿನ ಹಾಲಲ್ಲಿ ಕದಡಿ ಪ್ರತಿ ದಿನ ಬೆಳಿಗ್ಗೆ ಸೇವನೆ. ಒಂದು ಯಾ ಎರಡು ವಾರ ಸೇವನೆಯಿಂದ ಹೃದಯ ಬಲಗೊಂಡು ಕಾಯಿಲೆ ನಿವಾರಣೆಯಾಗುವುದು.

ಇಂದುಪ್ಪು, ಏಲಕ್ಕಿ, ಆಡುಸೋಗೆ ಬೇರು ಇವುಗಳನ್ನು ಸಮಾಂಶ ಸೇರಿಸಿ ಚೂರ್ಣ ಮಾಡಿ ಚೆನ್ನಾಗಿ ಕಾಯಿಸಿದ ಆಡಿನ ಹಾಲಿನಲ್ಲಿ ಅರ್ಧ ಯಾ ಒಂದು ತೊಲೆ ಚೂರ್ಣವನ್ನು ಕದಡಿ ಚೆನ್ನಾಗಿ ತಣಿದ ಮೇಲೆ ಒಂದು ಚಮಚ ಜೇನು ಹಾಕಿ ಸೇವನೆ.

**ವಾತಕ್ಷಯಕ್ಕೆ:**

ತುಪ್ಪದಲ್ಲಿ ಹುರಿದು ಶುದ್ಧಿ ಮಾಡಿದ ಹಿಂಗು ಒಂದು ಗುರುಗುಂಜಿಯ ಪ್ರಮಾಣದಷ್ಟು ಮಜ್ಜಿಗೆಯಲ್ಲಿ ಕದಡಿ ಸೇವಿಸುವುದು.

ಪಾಲಾಷದ ಕೆತ್ತೆ, ಶುಂಠಿ, ಇಂದುಪ್ಪು, ಇವುಗಳನ್ನು ಸಮಾಂಶ ಸೇರಿಸಿ ಮಜ್ಜಿಗೆಯಲ್ಲರೆದು ಬಿಸಿಮಾಡಿ ಸೇವಿಸುವುದು.

ಅರಸಿನ, ಮರದರಸಿನ, ಅಶ್ವಗಂಧಿ, ಇಂದುಪ್ಪು ಇವುಗಳನ್ನು ಸಮಾಂಶ ಸೇರಿಸಿ ಮಜ್ಜಿಗೆಯಲ್ಲರೆದು ಬಿಸಿಮಾಡಿ ಸೇವಿಸುವುದು.

**ನಾಡೀ ಶೋಷದಿಂದಾದ ರಕ್ತದ ಒತ್ತಡ ((ಬ್ಲಡ್ ಪ್ರೆಶ್ಶರ್ ರೋಗ)ಕ್ಕೆ:**

ಕರಿಮೆಣಸಿನ ಚೂರ್ಣ ಒಂದು ಆಣೆ ತೂಕವನ್ನು ಬೆಣ್ಣೆಯಲ್ಲಿ ಕಲಸಿ ಪ್ರತಿ ದಿನ ಬೆಳಗ್ಗೆ ಸೇವಿಸುವುದು. ನಲುವತ್ತೆಂಟು ದಿನ ಸೇವಿಸುವುದರಿಂದ ಶೋಷ ಹಾಗೂ ರಕ್ತದೊತ್ತಡ ಮಾಯವಾಗುವುದು.

**ದೇಹಕ್ಷೀಣವಿದ್ದವರಿಗೆ:**

ಸಮುದ್ರ ಫಲವನ್ನು ನೀರಿನಲ್ಲರೆದು ಸರ್ವಾಂಗ ಲೇಪಿಸುವುದು. ಮತ್ತು ವಿದಾರ್ಯಾದಿಗಣದ ಮದ್ದುಗಳನ್ನು ಹಾಲು ಕಷಾಯ ಮಾಡಿ ಸೇವಿಸುವುದು. ಇದರಿಂದ ಎಲ್ಲಾ ವಿಧದ ಶೋಷವೂ ಪರಿಹಾರವಾಗಿ ದೇಹಕ್ಕೆ ತ್ರಾಣ ಬರುವುದು.

**ಕ್ಷಯದಿಂದ ಸ್ವರ ಬಿದ್ದರೆ:**

ಮಾವಿನೆಲೆಯ ಪಾದಾವಶೇಷ ಕಷಾಯ ಮಾಡಿ ಚೆನ್ನಾಗಿ ತಣಿಸಿ ಜೇನು ಮೇಲ್ಪುಡಿ ಹಾಕಿ ಸೇವಿಸುವುದು.

**ತ್ರಿಜಾತಕಾದಿ ಕಷಾಯ:** ಲವಂಗ ಪಟ್ಟೆ, ಏಲಕ್ಕಿ, ಪಚ್ಚೆಕದಿರು, ಶುಂಠಿ, ಕರಿಮೆಣಸು, ಹಿಪ್ಪಲಿ, ಭಾರಂಗಿ ಬೇರು, ಸಣ್ಣ ಬದನೆ ಬೇರು, ಇವುಗಳ ಅಷ್ಟಮಾಂಶ ಕಷಾಯ ಮಾಡಿ ಚೆನ್ನಾಗಿ ತಣಿಸಿ ಜೇನು ಹಾಕಿ ಸೇವಿಸುವುದರಿಂದ ಅರುಚಿ, ಸ್ವರದೋಷ, ಎದೆನೋವು, ಕಫ ಪ್ರಸೇಕ ಇತ್ಯಾದಿ ಗುಣವಾಗುವುದು.



ಅಕ್ಕಿ ಬಳ್ಳಿ ಎಲೆ

# ಜ್ವರ

**ಕಫ ಜ್ವರ:**

ಕರಿನೆಕ್ಕಿ ಎಲೆಯ ಅಷ್ಟಾವಶೇಷ ಕಷಾಯ ಮಾಡಿ ಕರಿಮೆಣಸಿನ ಚೂರ್ಣವನ್ನು ಮೇಲ್ಪುಡಿ ಹಾಕಿ ಸೇವಿಸುವುದು. ಹೀಗೇ ಒಂದು ವಾರ ಸೇವಿಸಿದರೆ ಕಫಜ್ವರ ಗುಣವಾಗುವುದು,

ಮಾಬಲಹುಳಿ ಗಿಡದ ಬೇರು. ಸಮೂಲ ಹೊನಗೊನ್ನೆ (ಪೊನ್ನಾಂಕಣ್ಣಿ) ಇವುಗಳ ಅಷ್ಟಾವಶೇಷ ಕಷಾಯಮಾಡಿ ಆರು ದಿನ ಸೇವಿಸಿದರೆ ಗುಣವಾಗುವುದು.

**ಹಳೆಯ ಜ್ವರಕ್ಕೆ:**

ಅಮೃತಬಳ್ಳಿಯ ಶೀತ ಕಷಾಯಮಾಡಿ ದಿನದಲ್ಲಿ ಎರಡು ಹೊತ್ತಿನಂತೆ ಆರು ದಿನ ಸೇವಿಸುವುದು.

ಮೂರು ವರ್ಷ ಹಳೆಯ ಹುಣಸೆಹಣ್ಣು. ಶುಂಠಿ, ಕರಿಮೆಣಸು, ಹಿಪ್ಪಲಿ ಇವುಗಳನ್ನು ಒಟ್ಟು ಸೇರಿಸಿ ಅರೆದು ಸರ್ವಾಂಗ ಲೇಪಹಾಕುವುದು.

**ವಿಷಮ ಜ್ವರಕ್ಕೆ:**

ಎರಡು ತೊಲೆ ತುಳಸಿ ಎಲೆಯ ರಸಕ್ಕೆ ಒಂದು ತೊಲೆ ಕರಿಮೆಣಸಿನ ಚೂರ್ಣ ಹಾಕಿ ಸೇವಿಸುವುದು. ಹೀಗೇ ಮೂರು ವಾ ಆರುದಿನ ಸೇವಿಸುವುದು.

ತುಂಬೆಯೆಲೆಯ ರಸ ಎರಡು ತೊಲೆಗೆ ಒಂದು ತೊಲೆ ಕರಿಮೆಣಸಿನ ಚೂರ್ಣ ಹಾಕಿ ಸೇವಿಸುವುದು. ಇದೇ ಪ್ರಕಾರ ಮೂರು ವಾ ಆರು ದಿನ ಸೇವಿಸುವುದು.

**ಸಾಮಾನ್ಯ ಜ್ವರಗಳಿಗೆ:**

ರಂಜೆಯ ಕೆತ್ತೆಯನ್ನು ಹಾಲಿನಲ್ಲಿ ತೇದು ಕಾಲು ತೊಲೆ ಪ್ರಕಾರ ನೆಕ್ಕುವುದು,

ವಿಷ್ಣುಕ್ರಾಂತಿಯನ್ನು ಹಾಲಿನಲ್ಲಿ ಅರೆದು ಅರ್ಧ ತೊಲೆ ಪ್ರಕಾರ ಸೇವಿಸುವುದು.

ಶುಂಠಿ ಮತ್ತು ತುಳಸಿಯ ಬೇರು ಇವುಗಳ ಕಷಾಯ ತಯಾರಿಸಿ ಸೇವಿಸುವುದು.

ಚಿಟ್ಕಿಯ ಗಡ್ಡೆಯನ್ನು ಅಷ್ಟಾವಶೇಷ ಕಷಾಯ ತಯಾರಿಸಿ ಸೇವಿಸುವುದು. (ಇದು ಎಲ್ಲಾ ಜ್ವರಗಳಿಗೂ ರಾಮಬಾಣದಂತಹ ಪ್ರಯೋಗವು.)

**ರಾತ್ರಿ ಜ್ವರಕ್ಕೆ:**

ಅಶ್ವತ್ಥದ ಚಿಗುರಿನ ಫಾಂಟ ಕಷಾಯ ತಯಾರಿಸಿ ಸೇವಿಸುವುದು.

**ವಾತ ಕಫಜ್ವರಕ್ಕೆ: (ಫ್ಲೂ)**

ಒಂದು ಭಾಗ ಶುಂಠಿ, ಎರಡು ಭಾಗ ಕೊತ್ತುಂಬರಿ ಬೀಜ ಇವುಗಳ ಅಷ್ಟಾವಶೇಷ ಕಷಾಯಮಾಡಿ ಬಿಸಿ ಆರುವ ಮೊದಲೇ ಸೇವಿಸುವುದು (ಹದ ಬಿಸಿಯಾಗಿ).

**ವಾತ ಜ್ವರಕ್ಕೆ:**

ಸಣ್ಣ ಬದನೆ ಬೇರು, ಉರಿಸುಂಗೆ ಬೇರು, ಶುಂಠಿ, ಅಮೃತಬಳ್ಳಿ, ಪರ್ಪಟಹುಲ್ಲು, ಭದ್ರಮುಷ್ಠಿಗಡ್ಡೆ ಇವುಗಳ ಅಷ್ಟಾವಶೇಷ ಕಷಾಯ ತಯಾರಿಸಿ ಚೆನ್ನಾಗಿ ತಣಿಸಿ ಜೇನು ಮತ್ತು ಸಕ್ಕರೆ ಮೇಲ್ಪುಡಿ ಹಾಕಿ ಸೇವಿಸುವುದು.

ಗಂಟು ಭಾರಂಗೀ ಬೇರು, ಪರ್ಪಟಹುಲ್ಲು, ಕಡಿರಬೇರು, ಇವುಗಳ ಅಷ್ಟಾವಶೇಷ ಕಷಾಯಮಾಡಿ ತುಪ್ಪ ಮೇಲ್ಪುಡಿ ಹಾಕಿ ಸೇವಿಸುವುದು.

**ಮಲೇರಿಯಾ ಜ್ವರಕ್ಕೆ:**

ಬೂರ ಪಪಾಯಿಯನ್ನು ಕತ್ತರಿಸಿ ಹೋಳುಗಳನ್ನಾಗಿ ಮಾಡಿ ಉಪ್ಪಿನಲ್ಲಿ ಹೂಳಿ ಕೆಲವು ದಿನ ಇರಿಸಿ ಅವಶ್ಯವಾದಾಗ ತೆಗೆದು ದಿನದಲ್ಲಿ ಒಂದು ಹೋಳಿನಂತೆ ಮೂರು ದಿನ ಸೇವಿಸಿದರೆ ಗುಣವಾಗುವುದು.

**ವಿ.ಸೂ.** ಹಳೆಯದಾದಷ್ಟೂ ಇದರ ಪ್ರಭಾವ ಹೆಚ್ಚಾಗುವುದು.

ನೆಲಬೇವು ಅಷ್ಟಾವಶೇಷ ಕಷಾಯಮಾಡಿ ರಾತ್ರೆ ಮತ್ತು ಬೆಳಿಗ್ಗೆ ಸೇವಿಸುವುದು.

ಕಟುಕರೋಹಿಣಿ, ಅಮೃತಬಳ್ಳಿ ಇವುಗಳ ಅಷ್ಟಾವಶೇಷ ಕಷಾಯ ತಯಾರಿಸಿ ಸೇವಿಸುವುದು.

**ಕುದಿ ಜ್ವರಕ್ಕೆ:**

ಜೀವಂತಿ (ಬುಗುಡಿ) ಗಡ್ಡೆ, ಕೊಡಗಪ್ಪಾಲರಿ, ಪರ್ಪಟಪುಲ್ಲು ಇವುಗಳ ಅಷ್ಟಾವಶೇಷ ಕಷಾಯ ಮಾಡಿ ಹಿಪ್ಪಲಿ ಚೂರ್ಣವನ್ನು ಮೇಲ್ಪುಡಿ ಹಾಕಿ ರಾತ್ರಿ ಮತ್ತು ಬೆಳಿಗ್ಗೆ ಸೇವಿಸುವುದು.

ತುಂಬೆ ಬೇರು,ಲೋಧ್ರುದ ಕೆತ್ತೆ (ಮೊಡಂದೆ ಕೆತ್ತೆ) ಏಲಕ್ಕಿ ಇವುಗಳ ಅಷ್ಟಾವಶೇಷ ಕಷಾಯುವಾಡಿ ಸೇವಿಸುವುದು.

ತುಳಸಿಯ ಬೇರು, ಕಾಟು ಹಿಪ್ಪಲಿ ಬೇರು, ವಿಷ್ಣುಕ್ರಾಂತಿ ಇವುಗಳ ಅಷ್ಟಮಾಂಶ ಕಷಾಯ ತಯಾರಿಸಿ ಸೇವಿಸುವುದು.

**ಚಾತುರ್ಥಿಕ ಜ್ವರಕ್ಕೆ:**

ಅರಸಿನವನ್ನೂ ಜೀರಿಗೆಯನ್ನೂ ಎರಡೆರಡು ತಾರ ತೂಕ ಸೇರಿಸಿ ಚೂರ್ಣ ತಯಾರಿಸಿ ಬಿಸಿನೀರಿನಲ್ಲಿ ಕದಡಿ ಸೇವಿಸಿದರೆ ನಾಲ್ಕು ದಿನ ಬಿಟ್ಟು ಬರುವ ಜ್ವರವು ಗುಣವಾಗುವುದು.

ಸಮೂಲ ಕೆಂಪುತ್ತರಣೆ ಗಿಡ ಮತ್ತು ಒಂದು ಚಿಟಿಕೆ ಜೀರಿಗೆ ಇವುಗಳ ಮದ್ದಿನ ಗಂಜಿ ತಯಾರಿಸಿ ಮೂರುದಿನ ಉಂಡರೆ ಚಾತುರ್ಥಿಕ ಜ್ವರ ನಿವಾರಣೆಯಾಗುವುದು.

**ಚಳಿಯಾಗಿ ಬರುವ ಜ್ವರಕ್ಕೆ:**

ಜೀರಿಗೆ, ಶುಂಠಿ, ಕರಿಮೆಣಸು, ಹಿಪ್ಪಲಿ, ಸೈಂಧವ, ನೆಕ್ಕಿ ಚಿಗುರು. ಎಕ್ಕೆ ಹೂವಿನ ಮೊಗ್ಗೆ, ಕರಿತುಳಸಿಯ ಚಿಗುರು, ಇವುಗಳನ್ನು ಸಮಾಂಶವಾಗಿ ತೆಗೆದು ಬಿಸಿನೀರಿನಲ್ಲಿ ಅರೆದು ಮಾತ್ರೆ ಮಾಡಿ ದಿನದಲ್ಲಿ ಮೂರು ಹೊತ್ತು ಒಂದೊಂದು ಮಾತ್ರೆಯಂತೆ ಮೂರು ದಿನ ಸೇವಿಸುವುದು. ಪಥ್ಯಕ್ಕೆ ಹೆಸರು ಧಾನ್ಯದ ಸಾರು, ಮಜ್ಜಿಗೆ ಅನ್ನ ಮತ್ತು ಚಪ್ಪೆಯಾಹಾರವು.

**ಶೀತ ಜ್ವರಕ್ಕೆ:**

ನೆಕ್ಕಿ ಸೊಪ್ಪಿನ ರಸವನ್ನೂ ಬೆಳ್ಳುಳ್ಳಿಯ ರಸವನ್ನೂ ಒಟ್ಟು ಸೇರಿಸಿ ಎಳ್ಳೆಣ್ಣೆ ಸೇರಿಸಿ ಸೇವಿಸುವುದು.

**ಒಳ ಜ್ವರಕ್ಕೆ:**

ಅಮೃತ ಬಳ್ಳಿ, ಕಹಿಬೇವಿನ ಕೆತ್ತೆ, ಕೊತ್ತುಂಬರಿ, ಶತಾವರಿ ಗಡ್ಡೆ, ಶ್ರೀಗಂಧ, ಇವುಗಳ ಅಷ್ಟಾವಶೇಷ ಕಷಾಯ ಮಾಡಿ ಸೇವಿಸುವುದು.

**ದಾಹ ಜ್ವರಕ್ಕೆ:**

ಕೋದೆ ಹೂವಿನ ಅರೆ ಬಿರಿದ ಮೊಗ್ಗೆಯನ್ನೂ, ಕರಿತುಳಸಿಯ ಚಿಗುರನ್ನೂ ಸಮಾಂಶ ಸೇರಿಸಿ ಬಿಸಿ ನೀರಿನಲ್ಲಿ ಅರೆದು ಮಾತ್ರೆ ಮಾಡಿ ಬೆಳಗ್ಗೆ, ಮಧ್ಯಾಹ್ನ, ಸಾಯಂಕಾಲ ಹೀಗೆ ದಿನದಲ್ಲಿ ಮೂರು ಹೊತ್ತು ಒಂದೊಂದು ಮಾತ್ರೆ ಪ್ರಕಾರ ಮೂರು ದಿನ ಸೇವಿಸುವುದು.

**ಪಥ್ಯಕ್ಕೆ:** ದನದ ಮಜ್ಜಿಗೆ ಅನ್ನ ಮತ್ತು ಸಪ್ಪೆಯಾಹಾರವು.

**ಪಿತ್ತಜ್ವರಕ್ಕೆ:**

ಪರ್ಪಟ ಹುಲ್ಲನ್ನು ಅಷ್ಟಾವಶೇಷ ಕಷಾಯ ಮಾಡಿ ದಿನದಲ್ಲಿ ಎರಡು ಹೊತ್ತಿನ್ನ ಪ್ರಕಾರ ಸೇವಿಸುವುದು.

ಪಾಷಾಣಭೇದಿ ಮತ್ತು ಶುಂಠಿ ಇವುಗಳ ಕಷಾಯ ಮಾಡಿ ಸೇವಿಸಿದರೆ ಬೇಗನೆ ಗುಣವಾಗುವುದು.

**ಜ್ವರಗಡ್ಡೆಗೆ:**

ಬಿಳಿ ಮಧ್ಯಾಹ್ನ ಮಲ್ಲಿಗೆ ಗಡ್ಡೆ ಒಂದು ತೊಲೆ, ಕಾಳುಮೆಣಸು (ಕರಿಮೆಣಸು) ಎಣಿಸಿ ಐದು, ಜೀರಿಗೆ ಎರಡು ಆಣೆ ತೂಕ, ಇವುಗಳನ್ನು ಬೆಣ್ಣೆ ಹಾಕಿ ಹುರಿದು. ಮಜ್ಜಿಗೆಯಲ್ಲಿ ಅರೆದು ಅನ್ನದೊಂದಿಗೆ ಕಲಸಿ ದಿನವೂ ಎರಡು ಹೊತ್ತಿನ ಪ್ರಕಾರ ಒಂಭತ್ತು ದಿನ ಉಣ್ಣುವುದು. (ಕಡು ಪಥ್ಯ.)

ಕರಿಮುಂಡಿ ಗಡ್ಡೆಯನ್ನು ಕತ್ತರಿಸಿ ನೆರಳಿನಲ್ಲೇ ಒಣಗಿಸಿ ಚೂರ್ಣ ಮಾಡಿ ಸಮಾಂಶ ಸಕ್ಕರೆ ಸೇರಿಸಿ ಹೊತ್ತಿಗೆ ಅರ್ಧ ತೊಲೆಯಂತೆ ರಾತ್ರಿ ಮತ್ತು ಬೆಳಗ್ಗೆ ಸೇವಿಸುವುದು. ಹೀಗೆ ಹನ್ನೆರಡು ಯಾ ಇಪ್ಪತ್ತನಾಲ್ಕು ದಿನ ಸೇವಿಸಿದರೆ ಜ್ವರಗಡ್ಡೆಯು ಕರಗಿ ಹೋಗಿ ಗುಣವಾಗುವುದು.

ಒಂದು ಒಣ ಕೊಬರಿ ಕಾಯಿಯನ್ನು ನಾಲ್ಕಾಣೆ ತೂಕ ಪೆಟ್ಲುಪ್ಪು ಸೇರಿಸಿ ನುಣ್ಣಗೆ ಅರೆದು ಒಂದೊಂದು ತೊಲೆಯ ಮಾತ್ರೆ ಮಾಡಿ ಪ್ರತಿದಿನವೂ ಬೆಳಗ್ಗೆ ಒಂದು ಮಾತ್ರೆಯಂತೆ ಒಂದು ವಾರ ಸೇವಿಸುವುದು.

**ಪಥ್ಯಕ್ಕೆ:** ಹುರುಳಿ ಸಾರು ಮತ್ತು ಅನ್ನ.

ಹಣ್ಣು ತೆಂಗಿನ ಕಾಯಿಯನ್ನು ಸುಲಿದು ಅದರ ಕಣ್ಣನ್ನು ತೂತು ಮಾಡಿ ಅರ್ಧಾಂಶ ನೀರನ್ನು ಚೆಲ್ಲಿ ಅದರೊಳಗೆ ಶುದ್ಧಿ ಮಾಡಿದ ಚಿತ್ರಮೂಲದ ಬೇರನ್ನು ತುಂಬ ತುಂಬಿಸಿ ಬಿರಡೆ ಮುಚ್ಚಿ ತೆಂಗಿನಕಾಯಿಯನ್ನು ಬಂದುಮಾಡಿ ಉರಿಯುವ ಒಲೆಯ ಹಿಂದೆ ಹದಿನೈದು ದಿನವಿರಿಸಿ ಮತ್ತೆ ತೆಗೆದು ಕಾಯಿಯ ತಿಳಲು ಮದ್ದು ಸಹಿತ ನುಣ್ಣಗೆ ಅರೆದು ಒಂದು ತೊಲೆಯ ಮಾತ್ರೆಗಳನ್ನಾಗಿ ಮಾಡಿ ದಿನವೂ ಒಂದೊಂದು ಮಾತ್ರೆಯಂತೆ ಒಂದು ವಾರ ಸೇವಿಸುವುದು.

**ಪಥ್ಯಕ್ಕೆ:** ಹುಳಿ, ಮೆಣಸು. ಕಾಯಿಪಲ್ಯಗಳನ್ನು ಬಿಟ್ಟು ಹುರುಳಿ ಸಾರು, ತೊಗರಿ ಸಾರು, ಅನ್ನಗಳನ್ನುಪಯೋಗಿಸುತ್ತಾ ಕಡು ಪಥ್ಯದಿಂದ ಇದ್ದರೆ ಹಳೆಯದಾದ ಜ್ವರಗಡ್ಡೆಯೂ ಕರಗಿ ನಿರ್ಮೂಲವಾಗಿ ಗುಣ ವಾಗುವುದು.

**ಅಜೀರ್ಣ ಜ್ವರಕ್ಕೆ:**

ನೆಲಗುಳ್ಳದ ಬೇರು, ಅಮೃತ ಬಳ್ಳಿ. ಶುಂಠಿ ಇವುಗಳ ಅಷ್ಟಾವಶೇಷ ಕಷಾಯಮಾಡಿ ಹಿಪ್ಪಲಿ ಚೂರ್ಣವನ್ನು ಮೇಲ್ಪುಡಿ ಹಾಕಿ ದಿನವೂ ಎರಡು ಹೊತ್ತು ಸೇವಿಸುವುದು. ಇದರಿಂದ ಜ್ವರ, ಅರುಚಿ, ಉಬ್ಬಸ, ಕೆಮ್ಮು. ಶೂಲೆ ಇತ್ಯಾದಿ ಗುಣವಾಗುವುದು.

**ಮಕ್ಕಳ ಅಜೀರ್ಣ ಜ್ವರಕ್ಕೆ:**

ಅಣಿಲೆಕಾಯಿ ಸಿಪ್ಪೆ, ನೆಲ್ಲಿಕಾಯಿ ಸಿಪ್ಪೆ, ಶುದ್ಧಿ ಮಾಡಿದ ಚಿತ್ರ ಮೂಲದ ಬೇರು, ಹಿಪ್ಪಲಿ, ಇವುಗಳ ಫಾಂಟ ಕಷಾಯ ತಯಾರಿಸಿ ಕುಡಿಸಿ ದರೆ ಜೀರ್ಣಶಕ್ತಿ ಸರಿಯಾಗಿ ಮಲಶೋಧನೆಯಾಗುವುದು ಮತ್ತು ಜ್ವರವು ಶಾಂತವಾಗುವುದು.

**ಮಕ್ಕಳ ಸಾಮಾನ್ಯ ಜ್ವರಕ್ಕೆ:**

ಕಟುಕರೋಹಿಣೀ ಕಷಾಯವನ್ನು ಹಿಪ್ಪಲಿ ಚೂರ್ಣ ಮೇಲ್ಪುಡಿ ಹಾಕಿ ಪ್ರಾಯಕ್ಕೆ ಅನುಸಾರವಾಗಿ ಚಮಚ ಲೆಕ್ಕದಲ್ಲಿ ಕುಡಿಸಿದರೆ ಜ್ವರ, ಕೆಮ್ಮು, ಉಬ್ಬಸ ಇತ್ಯಾದಿ ಗುಣವಾಗುವುದು.

ಕಟುಕರೋಹಿಣಿಯನ್ನು ಮೊಲೆಹಾಲಿನಲ್ಲಿ ತೇದು ತಲೆಗೆ ಹಾಕು ವುದರಿಂದ ಅಥವಾ ಮೈ ಸರ್ವಾಂಗ ಪೂಸುವುದರಿಂದಲೂ ಜ್ವರವು ಬಿಡುವುದು.

**ಬಾಲಸಂಜೀವಿನಿ ಮಾತ್ರೆ:**

ಗರಿಕೆ ಹುಲ್ಲು, ಕಟುಕರೋಹಿಣಿ, ದ್ರಾಕ್ಷಿಯ ಹಣ್ಣು, ಜ್ಯೇಷ್ಠಮಧು, ಗೋರೋಜನ ಇವುಗಳನ್ನು ಸಮಪ್ರಮಾಣದಲ್ಲಿ ತೆಗೆದು ಶಿವಲಿಂಗಿಯ ರಸದಲ್ಲಿ ಅರೆದು ಗುಂಜಾ ಪ್ರಮಾಣದ ಮಾತ್ರೆಗಳನ್ನಾಗಿ ಮಾಡಿ ಪ್ರತಿ ದಿನವೂ ಒಂದೊಂದು ಮಾತ್ರೆ ಪ್ರಕಾರ ಕೊಟ್ಟರೆ ಜ್ವರವು ಗುಣವಾಗುವುದು.

**ಮಕ್ಕಳ ಪಿತ್ತ ಜ್ವರಕ್ಕೆ:**

ಅಗ್ರು ಸೋಗೆ ಬೇರು, ಪರ್ಪಟ ಹುಲ್ಲು, ಲಾವಂಚ, ಕಹಿಬೇವಿನ ಸೊಪ್ಪು ನೆಲಬೇವು, ಇವುಗಳ ಕಷಾಯಮಾಡಿ ಕುಡಿಸಿದರೆ ವಾಂತಿ ಕೆಮ್ಮು, ಉಬ್ಬಸ ಇತ್ಯಾದಿಗಳಿಂದ ಕೂಡಿದಜ್ವರವೂ ನಿವಾರಣೆಯಾಗುವುದು.

**ಮಕ್ಕಳ ವಾತ, ಕಫ, ಜ್ವರಕ್ಕೆ:** (ಪ್ಲ್ಲಿ.)

ಹೆಸರುಧಾನ್ಯ, ಬೆಳ್ತಿಗೆ ಅಕ್ಕಿ, ಇವುಗಳ ಪಾದಾವಶೇಷ ಕಷಾಯ ಮಾಡಿ ಪದೇ ಪದೇ ಕುಡಿಸುವುದು.



ಸನ್ನಾಲಿ

# ಚವಿ ರೋಗ

**ಚವಿ ರೋಗಕ್ಕೆ:**

**ಮಾತ್ರೆ:** ಪಂಚ ಬಳ್ಳಿಯೆಲೆ, ಚವಿ ಸೊಪ್ಪು, ಹೆಣ್ಣು ಹೊಂಗಾರೆ ಚಿಗುರು, ಪಾಚಪತ್ರೆ ಸೊಪ್ಪು, ಪಚ್ಚೆಕದಿರು, ಕಾಮಕಸ್ತೂರಿ ಸೊಪ್ಪು ಬಿಲ್ವಪತ್ರೆ ಸೊಪ್ಪು, ಏಲಕ್ಕಿ, ಲವಂಗ. ಪತ್ರೆ. ಜಾಜಿಕಾಯಿ, ಹಿಪ್ಪಲಿ, ಜೇಷ್ಠಮಧು, ಶುಂಠಿ, ಗೋರೋಜನ ಇವುಗಳನ್ನು ಸಮಾಂಶವಾಗಿ ಸೇರಿಸಿ ಹೆಣ್ಣು ಹೊಂಗಾರೆ ಸೊಪ್ಪಿನ ರಸದಲ್ಲಿ ಚೆನ್ನಾಗಿ ಅರೆದು ಹಲಸಿನ ಮರದ ಮಣೆಯಡಿಯಲ್ಲಿ ಹರಡಿ ಆರಿದ ಮೇಲೆ ತೆಗೆದು ಅರ್ಧ ತೊಲೆ ಗೋರೋಜನ ವನ್ನು ಸೇರಿಸಿ ಪುನಃ ಪಂಚಬಳ್ಳಿಯ ಎಲೆಯ ರಸದಲ್ಲಿ ಅರೆದು ಕಡಲೆಯ ಕಾಳಿನ ಗಾತ್ರ ಮಾತ್ರೆ ಮಾಡಿ ಪ್ರತಿದಿನ ಒಂದು ಮಾತ್ರೆಯನ್ನು ಜೇನಿನಲ್ಲಿ ತೇದು ಸೇವಿಸುವುದು. ಹೀಗೆ ದಿನದಲ್ಲಿ ಒಂದು ಹೊತ್ತು ಆರು-ವಾ-ಹನ್ನೆರಡು ದಿನ ಸೇವಿಸಿದರೆ ಗುಣವಾಗುವುದು.

**ವಿ. ಸೂ.** ಈ ಮಾತ್ರೆಯನ್ನು ಮುಟ್ಟು ವಿುಂದ ಮೂರನೆಯ ದಿನ ಒಂದು ಮಾತ್ರೆಯನ್ನು ಚವಿಸೊಪ್ಪಿನ ರಸದಲ್ಲಿ ತೇದು ಕೊಟ್ಟರೆ ಉತ್ತಮ ಗರ್ಭಸಿದ್ಧಿ ಮಾತ್ರವಲ್ಲದೆ ಎಲ್ಲಾ ತರದ ಮುಟ್ಟು ಶೂಲೆಗಳನ್ನೂ ನಿವಾರಿಸುವುದು.

ಪೊನ್ನಳಿಕನ ಕೆತ್ತೆಯ ಕಷಾ ದಲ್ಲಿ ಕಟುಕರೋಹಿಣಿಯನ್ನು ಅರೆದು ಬೆಣ್ಣೆಯಲ್ಲಿ ಜಾಳಿಸಿ ಸರ್ವಾಂಗಕ್ಕೆ ಲೇಪಿಸುವುದು,

ವಿಶಾಲರಿ, ಭದ್ರಮುಷ್ಠಿ ಗಡ್ಡೆ, ಅರಸಿನ, ಮರದರಸಿನ, ಪಾಲಾಷದ ಕೆತ್ತೆ, ಇವುಗಳ ಅಷ್ಟಾವಶೇಷ ಕಷಾಯ ಮಾಡಿ ಸೇವಿಸುವುದು. ಇದು ಆಬಾಲವೃದ್ಧರಿಗೂ ಗರ್ಭಿಣಿಗೂ ಸಹ ಹಿತವಾದುದಾಗಿದೆ.

**ಚವಿ ಸಂಬಂಧದ ಕಾಯಿಲೆಗೆ:**

ಶುಂಠಿಯನ್ನೂ ಕಣಿಮೆಣಸನ್ನೂ, ಒಂದೊಂದು ತೊಲೆ ತೆಗೆದು ದನದ ಮೊಸರಿನಲ್ಲರೆದು ನೊರೆ ಹಾಲಿನಲ್ಲಿ ಕದಡಿ ಸೇವಿಸಿದರೆ ಚವಿ ಸಂಬಂಧದ ಕಾಯಿಲೆಗಳು ಮುಟ್ಟುದೋಷ ಸಹಿತ ಗುಣವಾಗುವುವು.

**ಮಕ್ಕಳ ಪಕ್ಷಿದೋಷಕ್ಕೆ:**

ಉರಿಸಣಿಗೆ (ಆಕೀರೆ = ತುರುಚನ ಗಿಡ) ಬೇರನ್ನು ತೊಟ್ಟಿಲಿನಲ್ಲಿ ಕಟ್ಟುವುದು ಮತ್ತು

ಉರಿಸಣಗೆ ಬೇರನ್ನೇ ಹಾಲಿನಲ್ಲಿ ತೇದು ಪ್ರತಿ ದಿನ ಬೆಳಗ್ಗೆ ಕುಡಿಸುವುದು.

ಬುಗುಡಿ ಬೇರನ್ನು ತೊಟ್ಟಿಲಿಗೆ ಕಟ್ಟುವುದು.

ಬುಗುಡಿಗಡ್ಡೆಯನ್ನೇ ಹಾಲಿನಲ್ಲಿ ತೇದು ಪ್ರತಿದಿನ ಬೆಳಗ್ಗೆ ಕುಡಿಸುವುದು ಹಿತವಾಗುವುದು.

ಈ ಮೇಲಿನ ಪ್ರಯೋಗಗಳನ್ನು ಮಾಡುತ್ತಿರುವಾಗಲೇ ಅವೇ ಬೇರುಗಳನ್ನು ತೆಂಗಿನೆಣ್ಣೆಯಲ್ಲರೆದು ಮೈಗೆ ಪೂಸುವುದು. ಹೀಗೆ ನಲುವತ್ತೆಂಟು ದಿನ ಚಿಕಿತ್ಸೆ ಮಾಡಿಕೊಂಡರೆ ಗುಣವಾಗುವುದು



ಧತ್ತೂರಿ

# ತಾಮರೆ ರೋಗ

**ಲಕ್ಷಣ:** ತಲೆಯ ನೆತ್ತಿಯಲ್ಲಿ ತಗ್ಗು ಬೀಳುವುದು. ಬದನೆಯ ಬೀಜದಂತೆ ಕಾಳು ಕಾಳಾಗಿ ನೀರಿನೊಂದಿಗೆ ಭೇದಿಯಾಗುವುದು. ಬಿಲ್ವ ಪತ್ರೆಯ ಗುಳದಂತೆ ಅಂಟಾಗಿ ಮಲಶೋಧನೆಯಾಗುವುದು.

**ತಾಮರೆ ರೋಗದಿಂದ ಹೊರಕ್ಕಡೆ ಹೋಗುವುದಕ್ಕೆ** (ಮಕ್ಕಳಿಗೆ)**:**

ಗೋವಾಳ್ಮುಂಡದ ಕೆತ್ತೆ, ಪಾರಿಜಾತದ ಕೆತ್ತೆ, ಪೊನ್ನೆ ಕೆತ್ತೆ ಇವು ಮೂರೂ ಸೇರಿ ಒಂದು ತೊಲೆಯಾಗುವಷ್ಟು ತೆಗೆದು ಮದ್ದಿನ ಗಂಜಿ ಮಾಡಿ ಉಣ್ಣಿಸುವುದು. ಮೂತ್ರದೋಷವು ಜಾಸ್ತಿಯಿದ್ದರೆ ಪೊನ್ನೆ ಕೆತ್ತೆಯ ಬದಲಿಗೆ ಬಿಳಿ ಮಂದಾರದ ಕೆತ್ತೆಯನ್ನು ಸೇರಿಸುವುದು.

ಪಿದಮಲೆ ಗಿಡ ಸಮೂಲ ಹಾಲಿನಲ್ಲಿ ಬೇಯಿಸಿ ಅರೆದು ದನದ ಹಳೆತುಪ್ಪ ದಲ್ಲಿ ಕಲಸಿ ನೆತ್ತಿಗೆ ಹಾಕಿ ಸರಿಯಾಗಿ ಎರಡು ಘಂಟೆಯ ನಂತರ ಮೀಯು ವುದು. (ಮೂರು ದಿನ)

**ತಾಮರೆ ಮೀರಿದರೆ:**

(**ಲಕ್ಷಣ:** ಬಾಯಿಯೊಳಗಣ ಮತ್ತೆಯಲ್ಲಿ (ಅಣ್ಣಾಕು) ಯಾ ಮಧ್ಯ ಅಥವಾ ಎಡ ಬಲ ಭಾಗಗಳಲ್ಲಿ ಅಥವಾ ಕೌಳುಗಳಲ್ಲಿ ನೋಡಿದರೆ ಅರ್ಧ ಗುಂಜಾಕೃತಿಯಂತೆ ಉಬ್ಬಿದ ಕೆಂಪಾದ ಕಲೆ ಕಾಣಸಿಗುವುದು.)

**ಇದಕ್ಕೆ ಚಿಕಿತ್ಸಾವಿಧಾನ:**

ಗುರುತು ಎಡಭಾಗದ ಮತ್ತಿನಲ್ಲಿದ್ದರೆ ಈಶ್ವರ ಬಳ್ಳಿಯ ಏಳು ಎಲೆ ಗಳನ್ನು ಒಂದು ಬೆಳ್ಳುಳ್ಳಿಯ ಬೇಳೆಯೊಂದಿಗೆ, ಬಲಭಾಗದ ಮತ್ತಿನಲ್ಲಿದ್ದರೆ ಈಶ್ವರಬಳ್ಳಿಯ ಒಂಭತ್ತು ಎಲೆಗಳನ್ನು ಎರಡು ಬೆಳ್ಳುಳ್ಳಿ ಬೇಳೆಗಳೊಂದಿಗೆ ಮಧ್ಯದಲ್ಲಿದ್ದರೆಹನ್ನೊಂದು ಎಲೆಗಳನ್ನು ಮೂರು ಬೆಳ್ಳುಳ್ಳಿ ಬೇಳೆಗಳೊಂದಿಗೆ. ಕೌಳಿನಲ್ಲಿದ್ದರೆ ಹದಿಮೂರು ಎಲೆಗಳನ್ನು ನಾಲ್ಕು ಬೆಳ್ಳುಳ್ಳಿ ಬೇಳೆಗಳೊಂದಿಗೆ, ಸುಣ್ಣಗೆ ಅರೆದು ಬೆಳಗ್ಗೆ ನೆತ್ತಿಗೆ ಹಾಕುವುದು. ಅಹೋರಾತ್ರಿ ಇಪ್ಪತ್ತು ನಾಲ್ಕು ಗಂಟೆಗಳ ಕಾಲ ಈ ಮದ್ದನ್ನು ನೆತ್ತಿಯಲ್ಲೇ ಇರಿಸಿ ಮದ್ದು ಒಣಗ ದಂತೆ ಮೊಲೆಹಾಲನ್ನು ಪದೇ ಪದೇ ಧಾರೋಷ್ಣವಾಗಿ ಹಾಕುತ್ತಿರಬೇಕು. ಅನಂತರ ಮದ್ದನ್ನು ಒರೆಸಿ ತೆಗೆದು ಮೂರು ದಿನ ತೆಂಗಿನೆಣ್ಣೆ ಹಚ್ಚಿ ಅಭ್ಯಂಗ ಸ್ನಾನಮಾಡುವುದು. ಇದರಿಂದ ಈ ಕಾಯಿಲೆ ಗುಣವಾಗುವುದು.

**ಮಕ್ಕಳಿಗೆ ತಾಮರೆ ವಿಕಾರಿದರೆ:**

ಪಿದಮಲೆ ಗಿಡದ ರಸಕ್ಕೆ ಎಳ್ಳೆಣ್ಣೆ ಕೂಡಿಸಿ ಜಾಳಿಸಿ ಸರ್ವಾಂಗಕ್ಕೆ ಹಚ್ಚಿ ಕೂಡಲೇ ವಿಾಯಿಸುವುದು. (ಇದು ಭೇದಿ ಹರಪಾದ ಯೋಗವು.)

**ತಾಮರೆ ರೋಗಕೆ**

ಸಮುದ್ರ ಫಲವನ್ನು ನಿಂಬೆಯ ರಸದಲ್ಲಿ ಅರೆದು ಮೂರು ದಿನ ತಲೆಗೆ ಹಾಕುವುದು.

ಬೇಲಿ ಔಡಲದ ಚಿಗುರು, ಪಾರೆಮುಳ್ಳು, ಎಳ್ಳು, ಕಿಸ್ಕಾರ ಹೂ, ಎಂಜರಿಸ ಚಿಗುರು, ಇವುಗಳಲ್ಲಿ ಯಾವುದಾದರೂ ಒಂದನ್ನು ಹಾಲಿನಲ್ಲಿ ಬೇಯಿಸಿ ಹಾಲನ್ನು ಕುಡಿಸಿ ಮದ್ದನ್ನರೆದು ತಲೆಗೆ ಹಾಕವುದು. ಹೀಗೇ ಮೂರು ದಿನ ಹಾಕಿದರೆ ಗುಣವಾಗುವುದು.

ಪೊನ್ನೆ ಕಾಯಿಯ ಒಳಗಿನ ಬೊಂಡನ್ನು ಬಿಸಿನೀರಿನಲ್ಲರೆದು ಮೈ ಸರ್ವಾಂಗಕ್ಕೂ ಕೆಲವು ದಿನ ಲೇಪ ಹಾಕಿದರೆ ಗುಣವಾಗುವುದು.

ಕರಿಮೆಣಸಿನ ಚೂರ್ಣವನ್ನು ಪ್ರತಿದಿನವೂ ಒಂದು ಚಿಟಿಕೆಯ ಪ್ರಕಾರ ದನದ ಬೆಣ್ಣೆಯಲ್ಲಿ ಜಾಳಿಸಿ ತಿನ್ನಿಸುತ್ತಿದ್ದರೆ ತಾಮರೆ ರೋಗದಿಂದುಂಟಾದ ಮಕ್ಕಳ ಶೋಷ ಹಾಗೂ ರಕ್ತ ಕ್ಷಯವು ಕಡಿಮೆಯಾಗುವುದು

ಕಿಸ್ಕಾರ ಹೂ, ಕಾಡುಮಲ್ಲಿಗೆಸೊಪ್ಪು. ಕಿರುಹತ್ತಿಸೊಪ್ಪು, ಒಳ್ಳೆ ಕೊಡಿ. ಎಂಜಿರುಕೊಡಿ. (ಕೊಡಿ = ಚಿಗುರು) ಪರಂಟುಬಳ್ಳಿ ಚಿಗುರು, ಮೂರು ಕಬರಿನ ಗಿಡದ ಚಿಗುರು ಇವುಗಳನ್ನು ಸಮಾಂಶ ಸೇರಿಸಿ ಹಾಲಿನಲ್ಲಿ ಬೇಯಿಸಿ ಹಾಲನ್ನು ಕುಡಿದು ಮದ್ದನ್ನರೆದು ತಲೆಗೆ ಹಾಕುವುದು. ಹೀಗೇ ಮೂರು ದಿನ ಮಾಡಿಕೊಂಡರೆ ಗುಣವಾಗುವುದು.

**ಬರಂಟು ತಾಮರೆ:**

(**ಲಕ್ಷಣ:** ತಲೆಯ ನೆತ್ತಿಯು ತಗ್ಗಾಗಿರುವುದು. ಬಾಯಾರಿಕೆಯು ಹೆಚ್ಚಾಗಿರುವುದು. ತುಟಿ ಮತ್ತು ಮೈ ಒಣಗಿರುವುದು. ಶರೀರದ ರಕ್ತ ಆರಿರುವುದು ಇತ್ಯಾದಿ).

**ಚಿಕಿತ್ಸೆ:** ಶಾಂತಿ ಕೆತ್ತೆ, ಅಡ್ಕಬಾಳೆಕೆತ್ತೆ ಇವುಗಳನ್ನು ಕಷಾಯ ಮಾಡಿ ಹಾಲು ಹಾಕಿ ಪದೇ ಪದೇ ಕುಡಿಸುತ್ತಿರುವುದು.

ಶ್ರೀ ಗಂಧವನ್ನೂ, ರಕ್ತ ಚಂದನವನ್ನೂ ತೇದು ಅವುಗಳ ಸಮ ಪ್ರಮಾಣ ಗೋಡೆಯಲ್ಲಿ ಮೆತ್ತಿ ನೀರಾರಿಸಿದ ಬೆಣ್ಣೆಯನ್ನು ಸೇರಿಸಿ ಜಾಳಿಸಿ ಕಲೆಗೆ ಹಾಕುವುದು. ಹೀಗೆ ಮೂರು ದಿನ ಮಾಡಿದರೆ ಗುಣವಾಗುವುದು.

ಗೋಪಾಳ್ಮಂಡ (ಬೇಲಿ ಔಡಲ)ದ ಹಾಲನಿಂದ ತಲೆಗೆ ತಾಮರೆ ತೊಡೆಯುವುದು ಮತ್ತು ಬೆಳ್ಳಡಂಬು ಬಳ್ಳಿಯ ಎಲೆಯನ್ನು ಮದ್ದಿನ ಗಂಜಿ ಮಾಡಿ ಉಣಿಸಿ ಅದರಲ್ಲಿರುವ ಬೆಂದ ಎಲೆಗಳನ್ನು ತೆಳಿಯಲ್ಲರೆದು ತಲೆಗೆ ಹಾಕುವುದು.

**ಸ್ನಾನಕ್ಕೆ:** ಬೈಲಮುಳ್ಳು ಗಿಡ, ಒಳ್ಳಿ ಮಂದಾರದೆಲೆ. ಇವುಗಳನ್ನು ಹಾಕಿ ತಯಾರಿಸಿದ ಕಷಾಯದಿಂದ ಸ್ನಾನ ಮಾಡುವುದು. ಇದರಿಂದ ಶೋಫ, ಕಾರ್ಶ್ಯ ಇತ್ಯಾದಿ ಗುಣವಾಗುವುವು.

**ಬರಂಟು ತಾಮರೆಗೆ ಘೃತ:**

ದುಂಡುಮಲ್ಲಿಗೆ ಸೊಪ್ಪು, ಗರಿಕೆ ಹುಲ್ಲು, ಕೂರಾಂಬಿಲ ಸೊಪ್ಪು ಇವುಗಳ ಸ್ವರಸ ನಾಲ್ಕು ಭಾಗಕ್ಕೆ ಒಂದು ಭಾಗ ದನದ ಣ್ಣೆಯನ್ನು ಹಾಕಿ ತುಪ್ಪದ ಪಾಕದಲ್ಲಿ ಹದವಾಗಿ ಕಾಯಿಸಿ ಇಳಿಸಿ ಸೋಸಿ ತಲೆಗೂ ಮೈಗೂ ಸಂದು ಸಂದುಗಳಿಗೂ ಹಚ್ಚುವುದು.

**ಬರಂಟು ತಾಮರೆಗೆ ತೈಲ:**

ಮದ್ರಂಗಿ ಗಿಡದ ಎಲೆ, ಕಿರುಹತ್ತಿ ಗಿಡದ ಎಲೆ, ಬೆಳ್ಳಡಂಬಿನ ಎಲೆ, ಪಂಚಬಳ್ಳಿ (ವೀಳ್ಯ)ಯಲೆ ಕಾಟುಮಲ್ಲಿಗೆ ಗಿಡದ ಎಲೆ, ಅರಿಮರದ ಎಲೆ, ಕಂಞಿ ಕೋಳಿ ಎಲೆ, (ಗಂಜಿಗೋಳಿ) ಬಿಳಿ ದಾಸವಾಳದ ಎಲೆ. ನೆಲನೆಲ್ಲಿ ಸಮೂಲ, ಸಮೂಲ ಪೊನ್ನಾಂಕಣ್ಣಿ (ಹೊನಗೊನ್ನೆ.) ಅಡ್ಕಬಾಳೆ ಕೆತ್ತೆ, ಇವುಗಳನ್ನು ಸಮಪ್ರಮಾಣದಲ್ಲಿ ತೆಗೆದು ದನದ ಮಜ್ಜಿಗೆಯಲ್ಲರೆದು ಎರಡು ಕುತ್ತಿ ರಸ ತೆಗೆದು ನಾಲ್ಕು ಕಡ್ತೆ ಎಳ್ಳೆಣ್ಣೆ, ಎರಡು ಕುಡ್ತೆ ತೆಂಗಿನ ಎಣ್ಣೆ, ಎರಡು ಕುಡ್ತೆ ಎಮ್ಮೆಯ ತುಪ್ಪ, ಒಂದೊಂದು ಕುಡ್ತೆ ಗೋಪಾಲ್ಮಂಡ ಹಾಗೂ ನಾಯಿಕ್ಕುಳಿಯ ಎಣ್ಣೆಯನ್ನೂ ಆ ರಸಕ್ಕೆ ಸೇರಿಸುವುದು. ಅನಂತರ—

ಜಿಂಕೆ ಕೋಡು, ಕರಿ ಮುಡಿವಾಳ, ಬಿಳಿ ಮುಡಿವಾಳ, ಭದ್ರಮುಷ್ಠಿ ಕರಿಜೀರಿಗೆ, ಮರದರಸಿನ, ಕಾಳುಜೀರಿಗೆ ಇವುಗಳನ್ನು ಎರಡೆರಡು ತೊಲೆ ಪ್ರಕಾರವೂ, ಶ್ರೀಗಂಧ, ಕಚ್ಚೂರ ಗಡ್ಡೆ, ಅಣಿಲೆ, ನೆಲ್ಲಿ ಶಾಂತಿ ಕಾಯಿ ಗಳ ಸಿಪ್ಪೆ, ಜ್ಯೇಷ್ಠಮಧು, ಜೀರಿಗೆ, ಲೋಬಾನ, ರಕ್ತಚಂದನ ಇವು

ಗಳನ್ನು ಮೂರು ಮೂರು ತೊಲೆ ಪ್ರಕಾರವೂ, ಕರಿಮೆಣಸನ್ನು ಐದು ತೊಲೆ ಪ್ರಕಾರವೂ, ಸೇರಿಸಿ ದನದ ಹಾಲಿನಲ್ಲಿ ಸುಣ್ಣಗೆ ಅರೆದು ಅದಕ್ಕೆ ಕಲ್ಕ ಸೇರಿಸಿ ಕಾಯಿಸಿ ಬಾಲಪಾಕವಾಗುವಾಗ ಇಳಿಸಿ ಸೋಸುವಾಗ ಪಾತ್ರೆ ಪಾಕಕ್ಕೆ ಅಂಜನ ಕಲ್ಲು, ಪಚ್ಚೆ ಕರ್ಪೂರ, ಕುಂಕುಮ ಕೇಸರಿ ಇವುಗಳನ್ನು ಕಾಲು ಕಾಲು ತೊಲೆಯಂತೆ ತ್ರಗೆದು ಚೂರ್ಣಮಾಡಿ ಹಾಕಿ ಎಣ್ಣೆ ಅರಿಸಿ ಪ್ರತಿ ದಿನವೂ ಸರ್ವಾಂಗಕ್ಕೆ ಹಚ್ಚಿ ಮಿರಯುವುದು. ಹೀಗೆ ಇಪ್ಪತ್ತನಾಲ್ಕು ದಿನ ಮಾಡಿದರೆ ಗುಣವಾದೀತು. (ಇದರಿಂದ ಬರಂಟು ತಾಮರೆ ಸಂಪೂರ್ಣ ಗುಣವಾಗುವುದು.

**ಮಕ್ಕಳ ಬರಂಟು ತಾಮರೆಗೆ:**

ಮುಚ್ಚಿರು ಮರದ ಕೆತ್ತೆಯನ್ನು ಮದ್ದಿನ ಗಂಜಿಮಾಡಿ ಆ ಕೆತ್ತೆಯನ್ನು ಅದೇ ತೆಳಿಯಲ್ಲರೆದು ತಲೆಗೆ ಹಾಕುವುದು. ಹೀಗೆ ಮೂರು ದಿನ ಮಾಡಿದರೆ ಗುಣವಾಗುವುದು.



ಪೋಳೆಕ್ಯಾ

# ಪ್ರಮೇಹ

## ಪ್ರಮೇಹಕ್ಕೆ:

ಒಂದು ತೊಲೆ ಅಂತರಗಂಗೆಯನ್ನು ಹಾಲಿನಲ್ಲಿ ಅರೆದಾಗಲೀ, ಚೂರ್ಣ ಮಾಡಿ ಹಾಲಿನಲ್ಲಿ ಕದಡಿಯಾಗಲೀ ಸೇವಿಸುವುದು.

ಬೊಗರಿ ಕೆತ್ತೆ ಮತ್ತು ಶ್ರೀಗಂಧ ಸಮಾನ ತೂಕ ಸೇರಿಸಿ ವಸ್ತ್ರಗಾಳಿತ ಚೂರ್ಣಮಾಡಿ ಚೂರ್ಣದಷ್ಟೆ ಸಕ್ಕರೆ ಬೆರಸಿ ಹೂಜಿ ನೀರಿನಲ್ಲಿ ಕದಡಿ ಸೇವಿಸುವುದು. ಇದರಿಂದ ಎಲ್ಲಾ ತರದ ಮೇಹಸ್ರಾವವೂ ಗುಣವಾಗುವುದು.

ಏಕನಾಯಕನ ಬೇರನ್ನು ಜಜ್ಜಿ ಕಷಾಯಮಾಡಿ ಚೆನ್ನಾಗಿ ತಣಿಸಿ ಜೇನು ಮೇಲ್ಪುಡಿ ಸೇರಿಸಿ ಸೇವಿಸುವುದು. ಎಲ್ಲಾ ವಿಧದ ಮೇಹಕ್ಕೂ ಹಿತ

ಮೊಡಂದೆ ಕೆತ್ತೆ, ಲಾಮಂಚದ ಬೇರು, ಧಾತಕೀ ಕುಸುಮ, ಮುಡಿವಾಳದ ಬೇರು ಅಥವಾ ಇರುವೇಲಿ ದಂಡು, ಅಗಿಲು ಗಂಧ ಇವುಗಳನ್ನು ಸಮ ಭಾಗಗಳಾಗಿ ಸೇರಿಸಿ ಅಷ್ಟಾವಶೇಷ ಕಷಾಯಮಾಡಿ ಸೇವಿಸುವುದು. ಇದರಿಂದ ಮೂತ್ರಾತಿಸಾರ, ಪ್ರಮೇಹ ಸಹ ಗುಣವಾಗುವುದು.

ಗಟ್ಟದ ಗೇರಿನ ತಿರುಳು ಒಂದು ತೊಲೆಯನ್ನು ರಾತ್ರಿ ಹಾಲಿನಲ್ಲಿ ಹಾಕಿ ಕಾಯಿಸಿ ಭದ್ರವಾಗಿ ಮುಚ್ಚಿ ಇರಿಸಿ ಬೆಳಗ್ಗೆ ಒಂದು ಚಮಚ ಸಕ್ಕರೆ ಹಾಕಿ ಕದಡಿ ಸೇವಿಸುವುದು. ಹೀಗೆ ಮೂರು ದಿನ ಸೇವಿಸಿದರೆ ಗುಣವಾಗುವುದು. ಬಿಳಿ ಹರಿವೆ ಪಲ್ಯ, ಸಪ್ಪೆ ಆಹಾರ ಸೇವಿಸುತ್ತಿದ್ದು ಕಡು ಪಥ್ಯ ಮಾಡಿದರೆ ಪೂರ್ತಿ ಗುಣವಾಗುವುದು.

## ಪ್ರಮೇಹ ಮೂತ್ರ ವ್ಯಾಧಿಗಳಿಗೆ:

ಏಲಕ್ಕಿ, ಶುಂಠಿ, ಜೀರಿಗೆ ಇವುಗಳನ್ನು ಸಮಾಂಶ ಸೇರಿಸಿ ಚೂರ್ಣ ಮಾಡಿ ಒಂದು ತೊಲೆ ಚೂರ್ಣವನ್ನು ಶುದ್ಧವಾದ ಎಳ್ಳೆಣ್ಣೆಯಲ್ಲಿ ಕಲಸಿ ಒಂದು ಹೊತ್ತು ಸೇವಿಸುವುದು. ಊಟಕ್ಕೆ ಎಳ್ಳೆಣ್ಣೆಯನ್ನೇ ಉಪಯೋಗಿಸುತ್ತಾ ಸಪ್ಪೆ ಆಹಾರ ಉಣ್ಣುವುದು. ಹೀಗೆ ಹನ್ನೆರಡು ದಿನ ಸೇವಿಸಿದರೆ ಎಲ್ಲಾ ತರದ ಮೂತ್ರ ರೋಗಗಳು, ನಾನಾ ತರದ ಪ್ರಮೇಹಗಳು ಗುಣವಾಗುವುವು.

### ಮೋಹದಿಂದಲಾಗಿ ಹೆಚ್ಚಾಗಿ ಬಾಯಾರಿಕೆಯಾದರೆ:

ಎಳೆ ಸೀಯಾಳವನ್ನು ಜಜ್ಜಿ ತೆಗೆದ ರಸವನ್ನು ಸೇವಿಸಿದರೆ ಮೋಹದಾಹವು ಗುಣವಾಗುವುದು.

ಕದಳೀ ಬಾಳೆಯ ಗಡ್ಡೆಯನ್ನು ತೂತು ಮಾಡಿ ಅದರೊಳಗೆ ಮೆತ್ತೆಯನ್ನು (ಮೆಂತೆ ಕಾಳನ್ನು) ತುಂಬಿಸಿ ಗಟ್ಟಿಯಾಗಿ ಮುಚ್ಚಿ ಭತ್ತದೊಡನೆ ಹಾಕಿ ಬೇಯಿಸಿ ನೀರಿನಲ್ಲರೆದು ಕರಿಮೆಣಸಿನ ಚೂರ್ಣ ಹಾಕಿ ದನದ ಹಾಲಲ್ಲಿ ಕದಡಿ ಸೇವಿಸುವುದು. ಮತ್ತು

ಜಡೆ ಚೂರಿಮುಳ್ಳಿನ ಸೊಪ್ಪನ್ನು ಕಲಗಚ್ಚಿನಲ್ಲರೆದು ತಲೆಗೆ ಹಾಕುವುದು. ಇದರಿಂದ ಬೇಗನೇ ಪೂರ್ಣ ಗುಣವಾಗುವುದು.

### ತಂತು ಮೋಹಕ್ಕೆ:

ಮದ್ರಂಗಿ ಸೊಪ್ಪನ್ನು ಸ್ವಲ್ಪ ನೀರು ಸೇರಿಸಿ ಅರೆದು ರಸ ತೆಗೆದು ಅರ್ಧ ಕುಡ್ತೆ ರಸಕ್ಕೆ ಅರ್ಧ ತೊಲೆ ಕಲ್ಲುಸಕ್ಕರೆ ಹಾಕಿ ಬೆಳಗ್ಗೆ ಸೇವಿಸುವುದು ಹೀಗೆ ಒಂದು ವಾರ ಸೇವಿಸಿದರೆ ಗುಣವಾದೀತು.

### ಗರ್ಭ ಮೋಹಕ್ಕೆ:

ಖದಿರ ಸಾರ, ಲಾವಂಚ ಇವುಗಳ ಅಷ್ಟಾವಶೇಷ ಕಷಾಯ ಮಾಡಿ ಸೇವಿಸುವುದು. ಹೀಗೆ ೪೮ ದಿನ ಸೇವಿಸಿದರೆ ಗರ್ಭ ಮೋಹ, ಮೋಹ ವ್ರಣ ಸಹ ಗುಣವಾಗುವುದು.

### ಮೋಹಕ್ಕೆ:

ಶತಾವರಿ ಗಡ್ಡೆಯ ಅಷ್ಟಾವಶೇಷ ಕಷಾಯ ಮಾಡಿ ದಿನದಲ್ಲಿ ಮೂರು ಹೊತ್ತು (ಒಂದು ದಿನ ಮಾತ್ರ) ಸೇವಿಸುವುದು. ಆ ಮೇಲೆ–

ಒಂದು ತೊಲೆ ಕೂರಾಂಬಿಲ ಚಿಗುರು, ಒಂದು ಚಿಟಿಕೆ ಜೀರಿಗೆ ಒಟ್ಟು ಸೇರಿಸಿ ಸಣ್ಣಗೆ ಅರೆದು ಅರ್ಧ ಕುಡ್ತೆ ದನದ ನೊರೆ ಹಾಲಿನಲ್ಲಿ ಕದಡಿ ದಿನದಲ್ಲಿ ಎರಡು ಹೊತ್ತು ಸೇವಿಸುವುದು. ಇದನ್ನು ಹೀಗೆ ಮೂರು ದಿನ ಸೇವಿಸುವುದು. ಅನಂತರ–

ಅಡ್ಕಬಾಳೆ ಕೆತ್ತೆ ಮದ್ದಿನ ಗಂಜಿಮಾಡಿ ಬೆಳಗ್ಗೆ ದಿನದಲ್ಲಿ ಒಂದು ಹೊತ್ತು ಸೇವನೆ. ಹೀಗೆ ಮೂರು ದಿನ ಸೇವಿಸುವುದು.

ಪಸೆ ವಸ್ತುಗಳನ್ನು ಯಾವುದನ್ನೂ ತಿನ್ನದೆ ಸಾದಾ ಪಥ್ಯದಲ್ಲಿದ್ದು ಕ್ರಮದಂತೆ ಔಷಧ ಸೇವಿಸಿದರೆ ಪೂರ್ಣ ಗುಣವಾಗುವುದು.

**ಮೇಹ ಸ್ರಾವಕ್ಕೆ:**

ಒಂದು ಕುಡ್ತೆ ದನದ ಹಾಲನ್ನು ಚೆನ್ನಾಗಿ ಕಾಯಿಸಿ ಅದಕ್ಕೆ ಆರು ಬಿಂದು ಶುದ್ಧವಾದ ಗಂಧದೆಣ್ಣೆ ಹಾಕಿ ರಾತ್ರಿಯ ಊಟದ ನಂತರ ಸೇವಿಸುವುದು. ನಲುವತ್ತೆಂಟು ದಿನ ಬಿಡದೆ ಸೇವಿಸಿದರೆ ಗುಣವಾಗುವುದು.

ಅಮೃತ ಬಳ್ಳಿಯ ರಸಕ್ಕೆ ಜೇನು ಹಾಕಿ ಸೇವಿಸುವುದೂ ಉತ್ತಮ.

ಅಶ್ವತ್ಥದ ಕತ್ತೆಯ ಕಷಾಯವನ್ನು ಚೆನ್ನಾಗಿ ತಣಿಸಿ ಜೇನು ಹಾಕಿ ಸೇವಿಸುವುದು ಹಿತಕರವಾಗುತ್ತದೆ.

ನೆರುಗಲ ಬೇರಿನ ಕಷಾಯವನ್ನು ಸೇವಿಸುವುದು.

ಈ ಮೇಲಿನ ಮೂರು ಮದ್ದುಗಳಲ್ಲಿ ಯಾವುದನ್ನಾದರೂ ಆರು ವಾ ಹನ್ನೆರಡು ದಿನ ಸೇವಿಸಿದರೆ ಗುಣವಾಗುವುದು.

ಒಂದು ತೊಲೆ ನೆಲ ನೆಲ್ಲಿಯನ್ನು ಒಂದು ಚಿಟಿಕೆ ಜೀರಿಗೆ ಸೇರಿಸಿ ದನದ ನೊರೆ ಹಾಲಿನಲ್ಲಿ ಅರೆದು ಕದಡಿ ಬೆಳಗ್ಗೆ ಸೇವಿಸುವುದು. ಒಂದು ವಾರ ಸೇವಿಸಿದರೆ ಗುಣವಾಗುವುದು.

ಒಂದು ತೊಲೆ ಜಾಜಿ ಮಲ್ಲಿಗೆಯ ಎಲೆಯನ್ನು ಒಂದು ಚಿಟಿಕೆ ಜೀರಿಗೆಯೊಂದಿಗೆ ಅರೆದು ದನದ ನೊರೆ ಹಾಲಿನಲ್ಲಿ ಕದಡಿ ಬೆಳಗ್ಗೆ ಸೇವಿಸುವುದು. ಹೀಗೇ ಏಳು ದಿನ ಸೇವಿಸಿದರೆ ಗುಣವಾಗುವುದು.

**ಮಜ್ಜಾ ಮೇಹಕ್ಕೆ:**

ಕಂಕುಷ್ಠ, ಕೋಷ್ಠಾಣು, ಅಗರುಶುಂಠಿ, ಕಟುಕರೋಹಿಣಿ, ಇಂಗು ಇವುಗಳನ್ನು ಸಮಾಂಶ ತೂಕ ಸೇರಿಸಿ ವಸ್ತ್ರಗಾಳಿತ ಚೂರ್ಣವಾಡಿ ದಿನದಲ್ಲಿ ಎರಡು ಹೊತ್ತು ಕಾಲು ತೊಲೆಯಿಂದ ಅರ್ಧ ತೊಲೆಯ ವರೆಗೆ ಜೇನಿನಲ್ಲಿ ಕಲಸಿ ನೆಕ್ಕುವುದು.

ಚಿತ್ರಮೂಲದ ಬೇರು ಮತ್ತು ಅಮೃತ ಬಳ್ಳಿ ಇವುಗಳ ಅಷ್ಟಾವಶೇಷ ಕಷಾಯ ಮಾಡಿ ಆರು ಯಾ ಹನ್ನೆರಡು ದಿನ ಸೇವಿಸಿದರೆ ಗುಣವಾಗುವುದು.

**ವಸಾ ಮೇಹಕ್ಕೆ:**

ನೆರುಗಲದ ಬೇರು ಮತ್ತು ಜೇಂಗದ ಕೆತ್ತೆ ಇವುಗಳ ಅಷ್ಟಮಾಂಶ ಕಷಾಯ ಮಾಡಿ ಚೆನ್ನಾಗಿ ತಣಿದ ಮೇಲೆ ೧ತೊಲೆ ಜೇನು ಹಾಕಿ ಸೇವಿಸುವುದು.

**ಹಿಟ್ಟಿನಂತೆ ಸ್ರಾವವಾಗುವುದಿದ್ದರೆ:**

ಏಶಾಲರಿ, ಅರಸಿನ, ಕಾಚಿ ತಿರುಳು, ಮಂಜಟ್ಟಿ ಬೇರು, ಇವುಗಳ ಅಷ್ಟಾವಶೇಷ ಕಷಾಯ ಮಾಡಿ ತಣಿಸಿ ಜೇನು ಮೇಲ್ಪುಡಿ ಹಾಕಿ ಸೇವಿಸುವುದು.

**ಪಿತ್ತ ಪ್ರಮೇಹಕ್ಕೆ:**

ಹಸಿ ಶುಂಠಿಯ ರಸಕ್ಕೆ ಸಮಾಂಶ ಜೇನು ಸೇರಿಸಿ ಸೇವಿಸಿದರೆ ಗುಣವಾಗುವುದು.

**ಶರ್ಕರಾ ಮೇಹಕ್ಕೆ:**

ಪಾಲಾಷದ ಕೆತ್ತೆಯನ್ನು ಸಮಭಾಗ ಬಾಳೆ ದಂಡಿನೊಂದಿಗೆ ಅಂತರ್ಧೂಮ ಭಸ್ಮಮಾಡಿ ಒಂದು ಚಿಟಿಕೆ ಭಸ್ಮವನ್ನು ಬೆಲ್ಲದಲ್ಲಿ ಕಲಸಿ ಅಥವಾ ನೆಗ್ಗಿಲ ಕಷಾಯದಲ್ಲಿ ಹಾಕಿ ಸೇವಿಸುವುದು.

ಒಂದು ಔನ್ಸು ಶತಾವರಿ ಗಡ್ಡೆಯ ಸ್ವರಸಕ್ಕೆ ಅಷ್ಟೇ ನೊರೆ ಹಾಲು ಸೇರಿಸಿ ಬೆಳಗ್ಗೆ ಸೇವಿಸುವುದು. ಒಂದು ವಾರ ಸೇವಿಸಿದರೆ ಗುಣವಾಗುವುದು.

ಒಂದು ಔನ್ಸು ಅತ್ತಿಮರದ ಹಾಲಿಗೆ (ರಸಕ್ಕೆ) ಸಕ್ಕರೆ ಹಾಕಿ ಕದಡಿ ಸೇವಿಸುವುದು. ಮತ್ತು ಅತ್ತಿಯ ಬೇರನ್ನು ತೇದು ಪುರುಷಾಂಗ (ಲಿಂಗ)ಕ್ಕೆ ಲೇಪಿಸುವುದು.

**ಶುಕ್ಲ ಮೇಹಕ್ಕೆ:**

ಮಾವಿನ ಮರದ ಕೆತ್ತೆಯನ್ನು ಸಮಾಂಶ ಅಣಿಲೆ ಕಾಯಿಯ ಸಿಪ್ಪೆ ಸೇರಿಸಿ ವಸ್ತ್ರಗಾಳಿತ ಚೂರ್ಣಮಾಡಿ ಪ್ರತಿ ದಿನ ಬೆಳಗ್ಗೆ ಅರ್ಧರ್ಧ ತೊಲೆಯಾ ಒಂದೊಂದು ತೊಲೆಯಷ್ಟನ್ನು ಹೂಜಿ ನೀರಿನಲ್ಲಿ ಕದಡಿ ಸೇವನೆ. ಮೂರು ಯಾ ಆರು ದಿನ ಸೇವಿಸುವುದರಿಂದ ಶುಕ್ಲ ಮೇಹ ಗುಣವಾಗುವುದು.

ಚಿತ್ರಮೂಲದ ಬೇರನ್ನು ಶುದ್ಧಮಾಡಿ ಹಾಲು ಕಷಾಯ ತಯಾರಿಸಿ ಬೆಳಗ್ಗೆ ಸೇವನೆ. ಒಂದು ವಾರ ಸೇವನೆಯಿಂದ ಗುಣವಾಗುವುದು.

ನೀರು ಮರುವದ ಕೆತ್ತೆ, ರಕ್ತಚಂದನ, ಕೋಳಿಕೊಂಬು, ದೇವದಾರು ಇವುಗಳ ಅಷ್ಟಾವಶೇಷ ಕಷಾಯ ಮಾಡಿ ಚನ್ನಾಗಿ ತಣಿಸಿ ಜೇನು ಹಾಕಿ ಸೇವಿಸುವುದು.

ಬಿಲ್ವಪತ್ರೆ ಕೆತ್ತೆಯ ಹಾಲು ಕಷಾಯ ಮಾಡಿ ಜೀರಿಗೆ ಚೂರ್ಣ ಮೇಲ್ಪುಡಿ ಹಾಕಿ ರಾತ್ರಿ ಊಟದ ನಂತರ ಸೇವಿಸುವುದು. ಸಾದಾ ಪಥ್ಯ ದೊಂದಿಗೆ ಹನ್ನೆರಡು, ಇಪ್ಪತ್ತನಾಲ್ಕು ಇಲ್ಲವೆ ನಲುವತ್ತೆಂಟು ದಿನ ಉಪ ಯೋಗದಿಂದ ಗುಣವಾಗುವುದು.

ಗೋಪೀ ಚಂದನವನ್ನು ನೀರಿನಲ್ಲಿ ಕದಡಿ ಕಿಬ್ಬೊಟ್ಟೆಗೆ ಲೇಪಿಸುವುದು. ಅದರಿಂದ ನಿಲ್ಲಲಿಲ್ಲವಾದರೆ ಸ್ವಲ್ಪ ಮಾತ್ರ ಪಟಿಕ್ಕಾರವನ್ನು ವಾ ಮೈಲ್ ತುತ್ತನ್ನು ಸೇರಿಸಿ ಗೋಪಿಯೊಡನೆ ಅರೆದು ಮೂರು ದಿನ ಮಾತ್ರ ಲೇಪ ಹಾಕುವುದು.

**ಶುಕ್ಲವೃದ್ಧಿಗೆ ಮತ್ತು ಶುದ್ಧಿಗೆ:**

ಓಮವನ್ನು ಹುರಿದು ವಸ್ತ್ರಗಾಳಿತ ಚೂರ್ಣ ಮಾಡಿ ಎರಡಾಣೆ ತೂಕ ಚೂರ್ಣವನ್ನು ರಾತ್ರಿ ಊಟದ ನಂತರ ಬಿಸಿ ಹಾಲಿನಲ್ಲಿ ಕದಡಿ ಸೇವನೆ. ಒಂದು ವಾರ ಸೇವಿಸಲು ಜೀರ್ಣಶಕ್ತಿಯೂ ಹೆಚ್ಚಿ ಶುಕ್ಲ ಶುದ್ಧಿ ಹಾಗೂ ವೃದ್ಧಿಯಾಗುವುದು.

**ಎಲ್ಲಾ ತರದ ಶುಕ್ಲ ಶುದ್ಧಿ ಮತ್ತು ವೃದ್ಧಿಗೆ:**

ಹುಳಿ ಮಾವಿನ ಕೆತ್ತೆ ಎರಡು ತೊಲೆಯನ್ನು ಜಜ್ಜಿ ಆಡಿನ ನೊರೆ ಹಾಲು ಅರ್ಧ ಕುಡ್ತೆಯಲ್ಲಿ ಹಾಕಿ ಕಿವಿಚಿ ಸೋಸಿ ಬೆಳಗ್ಗೆ ಸೇವಿಸುವುದು. ಒಂದು ಯಾ ಎರಡು ವಾರ ಹಾಲು ಅನ್ನ ಕಡುಪಥ್ಯದಿಂದ ಇದ್ದು ಈ ಮದ್ದು ಸೇವಿಸಿದರೆ ಎಲ್ಲಾ ತರದ ಶುಕ್ಲದೋಷ ಉಪದಂಶ ಸಹಿತ ಗುಣ ವಾಗುವುದು.

**ದೀರ್ಘಕಾಲದ ಶುಕ್ಲಸ್ರಾವದಿಂದ ಒಳಗೆ ವ್ರಣವಾಗಿದ್ದರೆ:**

ರಾತ್ರಿ ಮಲಗುವಾಗ ಗೋಪೀ ಚಂದನವನ್ನು ತೇದು ಕಿಬ್ಬೊಟ್ಟೆ— ಗುಹ್ಯಾಂಗದ ತುದಿ ವರೆಗೆ ದಪ್ಪವಾಗಿ ಲೇಪಿಸಿ ಮಲಗುವುದು. ಮತ್ತು ರುದ್ರಾಕ್ಷಿಯನ್ನು ದನದ ನೊರೆ ಹಾಲಲ್ಲಿ ತೇದು ಎರಡಾಣೆ ತೂಕ ವನ್ನು ನೊರೆ ಹಾಲಲ್ಲೇ ಕದಡಿ ನಲುವತ್ತೆಂಟು ದಿನ ಸೇವಿಸಿದರೆ ಗುಣ ವಾಗುವದು.

**ರಕ್ತ ಪ್ರಮೇಹಕ್ಕೆ:**

ಕೆಂಪು ಉತ್ತರಣೆಯ ಬೇರನ್ನು ಸೀಯಾಳದ ನೀರಿನಲ್ಲಿ ಕಿವಿಚಿ ಸೋಸಿ ಬೆಳಗ್ಗೆ ಸೇವಿಸುವುದು. ಮೂರು ದಿನ ಸೇವಿಸುವುದರಿಂದ ಪ್ರಮೇಪ ಗಂದೆ ಗಳು ಕೂಡ ಗುಣವಾಗುವುವು.

ನಾಯಿ ಸೊಣಂಗಿನ ಬೇರು ಒಂದು ತೊಲೆ, ಶತಾವರಿ ಒಂದು ತೊಲೆ ಒಟ್ಟು ಸೇರಿಸಿ ಜಜ್ಜಿ ನಾಲ್ಕು ಕುಡ್ತೆ ನೀರಿನಲ್ಲಿ ಕಷಾಯವಿರಿಸಿ ಬತ್ತಿಸಿ ಎರಡು ಕುಡ್ತೆ ಮಾಡಿ ಆದಾಗ ಒಂದು ಕುಡ್ತೆ ದನದ ಹಾಲು ಹಾಕಿ ಕಾಯಿಸಿ ಬತ್ತಿಸಿ ಒಂದು ಕುಡ್ತೆ ಮಾಡಿ ಇಳಿಸಿ ಸೋಸಿ ಒಂದು ಚಮಚ ಸಕ್ಕರೆ ಹಾಕಿ ಸೇವಿಸುವುದು.

ಹಾಡೆಬಳ್ಳಿಯ ಸೊಪ್ಪನ್ನು ನೀರು ಸೇರಿಸಿ ಕಿವಿಚಿ ಒಂದು ಕುಡ್ತೆ ರಸಕ್ಕೆ ಸಮಾಂಶ ದನದ ಮೊಸರು ಸೇರಿಸಿ ಅವೆರಡೂ ಒಂದಾಗುವಂತೆ ಚೆನ್ನಾಗಿ ಕಲಸಿ ನಿತ್ಯವೂ ಬೆಳಗ್ಗೆ ಸೇವಿಸುವುದು. ಒಂದು ಯಾ ಎರಡು ವಾರ ಕಡುಪಥ್ಯದೊಂದಿಗೆ ಹುಳಿ ಮೆಣಸುಗಳನ್ನು ಬಿಟ್ಟು ಬ್ರಹ್ಮಚರ್ಯ ದಿಂದಿದ್ದು ಔಷಧ ಸೇವಿಸಿದರೆ ಗುಣವಾಗುವುದು.

ಹೊನ್ನೆ ಮರದ ಕೆತ್ತೆ ಎರಡು ತೊಲೆಯನ್ನು ಹಾಕಿ ಮದ್ದಿನ ಗಂಜಿ ಮಾಡಿ ಪ್ರತಿದಿನ ಬೆಳಗ್ಗೆ ಸೇವಿಸುವುದು. ಮೂರು ದಿನ ಸೇವಿಸುವುದರಿಂದ ಗುದ, ಮೇಢ್ರ, ಮೊದಲಾದ ಎಲ್ಲಾ ಕಡೆಗಳಲ್ಲಿ ಬರುವ ರಕ್ತಸ್ರಾವವೂ ಗುಣವಾಗುವುದು.

**ಮೂತ್ರದಲ್ಲಿ ಧಾತು ಹೋಗುವುದಿದ್ದರೆ:**

ಒಳನಾರು ತೆಗೆದ ಕಿಸ್ಕಾರ ಹೂ ಒಂದು ಹಲವನ್ನು ಎರಡು ಕುಡ್ತೆ ಸೀಯಾಳ ನೀರಿನಲ್ಲಿ ಹಾಕಿ ಚೆನ್ನಾಗಿ ಕುದಿಸಿ ಕಿವಿಚಿ ಸೋಸಿ ಕಾಲು ಕುಡ್ತೆ ನೊರೆ ಹಾಲು, ಸಕ್ಕರೆ, ಮತ್ತು ಒಂದು ಚಮಚ ತುಪ್ಪ ಕೂಡಾ ಹಾಕಿ ಬೆಳಗ್ಗೆ ಸೇವಿಸುವುದು. ಇದರಿಂದ ಧಾತುಸ್ರಾವ, ಉರಿ, ದಾಹ, ಬೆವರು, ಕೆಮ್ಮು, ಕಿವಿಯಲ್ಲಿ ಶಬ್ಧ ಕೇಳುವುದು ಇತ್ಯಾದಿಗಳು ಗುಣವಾಗುವುವು.

**ಕಫ ಮೇಹಕ್ಕೆ:**

ಶ್ರೀಗಂಧ, ಅಗಿಲುಗಂಧ, ದೇವದಾರು, ಅಳಲೆಕಾಯಿ, ಕಚ್ಚೂರಗಡ್ಡೆ ಇವುಗಳನ್ನು ಅಷ್ಟಾವಶೇಷ ಕಷಾಯ ಮಾಡಿ ಸೇವಿಸುವುದು.

**ಪಿತ್ತ ಮೇಹಕ್ಕೆ:**

ಕಾಚಿ ತಿರುಳು, ವಿಶಾಲರಿ, ಮರದರಸಿನ, ಭಜೆ, ಇವುಗಳ ಅಷ್ಟಾವಶೇಷ ಕಷಾಯ ಮಾಡಿ ಸೋಸಿ ಚೆನ್ನಾಗಿ ತಣಿಸಿ ಒಂದು ತೊಲೆ ಜೇನು ಹಾಕಿ ದಿನದಲ್ಲಿ ಎರಡು ಹೊತ್ತು ಸೇವಿಸುವುದು. ಒಂದು ಯಾ ಎರಡು ವಾರ ಸೇವಿಸುವುದು ಹಿತ.

ಹಾಡೆಗಡ್ಡೆ, ವಿಶಾಲರಿ, ನೀರು ಮರುವದ ಕೆತ್ತೆ, ಧಾತಕೀ ಕುಸುಮ ಇವುಗಳ ಕಷಾಯ ತಯಾರಿಸಿ ಚೆನ್ನಾಗಿ ತಣಿಸಿ ಜೇನು ಮೇಲ್ಪುಡಿ ಹಾಕಿ ಸೇವಿಸುವುದು.

ಮುಡಿವಾಳದ ಬೇರು, ಅಣಲೆಕಾಯಿಯ ಸಿಪ್ಪೆ, ಅಮೃತ ಬಳ್ಳಿ, ನೇರಳೆ ಮರದ ಕೆತ್ತೆ, ನೆಲ್ಲಿಚಟ್ಟು, ಶುದ್ಧಿ ಮಾಡಿದ ಚಿತ್ರ ಮೂಲದ ಬೇರು, ಬಲೀಂದ್ರ ಪಾಲೆ ಮರದ ಕೆತ್ತೆ, ಇವುಗಳನ್ನು ಸಮಾಂಶ ಸೇರಿಸಿ ಅಷ್ಟಾವಶೇಷ ಕಷಾಯ ಮಾಡಿ ಚೆನ್ನಾಗಿ ತಣಿಸಿ ಜೇನು ಮೇಲ್ಪುಡಿ ಹಾಕಿ ಸೇವಿಸುವುದು. ಹನ್ನೆರಡು ದಿನ ಸೇವಿಸುವುದರಿಂದ ಎಲ್ಲಾ ತರದ ಕಫ ಮೇಹವೂ ಗುಣವಾಗುವುದು.

**ಇಕ್ಷು ಮೇಹಕ್ಕೆ**

ಕಹಿಬೇವಿನ ಕೆತ್ತೆಯ ಹಾಲು ಕಷಾಯ ಮಾಡಿ ತಣಿದ ಮೇಲೆ ಜೇನು ಹಾಕಿ ಸೇವಿಸುವುದು.

ಶತಾವರಿ, ತೆಂಗಿನ ಹಿಂಗಾರ, ಸುಗಂಧಿ ಬೇರು, ನೆಗ್ಗಿಲಮುಳ್ಳು, ಕಡಿರಬೇರು, ನೆಲಪ್ಪನೆಗಡ್ಡೆ. ಇವುಗಳನ್ನು ಸಮಾಂಶ ಸೇರಿಸಿ ಹಾಲು ಕಷಾಯ ತಯಾರಿಸಿ ಬೆಳಗ್ಗೆ ಸೇವಿಸುವುದು. ಆರು ಯಾ ಹನ್ನೆರಡು ದಿನ ಸೇವಿಸುವುದರಿಂದ ಗುಣವಾಗುವುದು.

**ಸಿಹಿ ಮೂತ್ರಕ್ಕೆ:**

ಗೋವಾಲ್ಮುಂಡ (ಬೇಲಿ ಔಡಲ) ಕೆತ್ತೆ ಸ್ವಚ್ಛಪಡಿಸಿ ನಾಲ್ಕು ತೊಲೆ ಜಜ್ಜಿ ಹಾಕಿ, ಎರಡು ಹೊತ್ತಿಗೆ ಉಣ್ಣಲು ಬೇಕಾದಷ್ಟು ಅಕ್ಕಿ, ಆ ಅಕ್ಕಿ ಬೇಯುವಷ್ಟು ನೀರು ಹಾಕಿ ಬೇಯಿಸಿ ಪದ ಗಂಜಿ ಮಾಡಿ ಇಳಿಸಿಟ್ಟು ಕೊಂಡು ಬೆಳಗ್ಗೆ ಮತ್ತು ಮಧ್ಯಾಹ್ನ ಒಂದು ತುಂಡು ಬೆಲ್ಲ ಸೀಪಿಕೊಂಡು ಈ ಗಂಜಿ ಉಣ್ಣುವುದು. (ಬೇರೇನೂ ಸೇರಿಸಬಾರದು.) ರಾತ್ರಿ ಸಪ್ಪೆ ಗಂಜಿಯನ್ನಾಗಲೀ ಗೋಧಿಯ ಆಹಾರವನ್ನಾಗಲೀ ಸೇವಿಸುವುದು. ಕುಡಿಯಲು ಅದೇ ಗಂಜಿಯ ತೆಳಿ ಉಪಯೋಗಿಸಬೇಕು. ಒಂದು ವಾರದಿಂದ ಒಂದು ಮಂಡಲ ವರೆಗೂ ಉಣ್ಣಬಹುದು. ಇದರಿಂದ ಕರುಳುಹುಣ್ಣು, ಸಹ ಗುಣವಾಗುವುದು.

ಎರಡು ತೊಲೆ ಮೆಂತೆ ಕಾಳು ರಾತ್ರಿ ನೀರಲ್ಲಿ ನೆನೆಹಾಕಿ ಇರಿಸಿ ಬೆಳಗ್ಗೆ ತೆಗೆದು ನುಣ್ಣಗೆ ಅರೆದು ತುಪ್ಪದಲ್ಲಿ ಕಲಸಿ ಜೇನು ಹಾಕಿ ಸೇವಿಸುವುದು. ಇಪ್ಪತ್ತು ದಿನ ಸಪ್ಪೆ ಆಹಾರ ಸೇವಿಸುತ್ತಾ ಪಥ್ಯದಿಂದಿದ್ದು ಔಷಧ ಸೇವನೆ ಮಾಡುವುದರಿಂದ ಗುಣವಾಗುವುದು.

ಕಹಿಬೇವಿನ ಕೆತ್ತೆಯ ಅಷ್ಟಮಾಂಶ ಕಷಾಯ ಮಾಡಿ ಚೆನ್ನಾಗಿ ತಣಿಸಿ ಜೇನು ಮೇಲ್ಪುಡಿ ಹಾಕಿ ದಿನದಲ್ಲಿ ಎರಡು ಹೊತ್ತು ಸೇವಿಸುವುದು. ಹನ್ನೆರಡು ಯಾ ಇಪ್ಪತ್ತನಾಲ್ಕು ದಿನಸೇವಿಸುವುದು ಹಿತ.

ಕೆಂಪು ಉತ್ತರಣೆಯ ರಸ ಒಂದು ಔನ್ಸ್ ಒಂದು ತೊಲೆ ಎಳ್ಳೆಣ್ಣೆ ಹಾಕಿ ಪ್ರತಿದಿನ ಬೆಳಗ್ಗೆ ಸೇವಿಸುವುದು, ತೊಂಬತ್ತು ದಿನ ಸೇವನೆಯಿಂದ ರಕ್ತ ಮೂತ್ರ ಸಹ ಗುಣವಾಗುವುದು.

ಏಕನಾಯಕನ ಬೇರು, ಆಡುಸೋಗೆ ಬೇರು, ನೆಲ್ಲಿಚಟ್ಟು, ಸಣ್ಣ ಬದನೆಬೇರು, ಇವುಗಳನ್ನು ಅರ್ಧ ತೊಲೆ ಪ್ರಕಾರ ಸೇರಿಸಿ ಜಜ್ಜಿ ಹಾಕಿ ಮದ್ದಿನ ಗಂಜಿ ಮಾಡಿ ಪ್ರತಿದಿನ ಬೆಳಗ್ಗೆ ಸೇವಿಸುವುದು. ರಾತ್ರಿ ಊಟದ ನಂತರ ಇವೇ ಮದ್ದುಗಳನ್ನು ಸಮಾಂಶ ಸೇರಿಸಿ ತಯಾರಿಸಿದ ಅಷ್ಟಾವಶೇಷ ಕಷಾಯ ಮಾಡಿ ಸೇವಿಸುವುದು. ಪಿಷ್ಟಾಹಾರ ಮಧುರಾಹಾರಗಳನ್ನು ಬಿಟ್ಟು ಪಥ್ಯವಾಗಿರಬೇಕು.

**ಮಧು ಮೇಹಕ್ಕೆ ಘೃತ:**

ಹತ್ತು ತೊಲೆ ತೆಂಗಿನ ಹಿಂಗಾರ, ಹತ್ತು ತೊಲೆ ರಕ್ತಚಂದನ ಇವುಗಳನ್ನು ವಸ್ತ್ರಗಾಳಿತ ಚೂರ್ಣ ಮಾಡಿ ಈ ಚೂರ್ಣವನ್ನು, ಎರಡು ಕುಡ್ತೆ ಮಾಬಲ ಹುಳಿ ರಸವನ್ನೂ ಎರಡು ಕುಡ್ತೆ ದನದ ತುಪ್ಪವನ್ನೂ ಹಾಕಿ ಕಾಯಿಸಿ ಹದಪಾಕದಲ್ಲಿಳಿಸಿ ಸೋಸಿ ದಿನದಲ್ಲಿ ಎರಡು ಹೊತ್ತು ಒಂದೊಂದು ತೊಲೆಯಂತೆ ಹನ್ನೆರಡು ದಿನ ಸೇವಿಸುವುದು.

**ಮಕ್ಕಳ ಸಿಹಿಮೂತ್ರಕ್ಕೆ:**

ಒಂದು ತೊಲೆ ಕೊಜಂಬೆ ಚಿಗುರು ಹಾಕಿ ಮದ್ದಿನ ಗಂಜಿ ಮಾಡಿ ಉಣ್ಣಿಸುವುದು. ಆರು ದಿನ ಉಣ್ಣಿಸುವುದರಿಂದ ಗುಣವಾಗುವುದು.

**ಮೇಹದಿಂದಾದ ಕುರಗಳಿಗೆ:**

ಕಹಿಬೇವಿನ ಎಲೆ, ಹಸಿ ಅರಸಿನ, ಇಂದುಪ್ಪು. ಇವುಗಳನ್ನು ನುಣ್ಣಗೆ ಅರೆದು ಲೇಪಿಸುವುದು.

ತ್ರಿಫಲೆಗಳು, ಹಿಪ್ಪಲಿ, ಏಲಕ್ಕಿ ಇವುಗಳನ್ನು ಚೂರ್ಣ ಮಾಡಿ ಜೇನಿನಲ್ಲಿ ಕಲಸಿ ಲೇಪಿಸುವುದು. ಇದರಿಂದ ಭಗಂದರವು ಸಹ ಗುಣವಾಗುವುದು.

ಚೇರೆ ಮರದ ಚಿಗುರನ್ನು ಹರಳೆಣ್ಣೆ ಹಾಕಿ ಹುರಿದು ಅರೆದು ಕಟ್ಟಿದರೆ ಕೂಡಲೆ ಕೀವು ಮತ್ತು ಅದರ ಗೂಂಜು ಸಹ ಹೋಗಿ ಗುಣವಾಗುವುದು.

ಪಂಚಬಳ್ಳಿ ವೀಳ್ಯದೆಲೆಯನ್ನು ಅರೆದು ಹರಳೆಣ್ಣೆ ಹಾಕಿ ಕುದಿಸಿ ಲೇಪಿಸಿದರೆ ವ್ರಣವು ಶುದ್ಧವಾಗಿ ಬೇಗನೆ ಮಾಯುವುದು.

ಮೆತ್ತೆಯನ್ನು ಬಳ್ಳಿಗೆ ಅಕ್ಕಿ ಸೇರಿಸಿ ಅರೆದು ಲೇಪಿಸುವುದು.

ಉರಿಸಣಿಗೆಯ ಸೊಪ್ಪನ್ನು ಬೆಳ್ತಿಗೆಅಕ್ಕಿ ಸೇರಿಸಿ ಅರೆದು ಲೇಪಿಸುವುದು.

ಹುಣಸೆ ಹಣ್ಣನ್ನು ಹುಳಿ ಮಜ್ಜಿಗೆ ಸೇರಿಸಿ ಜಾಳಿಸಿ ಲೇಪಿಸುವುದು.

ಕಹಿಬೇವಿನ ಕಾಯಿಯನ್ನೂ ಹಸಿ ಅರಸಿನವನ್ನೂ ಅರೆದು ಲೇಪಿಸುವುದು.

ಹರಳೆಣ್ಣೆ, ಸುಣ್ಣ, ಬೆಣ್ಣೆ ಇವನ್ನು ಚೆನ್ನಾಗಿ ಜಾಳಿಸಿ ಲೇಪಿಸುವುದು.

ಭಜೆ ಮತ್ತು ಕರಿಗೋಟು ಅಡಿಕೆ ಇವುಗಳನ್ನು ಅರೆದು ಲೇಪಿಸುವುದು.

ಕೊಟ್ಟೆ ಮುಳ್ಳಿನ ಬೇರನ್ನು ಅಷ್ಟಾವಶೇಷ ಕಷಾಯ ಮಾಡಿ ಚೆನ್ನಾಗಿ ತ್ರಣಿಸಿ ಜೇನು ಮೇಲ್ಪುಡಿ ಹಾಕಿ ಸೇವಿಸುವುದು.

ಕಾದ್ ಪಕಂಜಿ ಬೇರಿನ ಕೆತ್ತೆ ಅಷ್ಟಮಾಂಶ ಕಷಾಯಕ್ಕೆ ಬೆಲ್ಲ ಮೇಲ್ಪುಡಿ ಹಾಕಿ ಸೇವಿಸುವುದೂ ಫಲಪ್ರದ.

**ಒಡೆಯದಿರುವ ಕಠಿಣ ಕುರುವಾದರೆ:**

ಬಲಿಪ್ಪ ಕಂಡೆಯನ್ನು(ಇದು ಮಹಾ ವಿಷ ಹೊಟ್ಟೆಗೆ ಸೇವನೆ ಆಗದಂತೆ ಎಚ್ಚರವಿರಲಿ) ಎಣ್ಣೆಯಲ್ಲಿ ಅರೆದು ಮೊಲೆ ಹಾಲು ಹಾಕಿ ಜಾಳಿಸಿ ಲೇಪಿಸಿದರೆ ಕೂಡಲೇ ಒಡೆದು ಸೋರುವುದು. ಆ ಮೇಲೆ ಮೇಲೆ ಹೇಳಿದ ಲೇಪಗಳಲ್ಲಿ ಯಾವುದಾದರೂ ಒಂದನ್ನು ಹಚ್ಚಿದರೆ ಶೀಘ್ರವಾಗಿ ಗುಣವಾಗುವುದು.

**ಮೇಹಗ್ರಂಥಿಗಳಿಗೆ:**

ಎಕ್ಕೆಬೇರನ್ನು ನೀರಿನಲ್ಲಿ ತೇದು ಲೇಪಿಸುವುದು.

ಗೇರು ಬೀಜದ ಪಪ್ಪು ಮತ್ತು ಗುಗ್ಗುಲವನ್ನು ಹಾಲಿನಲ್ಲಿ ಅರೆದು ಲೇಪಿಸುವುದು.

**ಮೇಹದಿಂದುಂಟಾದ ಉಷ್ಣ ಬೊಕ್ಕೆಗಳಿಗೆ**

ನೆಗ್ಗಿನ ಮುಳ್ಳು ಮತ್ತು ಅಮೃತ ಬಳ್ಳಿ ಸಮಾಂಶ ಸೇರಿಸಿ ಅಷ್ಟಮಾಂಶ ಕಷಾಯ ಮಾಡಿ ಕಲ್ಲು ಸಕ್ಕರೆ ಹಾಕಿ ಕೆಲವು ದಿನಗಳ ವರೆಗೆ ಸೇವಿಸುವುದರಿಂದ ಮೇಹದಿಂದ ಉಂಟಾಗುವ ಪದ್ದು, ಬೊಕ್ಕೆ ಇತ್ಯಾದಿಗಳು ಗುಣವಾಗುವವು.

**ಉಷ್ಣದ ಬೊಕ್ಕೆ ಮತ್ತು ಕುರಗಳಿಗೆ:**

ಜಂಬಳ್ಳಿಯ ಗಡ್ಡೆ ಹಾಕಿ ಮದ್ದಿನ ಗಂಜಿ ಮಾಡಿ ದನದ ಮಜ್ಜಿಗೆ ಹಾಕಿ ಚಪ್ಪೆ ಗಂಜಿ ಉಣ್ಣುವುದು. ಮೂರು ದಿನ ಉಣ್ಣುವುದರಿಂದ ಮೇಹ ದಿಂದುಂಟಾದ ಬೊಕ್ಕೆ, ಕುರ ಇತ್ಯಾದಿ ಗುಣವಾಗುವುದು.

**ಅರಿಪ್ಪೆ ಕುರಕ್ಕೆ: (ಭಗಂದರ)**

ಅರಿಪ್ಪೆ ದಾರಳೆಯ ಸೊಪ್ಪನ್ನು ಅರೆದು ಆರಿದಂತೆ ಲೇಪಿಸುತ್ತಿರುವುದು

ಪತ್ರ ಜೀವದ ಎಲೆಯನ್ನು ಅರೆದು ಆರಾರ ಲೇಪ ಹಾಕುವುದರಿಂದ ಶೀಘ್ರವಾಗಿ ಗುಣವಾಗುವುದು.

**ಮೇಹವ್ರಣಗಳಿಗೆ:**

ಪಲ್ಲಿಕಾಯಿ ಬಳ್ಳಿಯ ಕೆತ್ತೆಯ ಮದ್ದಿನ ಗಂಜಿ ಮಾಡಿ ಮೂರು ದಿನ ಬಿಡದೆ ಸಪ್ಪೆಯಾಗಿ ಉಣ್ಣುವುದು.

ಸಂದು ಬಳ್ಳಿಯನ್ನು ಬಾಡಿಸಿ ರಸ ತೆಗೆದು ಜೇನು ಹಾಕಿ ಕೆಲವು ದಿನ ಬಿಡದೆ ಸೇವಿಸಿದರೆ ಗುಣವಾಗುವುದು.

ಹಸಿ ನೆಲ್ಲಿಕಾಯಿಯ ರಸದಲ್ಲಿ ಅರಸಿನವನ್ನು ಕದಡಿ ಸೋಸಿ ಜೇನು ಹಾಕಿ ಬೆಳಗ್ಗೆ ಮಾತ್ರ ಸೇವಿಸುವುದು.

ಮರದರಸಿನ, ದೇವದಾರು, ಭದ್ರಮುಷ್ಠಿಗಡ್ಡೆ ಇವುಗಳನ್ನು ಸಮಾಂಶ ತೆಗೆದು ಅಷ್ಟಾವಶೇಷ ಕಷಾಯ ಮಾಡಿ ಚೆನ್ನಾಗಿ ತಣಿಸಿ ಜೇನು ಮೇಲ್ಪುಡಿ ಹಾಕಿ ಎರಡು ಹೊತ್ತು ಸೇವನೆ.

ತೊಂಡೆ ಬೇರನ್ನು ಮಜ್ಜಿಗೆಯಲ್ಲಿ ಅರೆದು ಜೇನು ಹಾಕಿ ಸೇವಿಸುವುದರಿಂದ ಪ್ರಮೇಹವು ಪಿಟಿಕ ಸಹಿತ ಗುಣವಾಗುವುದು. (ಸೀಮೂತ್ರಕ್ಕೂ ಹಿತ)

ಚಿಲ್ಲಿ ಬೀಜವನ್ನು ಮಜ್ಜಿಗೆಯಲ್ಲಿ ಅರೆದು ಜೇನು ಹಾಕಿ ಸೇವಿಸಿದರೂ. ಪ್ರಮೇಹ ಹಾಗೂ ಪಿಟಕಗಳು ಗುಣವಾಗುವುವು.

ಹಾಡೆಗಡ್ಡೆ. ಅರಸಿನ, ಜ್ಯೇಷ್ಠ ಮಧು ಇವುಗಳ ಅಷ್ಟಾವಶೇಷ ಕಷಾಯ ಮಾಡಿ ಚೆನ್ನಾಗಿ ತಣಿಸಿ ಜೇನು ಮೇಲ್ಪುಡಿ ಹಾಕಿ ದಿನವಲ್ಲಿ ಎರಡು

ಸೊತ್ತು ಸೇವಿಸುವುದು. ಇಪ್ಪತ್ತನಾಲ್ಕು ದಿನ ಸೇವಿಸುವುದರಿಂದ ಪಿತ್ತ ಪ್ರಮೇಹ, ವ್ರಣ ಇತ್ಯಾದಿ ಗುಣವಾಗುವುವು.

ಸುಗಂಧಿಯ ಬೇರು ಎರಡು ತೊಲೆ, ಒಂದು ತೊಲೆ ಲಾವಂಚದ ಬೇರು, ಕಟುಕರೋಹಿಣಿ ಅರ್ಧ ತೊಲೆ, ಇವುಗಳ ಅಷ್ಟಾವಶೇಷ ಕಷಾಯ ಮಾಡಿ ಸೇವಿಸುವುದು. ಮತ್ತು,

ಅಮೃತಬಳ್ಳಿಯನ್ನೂ ಸಾಸಿವೆಯನ್ನೂ ಸುಣ್ಣಗೆ ಅರೆದು ಪದೇ ಪದೇ ಲೇಪಿಸುವುದು. ಒಣಗಿದಾಗ ಬಿಸಿನೀರಿನಿಂದ ತೊಳೆಯುವುದು.

ನುಗ್ಗೆಯೆಲೆಯನ್ನು ಅರೆದು ಪರಳಣ್ಣೆ ಹಾಕಿ ಕುದಿಸಿ ಲೇಪಿಸುವುದು.

ಬಿಳಿ ಎಕ್ಕೆಯ ಎಲೆಯನ್ನು ಸಣ್ಣದಾಗಿ ಕತ್ತರಿಸಿ ಸಮಾಂಶ ತುರಿದ ತೆಂಗಿನಕಾಯಿಯನ್ನು ಸೇರಿಸಿ ಹುರಿದು ಎರಡೂ ಕರಕಾಗುವಾಗ ತೆಗೆದು ಸುಣ್ಣಗೆ ಅರೆದು ಲೇಪಿಸಿದರೆ ಯಾವುದೇ ತರದ ಮೇಹವ್ರಣವೂ ಗುಣವಾಗುವುದು.

ಕರಿ ಉಮ್ಮತ್ತದ ಎಲೆಯ ರಸ, ಇರೋಳಿಸರದ (ಲೋಳಿಸರ) ಲೋಳೆ, ಜೀರಿಗೆ, ಕರಿಜೀರಿಗೆ ಇವುಗಳನ್ನರೆದು ಸೇರಿಸಿ ಸ್ವರಸದಷ್ಟು ಎಣ್ಣೆ ಸೇರಿಸಿ ಕಾಯಿಸಿ ಎಣ್ಣೆಯನ್ನೂ ಕಲ್ಕವನ್ನೂ ಒಟ್ಟಿಗೇ ಇರಿಸಿಕೊಂಡು ವ್ರಣಕ್ಕೆ ಲೇಪಿಸುತ್ತಿದ್ದರೆ ಶೀಘ್ರವಾಗಿ ಗುಣವಾಗುವುದು. ದದ್ದು, ದುಷ್ಟವ್ರಣ ಕ್ರಿಮಿ ಇತ್ಯಾದಿ ಗುಣವಾಗುವುದು.

ಎಕ್ಕೆಯ ಬೀಜವನ್ನು ಗರಗದ ರಸದಲ್ಲರೆದು ಲೇಪಿಸಿದರೆ ಎಲ್ಲಾ ತರದ ವ್ರಣವೂ ಗುಣವಾಗುವುದು.

ಕೊಡಸಿಗೆ ಬೇರಿನ ಕೆತ್ತೆಯನ್ನು ತುಪ್ಪದಲ್ಲಿ ಹುರಿದು ಚೂರ್ಣ ಮಾಡಿ ಎರಡು ಯಾ ನಾಲ್ಕಾಣೆ ತೂಕ ಚೂರ್ಣವನ್ನು ತುಪ್ಪದಲ್ಲಿ ಕಲಸಿ ಸೇವಿಸುವುದು. ದಿನದಲ್ಲಿ ಎರಡು ಹೊತ್ತಿನಂತೆ ಒಂದು ವಾರ ಸೇವಿಸಿದರೆ ಗುಣವಾಗುವುವು.

ಉಮ್ಮತ್ತದ ಬೇರನ್ನು ನೀರಿನಲ್ಲರೆದು ಕುದಿಸಿ ಲೇಪಿಸಿದರೆ ಶೀಘ್ರವಾಗಿ ಗುಣವಾಗುವುದು.

**ಗರ್ಭಮೋಹ ವ್ರಣಗಳಿಗೆ:**

ಬಿಳಿ ಕುಂಟಾಂಗಿಲದ ಕೆತ್ತೆ, ನೇರಳೆಕೆತ್ತೆ, ಅತ್ತಿ ಕೆತ್ತೆ ಇವುಗಳ ಮದ್ದಿನ ಗಂಜಿ ಮಾಡಿ ನೊರೆ ಹಾಲು ಹಾಕಿ ಬೆಳಗ್ಗೆ ಸೇವಿಸುವುದು. ಮೂರು ಯಾ ಆರು ದಿನ ಸೇವಿಸಿದರೆ ಹಿತ.

**ಮೋಹವ್ರಣವು ಸ್ತಬ್ಧವಾಗಿದ್ದರೆ:**

ಗಂಧಸಾಲೆ ಅಕ್ಕಿ ಅನ್ನ, ಬೇಯಿಸಿದ ಬದನೆಕಾಯಿ, ಚಿಜ ಬಾಳೆಹಣ್ಣು, ಹೂ ಬಾಳೆಹಣ್ಣು ಈ ಪೈಕಿ ಯಾವುದಾದರೂ ಒಂದನ್ನು ಎಮ್ಮೆ ಮೊಸರಿನಲ್ಲಿ ಕಿವಿಚಿ ದಪ್ಪವಾಗಿ ಲೇಪಿಸಿ ಬಟ್ಟೆ ಕಟ್ಟಿದರೆ ಪಕ್ವವಾಗಿ ಬೇಗನೆ ಗುಣವಾಗುವುದು.

**ಮೋಹವ್ರಣ ರೋಪಣಕ್ಕೆ:**

ಸುಗಂಧಿ ಗಿಡದ ಬೇರು ಮತ್ತು ತಗ್ಗಿ ಗಿಡದ ಚಿಗುರು ಇವುಗಳನ್ನು ನೊರೆ ಹಾಲಿನಲ್ಲಿ ಅರೆದು ಲೇಪಿಸಿವರೆ ದದ್ದು ಮತ್ತು ನಾರು ಹುಣ್ಣು ಸಹ ಗುಣವಾಗುವುದು.

**ಮೋಹಕ್ಕೂ ಲೂತಿಗೂ:**

ನೇರಳೆ ಕೆತ್ತೆ, ಬಿಳಿಕುಂಟಾಲದ ಕೆತ್ತೆ, ಅತ್ತಿಕೆತ್ತೆ, ಇವುಗಳನ್ನು ಒಂದೂವರೆ ತೊಲೆ ಪ್ರಕಾರ ಸೇರಿಸಿ ಜಜ್ಜಿ ಒಂದು ಕುಡ್ತೆ ಸವರೆ ಅಕ್ಕಿ ಹಾಕಿ ಅದು ಬೇಯಲು ಬೇಕಾದಷ್ಟು ನೀರೂ ಹಾಕಿ ಬೇಯಿಸಿ ಹದಗಂಜಿ ಮಾಡಿ ಇಳಿಸಿ ಒಂದು ಕುಡ್ತೆ ದನದ ನೊರೆ ಹಾಲುಹಾಕಿ ಬೆಳಗ್ಗೆ ಸಪ್ಪೆಯಾಗಿ ಉಣ್ಣುವುದು. ಮೂರು ಯಾ ಆರು ದಿನ ಉಣ್ಣಲು ಗುಣವಾಗುವುದು.

# ಪಿತ್ತ ವ್ಯಾಧಿ

**ಪಿತ್ತ ವಿಕಾರಕ್ಕೆ:**

ಅಣಲೆಕಾಯಿಯ ಸಿಪ್ಪೆ ವಸ್ತ್ರಗಾಳಿತ ಚೂರ್ಣ ಮಾಡಿ ಸಮಾಂಶ ಸಕ್ಕರೆ ಸೇರಿಸಿ ಒಂದೊಂದು ತೊಲೆ ಪ್ರಕಾರ ತುಪ್ಪದಲ್ಲಿ ಕಲಸಿ ದಿನದಲ್ಲಿ ಎರಡು ಹೊತ್ತು ಸೇವನೆ. ಕೆಲವು ದಿನ ಸೇವಿಸಲು ಪಿತ್ತವಿಕಾರಗಳು ಗುಣ ವಾಗುವುವು.

ಇಕ್ಕೋಳಿಸರದ ರಸ ಒಂದು ಔನ್ಸು, ಒಂದು ತೊಲೆ ಬೆಲ್ಲ ಹಾಕಿ ಪ್ರತಿ ದಿನ ಬೆಳಗ್ಗೆ ಮೂರು ಯಾ ಆರು ದಿನ ಸೇವಿಸುವುದು.

ಜೇಡಿಮುಳ್ಳಿನ ಸೊಪ್ಪನ್ನು ಗಂಜಿ ತೆಳಿಯಲ್ಲಿ ಬೇಯಿಸಿ ಅರೆದು ತಲೆಗೆ ಹಾಕುವುದು ಮತ್ತು ತೆಳಿಯನ್ನು ಕುಡಿಯುವುದು. ಹೀಗೇ ಮೂರು ದಿನ ಮಾಡುವುದು.

ಕಂಚುಕಾರೆ ಬೇರನ್ನು ಜಜ್ಜಿ ಮಜ್ಜಿಗೆಯಲ್ಲಿ ಹಾಕಿ ಕುದಿಸಿ ಸೇವಿಸುವುದು.

ಉರಿಸಣಿಗೆ (ಆಕೀರೆ) ಬೇರನ್ನು ಹಾಲು ಕಷಾಯ ಮಾಡಿ ಸೇವಿಸುವುದರಿಂದ ಪಿತ್ತವಿಕಾರಗಳು ಹಾಗೂ ಗ್ರಹಣಿ ಸಹ ನಿವಾರಣೆಯಾಗುವುದು.

ತೊಂಡೆಸೊಪ್ಪಿನ ರಸ ಕಾಲು ಕುಡ್ತೆ, ನೊರೆ ಹಾಲು ಕಾಲು ಕುಡ್ತೆ. ಸಕ್ಕರೆ ಒಂದು. ಚಮಚ ಇವುಗಳನ್ನು ಮಿಶ್ರಮಾಡಿ ಬೆಳಗ್ಗೆ ಸೇವನೆ. ಮೂರು ದಿನ ಸೇವಿಸುವುದರಿಂದ ಗುಣವಾಗುವುದು.

ಉರಗೆಯ ರಸ ಒಂದು ಔನ್ಸ್ ಒಂದು ಚಮಚ ಸಕ್ಕರೆ ಹಾಕಿ ಬೆಳಗ್ಗೆ ಸೇವನೆ.

ಅಮೃತಬಳ್ಳಿಯ ರಸ ಒಂದು ಔನ್ಸ್ ಒಂದು ಚಮಚ ಸಕ್ಕರೆ ಹಾಕಿ ಬೆಳಗ್ಗೆ ಸೇವನೆ.

ಬಯಲು ಚುಳ್ಳಿ ಗಿಡದ ರಸ ಒಂದು ಔನ್ಸ್ ಒಂದು ಚಮಚ ಸಕ್ಕರೆ ಸೇರಿಸಿ ಬೆಳಗ್ಗೆ ಸೇವಿಸುವುದು.

ಮೊಸರು ಕಡೆದ ಕೂಡಲೆ ಆ ಮಜ್ಜಿಗೆಗೆ ಸಕ್ಕರೆ ಹಾಕಿ ಸೇವನೆ ಹಿತ

ಡೆಸ್ಸೊಪ್ಪು, ಹೊನಗೊನ್ನೆ ಇವುಗಳನ್ನರೆದು ಎಮ್ಮೆ ಬೆಣ್ಣೆಯಲ್ಲಿ ಜಾಳಿಸಿ ತಲೆಗೆ ಹಾಕುವುದು. ಮೂರು ದಿನ ಬೆಳಗ್ಗೆ ಹಾಕುವುದು.

ಹಳೆಯ ಕುಂಬಳ ಕಾಯಿಯ ರಸದಲ್ಲಿ ಒಂದು ತೊಲೆ ಜ್ಯೇಷ್ಠಮಧು ವನ್ನು ತೇದು ಒಂದು ಚಮಚ ಸಕ್ಕರೆ ಹಾಕಿ ಪ್ರತಿದಿನ ಬೆಳಗ್ಗೆ ಒಂದು ವಾರ ಸೇವಿಸುವುದರಿಂದ ಗುಣವಾಗುವುದು.

ಅತ್ತಿಕೆತ್ತೆ ಮತ್ತು ಕಡಿರಬೇರು ಇವುಗಳ ಅಷ್ಟಮಾಂಶ ಕಷಾಯ ಮಾಡಿ ಸಕ್ಕರೆ ಮೇಲ್ಪುಡಿ ಹಾಕಿ ಒಂದು ವಾರ ಸೇವಿಸುವುದು ಹಿತ.

**ಪಿತ್ಥವಿಕಾರಗಳಿಗೆ ಭೃಂಗಾದಿ ತೈಲ:**

ಗರಗ, ಬಿಲ್ವಪತ್ರೆ, ಸಣ್ಣಬದನೆ, ಸಾಂಬ್ರಾಣಿ, ಕಾಟು ಪಟಗಿಲ ಆಡುಸೋಗೆ, ಕಾಡುಸೌತೆ, ಆನೆ ತಗತ್ತೆ ಈ ಎಂಟು ಬಗೆಯ ಗಿಡಗಳ ಸೊಪ್ಪನ್ನು ಸಮಾಂಶ ಸೇರಿಸಿ ರಸ ತೆಗೆದು ಏಲಾದಿ ಗಣದ ಮದ್ದುಗಳನ್ನು ಇದೇ ಸ್ವರಸದಲ್ಲರೆದು ಕಲ್ಕ ಹಾಕಿ ಕಾಯಿಸಿ ಅರಗು ಪಾಕದಲ್ಲಿಳಿಸಿ ಪಾತ್ರ ಪಾಕಕ್ಕೆ ಅಂಜನಕಲ್ಲು, ಪಚ್ಚೆಕರ್ಪೂರಗಳನ್ನು ಹಾಕಿ ಎಣ್ಣೆ ಆರಿಸಿ ಸರ್ವಾಂಗ ಲೇಪಿಸುವುದರಿಂದ ಪಿತ್ತದೋಷ, ಹುಣ್ಣು, ಗಂದೆಗಳೆಲ್ಲ ಗುಣ ವಾಗುವುವು.

**ಪಿತ್ಥವಿಕಾರಗಳಿಗೆ ಷಡಂಗ ಕಷಾಯ:**

ಶ್ರೀಗಂಧ, ಭದ್ರಮುಷ್ಠಿಗಡ್ಡೆ, ಪರ್ಪಟಪುಲ್ಲು, ರಾಮಚ್ಚ, ಇರುವೇಲಿ ಇವುಗಳನ್ನು ಶೀತಕಷಾಯ ಮಾಡಿ ಸೇವನೆ ಮಾಡುವುದರಿಂದ ಪಿತ್ಥವಿಕಾರ ಪಿತ್ತಜ್ವರ, ಉದ್ರಿಕ್ತಪಿತ್ಥ ಇತ್ಯಾದಿ ಗುಣವಾಗುವುವು.

**ಪಿತ್ಥಶೂಲೆಗೆ:**

ನೆಲ್ಲಿಚಟ್ಟಿನ ಚೂರ್ಣವನ್ನು ಜೇನಿನಲ್ಲಿ ಕಲಸಿ ಸೇವಿಸುವುದು.

**ಪಿತ್ಥದಿಂದುಂಟಾದ ತಲೆ ತಿರುಕಕ್ಕೆ:**

ಹೊಂಗಾರೆ ಚಿಗುರಿನ ರಸ ಅರ್ಧ ಕುಡ್ತೆಗೆ ಒಂದು ಚಮಚ ಸಕ್ಕರೆ ಹಾಕಿ ಕದಡಿ ಸೇವಿಸುವುದರಿಂದ ಪಿತ್ತವು ವಾಂತಿಯಾಗಿ ಯಾ ಭೇದಿಯಾಗಿ ಹೋಗುವುದು,

ನೀರುಳ್ಳಿಯ ರಸವನ್ನು ಸೇವಿಸುವುದರಿಂದಲೂ ಪಿತ್ತವು ಶಾಂತಿ ಯಾ ಭೇದಿಯಾಗಿ ಹೋಗುವುದು.

**ಪಿತ್ಥ ಭ್ರಮೆಗೆ:**

ಹಸಿಶುಂಠಿಯ ರಸ, ಮಾವಿನ ಹಣ್ಣಿನ ರಸ, ದನದ ತುಪ್ಪ, ಇವು ತಲಾ ಎರಡೆರಡು ತೊಲೆ ಪ್ರಕಾರ ಸೇರಿಸಿ ಒಂದು ತೊಲೆ ಸಕ್ಕರೆ ಹಾಕಿ ಕಾಯಿಸಿ ಬತ್ತಿಸಿ ಮೂರು ತೊಲೆ ಮಾಡಿ ಇಳಿಸಿ ತಣಿಸಿ ಸೇವಿಸುವುದು. ಒಂದು ವಾರ ಸೇವಿಸುವುದರಿಂದ ಗುಣವಾಗುವುದು.

ಮಂಗಳವಾರ ದಿನ ಪುರುಷರತ್ನ ಗಿಡವನ್ನು ತಂದು ಬೆಣ್ಣೆಯಲ್ಲಿ ಸಣ್ಣಗೆ ಅರೆದು ದನದ ನೊರೆ ಹಾಲಿನಲ್ಲಿ ಕದಡಿ ಕುಡಿಯುವುದು.

**ಪಿತ್ಥದಿಂದಾದ ಹುಚ್ಚು ಭ್ರಮೆಗೆ:**

ಉಮ್ಮತದ ಬೇರನ್ನು ಹಾಲಿನಲ್ಲಿ ಬೇಯಿಸಿ ತುಪ್ಪದಲ್ಲಿ ಹುರಿದು ನೀರಿನಲ್ಲಿ ಅರೆದು ದೊಡ್ಡ ನೆಲ್ಲಿಕಾಯಿಯಷ್ಟು ಮಾತ್ರೆ ಮಾಡಿ ರಾತ್ರಿ ಮತ್ತು ಬೆಳಿಗ್ಗೆ ನೀರಿನಲ್ಲಿ ತೇದು ಸೇವಿಸಿ ಕೂಡಲೆ ಮಲಗಿದರೆ ಸುಖವಾದ ನಿದ್ದೆ ಬರುವುದು. ನಿದ್ದೆ ಹೆಚ್ಚಾದರೆ ಹಾಲಿಗೆ ಸಕ್ಕರೆ ಹಾಕಿ ಸೇವಿಸುವುದೆ ಇದಕ್ಕೆ ಪ್ರತಿವಿಧಿಯು,

**ಪಿತ್ಥ ವಿಕಾರದಿಂದ ಉಂಟಾದ ಹೆದರಿಕೆಗೆ:**

ಪರ್ಪಟ ಹುಲ್ಲು, ಭದ್ರಮುಷ್ಠಿಗಡ್ಡೆ, ರಾಮಚ್ಚದ ಬೇರು, ಇವುಗಳ ಅಷ್ಟಾವಶೇಷ ಕಷಾಯ ಮಾಡಿ ಎರಡು ಹೊತ್ತು ಸೇವಿಸುವುದು. ಒಂದು ವಾರ ಸೇವಿಸುವುದರಿಂದ ಗುಣವಾಗುವುದು.

**ಪಿತ್ಥಾತಿ ಸಾರಕ್ಕೆ:**

ಗದ್ದೆ ಕರಂಡೆಯನ್ನು ಮದ್ದಿನ ಗಂಜಿ ಮಾಡಿ ಬೆಳಗ್ಗೆ ಸೇವಿಸುವುದು.

**ಪಿತ್ಥಭ್ರಮಣೆಗೆ:**

ಸಮೂಲ ನೆಲಕ್ಕಂಚಿ ಗಿಡವನ್ನು ಮಜ್ಜಿಗೆಯಲ್ಲಿ ಅರೆದು ಕುದಿಸಿ ಸೇವಿಸುವುದು. ಕೆಲವು ದಿನ ಸೇವನೆಯಿಂದ ನಿವಾರಣೆಯಾಗುವುದು.

**ರಕ್ತ ಪಿತ್ಥಕ್ಕೆ:**

ನಾಲ್ಕು ಗಜಿಗೆ ಕಾಯಿ ತೂಕ ಭದ್ರಮುಷ್ಠಿಗಡ್ಡೆ, ಮೂರು ಮೂರು ಗಜಿಗೆ ಕಾಯಿ ತೂಕ ಹಿಪ್ಪಲಿ ಮತ್ತು ಸಣ್ಣ ಬದನೆ ಬೇರು, ಎಂಟು ಗಜಿಗೆ ಕಾಯಿ ತೂಕ ಜೀರಿಗೆ, ಇವುಗಳನ್ನು ಜಜ್ಜಿ ಒಂದು ಬಟ್ಟೆ ತುಂಡಿನಲ್ಲಿ ಸಡಿಲ ವಾಗಿ ಕಟ್ಟಿ ಗಂಜಿಯೊಟ್ಟಿಗೆ ಹಾಕಿ ಬೇಯಿಸಿ ಆ ಮದ್ದಿನ ಗಂಜಿಗೆ ಸ್ವಲ್ಪ ನೊರೆಹಾಲು ಮಾತ್ರ ಸೇರಿಸಿ ಚಪ್ಪೆ ಉಣ್ಣುವುದು. ಮೂರು ದಿನ ಉಂಡರೆ ಗುಣವಾಗುವುದು.

**ಆಮ್ಲ ಪಿತ್ಥಕ್ಕೆ:**

ಕಿರಾತ ಕಡ್ಡಿಯ ಕಷಾಯ ಮಾಡಿ ಒಂದು ಚಮಚ ಸುಣ್ಣದ ತಿಳಿ ನೀರು ಎರೆದು ಸೇವಿಸುವುದು ಹಿತ.

ತ್ರಿಫಲೆ, ತ್ರಿಕಟು, ಏಲಕ್ಕಿ, ಭದ್ರಮುಷ್ಠಿಗಡ್ಡೆ, ವಿಶಾಲರಿ, ಪಚ್ಚಿಲೆ. ಇವು ಒಟ್ಟು ಸೇರಿಸಿ ಒಂದು ಭಾಗ, ಲವಂಗ ಮತ್ತು ತಿಗಡೆ ಒಂದೊಂದು ಭಾಗ, ಇವುಗಳನ್ನು ಸೇರಿಸಿ ಚೂರ್ಣ ಮಾಡಿ ಸಮಾಂಶ ಸಕ್ಕರೆ ಕೂಡಿಸಿ ಊಟದ ಆರಂಭದಲ್ಲಿ ತಿಂದು ನೀರು ಕುಡಿಯುವುದು. ಇದರಿಂದ ಮೂಲ ವ್ಯಾಧಿ, ಪ್ರಮೇಹ, ಮೂತ್ರ ಕಲ್ಲು, ಮೂತ್ರ ಬಂದಾಗುವಿಕೆ, ಶೂಲೆ ಇತ್ಯಾದಿ ಗುಣವಾಗುವುವು.

ಅತ್ತಿ ಮರದ ಎಳೆ ಎಲೆ ಒಂದು ಹಿಡಿ ತಂದು ಒಂದು ಕುಡ್ತೆ ಕಲಗಚ್ಚಿ ನಲ್ಲಿ ಅರೆದು ಸೋಸಿ ಎರಡು ತೊಲೆ ಕಲ್ಲು ಸಕ್ಕರೆ ಹಾಕಿ ಕದಡಿ ಬೆಳಗ್ಗೆ ಸೇವಿಸುವುದು. ಹನ್ನೆರಡು ಯಾ ಇಪ್ಪತ್ತನಾಲ್ಕು ದಿನ ಸೇವಿಸುವುದು ಹಿತ.

ಅವಿಪತ್ತಿ ಚೂರ್ಣವನ್ನು ತೆಂಗಿನ ಕಾಯಿಯ ನೀರಿನಲ್ಲಿ ಕದಡಿ ರಾತ್ರಿ ಊಟದ ಆದಿಯಲ್ಲಿ ಸೇವಿಸುವುದು. (12ದಿನ)

**ಉಷ್ಣ ಪಿತ್ತಕ್ಕೆ:**

ಅಣಿಲೆಕಾಯಿ ಸಿಪ್ಪೆಯನ್ನೂ, ಹಿಪ್ಪಲಿಯನ್ನೂ ಸಮಾಂಶ ಸೇರಿಸಿ ವಸ್ತ್ರಗಾಳಿತ ಚೂರ್ಣ ಮಾಡಿ ಚೂರ್ಣದಷ್ಟೆ ಬೆಲ್ಲ ಸೇರಿಸಿ ಕಲಸಿ ಪ್ರತಿದಿನ ಒಂದು ತೊಲೆಯಷ್ಟು ಹನ್ನೆರಡು ದಿನ ಸೇವಿಸುವುದರಿಂದ ಅಮ್ಲಪಿತ್ತ, ಹೊಟ್ಟೆಶೂಲೆ, ಪಾರ್ಶ್ವಶೂಲೆ, ವಾಯುವಿಕಾರ ಇತ್ಯಾದಿ ಗುಣವಾಗುವುದು.

**ಅರಸಿನ ಮುಂಡರೋಗಕ್ಕೆ:**

ನೀರು ಕೂವೆಗಡ್ಡೆ, ಕೇದಗೆ ಬೇರು, ಅಡಕೆ ಮರದ ಬೇರು, ತೆಂಗಿನ ಮರದ ಬೇರು ಮುಂಡೆಂಗಿ ಮರದ ಗರ್ಭಸುಳಿ ಚಿಗುರು, ಜೆನ್ನಾರೆ ಬಳ್ಳಿಯ ಕಾಯಿ, ಹೊನ್ನೆ ಮರದ ಕೆತ್ತೆ ಇವುಗಳನ್ನು ಹಾಕಿ ಮದ್ದಿನ ಗಂಜಿ ಮಾಡಿ ದಿನವೂ ಬೆಳಗ್ಗೆ ಉಣ್ಣಿಸುವುದು. ನೀರು ಕೂವೆಗಡ್ಡೆ ಮುಂಡೆಂಗಿತಿರಿ ತೆಗೆದು ಗಂಜಿ ತೆಳಿಯಲ್ಲಿ ಅರೆದು ತಲೆಗೆ ಹಾಕುವುದು. ಹೀಗೆ 6 ವಾ 12 ದಿನ.

ಕಾಡುದಾರಳ ಕಾಯಿಯೊಳಗಣ ಅರಿಪ್ಪೆಯನ್ನು ಒಂದೂವರೆ ಗಂಟೆ ಸಮಯ ಮೊಲೆಹಾಲಿನಲ್ಲಿ ನೆನೆಸಿ ಅರೆದು ನಸ್ಯವೆರೆದರೆ ಒಂದೇ ದಿವಸವಲ್ಲಿ ಒಂದೇ ಸಲದಲ್ಲಿ ರೋಗವು ಗುಣವಾಗುವುದು.

ಬಿಳಿನೆಲ ನೆಲ್ಲಿಯನ್ನು ನುಣ್ಣಗೆ ಅರೆದು ನೆಲ್ಲಿಕಾಯಿಯ ಗಾತ್ರದಷ್ಟು ತೆಗೆದು ದನದ ನೊರೆಹಾಲಿನಲ್ಲಿ ಅಥವಾ ಆಯಾ ದಿನದ ಎಮ್ಮೆಯ ಮಜ್ಜಿಗೆ ಯಲ್ಲಿ ಕದಡಿ ಬೆಳಗ್ಗೆ ಸೇವಿಸುವುದು. ಒಂದು ವಾರ ಸೇವಿಸುವುದರಿಂದ ಗುಣವಾಗುವುದು.

ಕಹಿಸೋರೆಯ ಚಿಗುರನ್ನು ಕಷಾಯ ಮಾಡಿ ಸಕ್ಕರೆ ಹಾಕಿ ಹನ್ನೆರಡು ದಿನ ಸೇವಿಸಲು ಗುಣವಾಗುವುದು.

ಸೋರೆಕಾಯಿಯ ಹೋಳುಗಳನ್ನು ಹಾಕಿ ಗಂಜಿ ಇಟ್ಟು ಬೆಳಗ್ಗೆ ಉಣ್ಣುವುದು. ಆ ಹೋಳುಗಳನ್ನು ಅರೆದು ತಲೆಗೆ ಹಾಕುವುದು. ನಾಲ್ಕು ಯಾ ಆರು ದಿನಗಳಲ್ಲಿ ಗುಣವಾಗುವುದು.

ಮದ್ರಂಗಿ ಸೊಪ್ಪನ್ನು ದನದ ನೊರೆಹಾಲಲ್ಲಿ ಅರೆದು ಕದಡಿ ಸೇವಿಸಿ ದರೆ ಗುಣವಾಗುವುದು.

ಕೇದಗೆ ಚಿಗುರಿನ ಮದ್ದಿನ ಗಂಜಿ ಮಾಡಿ ಬೆಳಗ್ಗೆ ಉಣ್ಣುವುದು. ಹನ್ನೆರಡು ದಿನ ಉಣ್ಣುವುದು ಹಿತ.

ನರಿಕಬ್ಬಿನ ಗಡ್ಡೆಯನ್ನು ಬೆಳ್ತಿಗೆ ಅಕ್ಕಿ ಹಾಕಿ ಅರೆದು ಮಣ್ಣಿ ಮಾಡಿ ನಾಲ್ಕು ಯಾ ಆರು ದಿನ ತಿಂದರೆ ಗುಣವಾಗುವುದು.

**ಪಿತ್ಥ ಕಾವಿಳೆಗೆ:**

ಹಸಿಶುಂಠಿಯನ್ನು ಹಾಲು ಕಷಾಯ ಮಾಡಿ ಸೇವಿಸಿದರೆ ಶೋಫ ಸಹ ಗುಣವಾಗುವುದು.

ಒಂದು ಕುಡ್ತೆ ಹಾಲಿಗೆ ಅಷ್ಟೆ ನೀರು ಸೇರಿಸಿ ಎರಡು ತೊಲೆ ತೊಂಡೆ ಬೇರನ್ನು ಹಾಕಿ ಕಾಯಿಸಿ ಬತ್ತಿಸಿ ಹಾಲು ಮಾತ್ರ ಉಳಿಸಿ ಸೋಸಿ ಸಕ್ಕರೆ ಹಾಕಿ ಸೇವಿಸುವುದು.



# ನರಗಳ ವ್ಯಾಧಿ

**ನರವು ಎಳೆದರೆ:**

ಇಂದುಪ್ಪನ್ನು ಎಣ್ಣೆಯಲ್ಲಿ ಅರೆದು ಲೇಪಿಸುವುದು.

**ಕಾಲುಗಳ ನರಗಳ ಸೆಳೆತಕ್ಕೆ (ಮಿಾನೋಡುವುದು.)**

ಚಿಟಿಕೆಗಡ್ಡೆಯನ್ನು ತೆಂಗಿನ ಎಣ್ಣೆಯಲ್ಲಿ ಅರೆದು ಎಣ್ಣೆ ಹಾಕಿ ಕಾಯಿಸಿ ಆ ಎಣ್ಣೆಯನ್ನು ಹಚ್ಚುವುದು.

ತೆಂಗಿನ ಕಾಯಿಯ ಹಾಲಿಗೆ ಸಮಾಂಶ ನಿಂಬೆಯ ರಸ ಸೇರಿಸಿ ಜಾಳಿಸಿ ಹಚ್ಚುವುದು.

**ನರಗಳ ಎಲ್ಲಾ ವಿಕಾರಗಳಿಗೆ:**

ಕರಿ ಉಮ್ಮತ್ತದ ಎಲೆಯ ರಸವನ್ನು ಹಚ್ಚಿ ತಿಕ್ಕುವುದು. ಇದರಿಂದ ಜಿಗಿತ, ಸೆಳೆತ, ಇತ್ಯಾದಿ ವಿಕಾರಗಳು ಮಾಯವಾಗುವುವಲ್ಲದೆ ಜಖಂ, ಜಜ್ಜುವಿಕೆ, ಇತ್ಯಾದಿಗಳ ನೋವೂ ಕಡಿಮೆಯಾಗುವುದು.

**ನಾಡೀವ್ರಣಗಳಿಗೆ:**

ಒಂದು ತೊಲೆ ಹುರಿದ ಇಂಗನ್ನು ಒಂದು ಪಾತ್ರೆಯಲ್ಲಿ ಹಾಕಿ ಕುದಿಯುವ ಬಿಸಿನೀರು ಒಂದು ಕುಡ್ತೆ ಎರೆದು ಭದ್ರವಾಗಿ ಮುಚ್ಚಿ ಇರಿಸಿ ತಣಿದಾಗ ಸೋಸಿ ಬಾಟ್ಲಿಯಲ್ಲಿರಿಸಿಕೊಂಡು ದಿನದಲ್ಲಿ ಮೂರು ಹೊತ್ತು ಒಂದೊಂದು ಚಮಚ ಪ್ರಕಾರ ಒಂದು ಯಾ ಎರಡು ವಾರ ಸೇವಿಸುವುದು.

**ನಾಳಿ ಹುಣ್ಣಿಗೆ:**

ಬೆಳ್ಳುಳ್ಳಿಯನ್ನು ತುಪ್ಪದಲ್ಲಿ ಹುರಿದು ಅನ್ನಕ್ಕೆ ಕಲಸಿ ಉಣ್ಣುವುದು. ಅಥವಾ ಹಾಲು ಕಷಾಯ ಮಾಡಿ ದಿನದಲ್ಲಿ ಒಂದು ಹೊತ್ತು ಒಂದು ವಾರ ಯಾ ಎರಡು ವಾರ ಸೇವಿಸುವುದು. ಅಥವಾ,

ಎಕ್ಕೆ ಚಿಗುರು, ಹುರಿದ ಇಂಗು ಸಮಾಂಶ ಸೇರಿಸಿ ಅರೆದು ಕಡ್ಲೆ ಗಾತ್ರ ಮಾತ್ರೆ ಮಾಡಿ ದಿನ ೨ ಹೊತ್ತು ಒಂದೊಂದು ಮಾತ್ರೆ ಸೇವನೆ3 ಯಾ6 ದಿನ ಕಡುಪಥ್ಯ. ಹಾಲನ್ನ ಊಟ.

**ನರಗಳ ಸೆಳೆತಕ್ಕೆ:**

ನುಗ್ಗೆ ಮರದ ಕೆತ್ತೆಗೆ 1 ಚಿಟಿಕೆ ಜೀರಿಗೆ ಸೇರಿಸಿ ಅಷ್ಟಾವಶೇಷ ಕಷಾಯ ಮಾಡಿ ಇಂಗು, ಇಂದುಪ್ಪು ಮೇಲ್ಪುಡಿ ಹಾಕಿ ಸೇವನೆ. ವಾತಬೇನೆ, ಸಿಡಿತ, ಕುತ್ತುವುದು, ಊದುಬಾಪು ಸಹ ಗುಣ.

# ಶಾಖಾರೋಗ

**ಕಾಲು ಒಡೆದರೆ:**

ಗುಗ್ಗುಲವನ್ನು ತುಪ್ಪ ಹಾಕಿ ಕಾಯಿಸಿ ಯಾ ತೇದು ಬೆಣ್ಣೆಯಲ್ಲಿ ಜಾಳಿಸಿ ಲೇಪಿಸುವುದು.

ಗಂಧವನ್ನು ತೇದು ಬೆಣ್ಣೆಯೊಂದಿಗೆ ಜಾಳಿಸಿ ಲೇಪಿಸುವುದು.

ತೆಂಗಿನ ಕಾಯಿಯ ನೀರಿನಲ್ಲಿ ಒಂದು ಒಡಿ ಅಕ್ಕಿ ಹಾಕಿ ಮೂರು ದಿನ ಇರಿಸಿ ಚೆನ್ನಾಗಿ ಹುಳಿತ ಅದನ್ನು ಅರೆದು ಲೇಪಿಸುವುದು.

ಕಡು ಕಾರೆಕಾಯಿ, ಜೇನು ಮಯಣ, ಇಂದುಪ್ಪು, ಇವುಗಳನರೆದು ಬೆಣ್ಣೆಯಲ್ಲಿ ಕಲಸಿ ಬಿಸಿ ಮಾಡಿ ಲೇಪಿಸಿದರೆ ಕಾಲು ಸೀಳುವುದು ಗುಣ ವಾಗಿ ಕಮಲದಂತೆ ಮೃದುವೂ ಚಂದವೂ ಆಗುವುದು

ಜೇನು ಮಯಣ ಇಲ್ಲವೆ ಜಂಚಲ್ಯದೊಂದಿಗೆ ಬೆಣ್ಣೆಯನ್ನು ಸೇರಿಸಿ ಅರೆದು ಲೇಪಿಸುವುದು.

ರಾತ್ರಿ ಮಲಗುವಾಗ ನಾಭಿಗೆ ಎಳ್ಳೆಣ್ಣೆಯನ್ನು ಹಚ್ಚಿ ಮಲಗುತ್ತಿದ್ದರೆ ಕೆಲವೇ ದಿನಗಳಲ್ಲಿ ಗುಣವಾಗುವುದು.

ರಾಮಚ್ಚದ ಬೇರನ್ನು ಚೂರ್ಣ ಮಾಡಿ ಹಳೆಯ ತುಪ್ಪದಲ್ಲಿ ಅರೆದು ಲೇಪಿಸುವುದು.

ನೆಕ್ಕಿ ಬೇರಿನ ಮದ್ದಿನ ಗಂಜಿಗೆ ಒಂದಾಣೆ ತೂಕ ಕೊತ್ತಂಬರಿ ಚೂರ್ಣ, ಮತ್ತು ಒಂದು ಯಾ ಎರಡು ಔನ್ಸು ತೆಂಗಿನ ಕಾಯಿಯ ತನಿ ಹಾಲನ್ನೆರೆದು ಉಣ್ಣುವುದು. ಇದರಿಂದ ನಿಶ್ಶೇಷವಾಗಿ ಗುಣವಾಗುವುದು.

ಕರಿಕ್ಕೆಯ ಎಲೆಯನ್ನು ಚೂರ್ಣ ಮಾಡಿ ಕಾಲು ತೊಲೆ ಪ್ರಕಾರ ತುಪ್ಪದಲ್ಲಿ ಕಲಸಿ ದಿನದಲ್ಲಿ ಎರಡು ಹೊತ್ತು ಹನ್ನೆರಡು ದಿನ ಸೇವಿಸು ವುದು. ಮತ್ತು—

ಕರಿಕ್ಕೆ ನೀರು ಹಾಕದೆ ಅರೆದು ತೆಂಗಿನೆಣ್ಣೆ ಹಾಕಿ ಕಾಯಿಸಿ ಈ ಎಣ್ಣೆ ಸೋಸಿರಿಸಿಕೊಂಡು ಹಚ್ಚುವುದು. ಇದರಿಂದ ಕಾಲು, ತುಟಿಗಳು ಒಡೆಯುವ ಉರಿವಾತವು ಗುಣವಾಗುವುದು.

ತ್ರಿಫಲೆಗಳು, ವಿಶಾಲರಿ, ಹಿಪ್ಪಲಿ, ಇವುಗಳನ್ನು ಸಮಾಂಶವಾಗಿ ತೆಗೆದು ಚೂರ್ಣ ಮಾಡಿ ಹೊತ್ತಿಗೆ ಅರ್ಧ ತೊಲೆ ಪ್ರಕಾರ ಜೇನಿನಲ್ಲಿ ಕಲಸಿ ದಿನದಲ್ಲಿ ಎರಡು ಹೊತ್ತು ಸೇವಿಸುವುದು. ಕೆಲವು ದಿನ ಸೇವನೆಯಿಂದ ಗುಣವಾಗುವುದು. ಮತ್ತು—

ಉಮ್ಮತ್ತದ ಬೀಜ ಮತ್ತು ಸೈಂಧವ ಲವಣ ಇವುಗಳನ್ನರೆದು ಸಾಸಿವೆ ಯೆಣ್ಣೆ ಅಥವಾ ಕಹಿಬೇವಿನೆಣ್ಣೆಗೆ ಕಲ್ಕ ಸೇರಿಸಿ ಕಾಯಿಸಿ ಲೇಪಿಸಿದರೆ ಕಾಲೊಡೆಯುವ ವಿಪಾದಿಕಾ ಎಂಬ ರೋಗವು ಗುಣವಾಗುವುದು.

ಒಂದು ಪಾಲು ಎಳ್ಳು, ಎರಡು ಪಾಲು ಕಾರ್ಕೋಣಲರಿ ಇವುಗಳನ್ನು ವಸ್ತ್ರಗಾಳಿತ ಚೂರ್ಣ ಮಾಡಿ ಚೂರ್ಣದ ಎರಡು ಪಾಲಷ್ಟು ಜೇನಿನಲ್ಲಿ ಕಲಸಿ ಸೇವಿಸುವುದು. ಮತ್ತು—

ಅರಸಿನ, ಎಳ್ಳು, ಉಪ್ಪು ಇವುಗಳನ್ನು ಸಮಪ್ರಮಾಣದಲ್ಲಿ ಸೇರಿಸಿ ಈ ಮೂರರ ಒಟ್ಟು ತೂಕದಷ್ಟು ಉಮ್ಮತ್ತದ ಬೀಜವನ್ನು ಸೇರಿಸಿ ಚೂರ್ಣ ಮಾಡಿ ಎಮ್ಮೆಯ ಬೆಣ್ಣೆಯಲ್ಲಿ ಕಲಸಿ ಲೇಪಿಸುವುದು.

ಈ ಔಷಧ ಸೇವನೆ ಮತ್ತು ಲೇಪಗಳನ್ನು ಮೂರು ಯಾ ಆರು ದಿನ ಮಾಡಿಕೊಳ್ಳುವುದು.

ಎರಡು ಪಾಲು ಏಲಕ್ಕಿಯೊಂದಿಗೆ ಒಂದು ಪಾಲು ಶುದ್ಧಿ ಮಾಡಿದ ಇಂಗು ಸೇರಿಸಿ ವಸ್ತ್ರಗಾಳಿತ ಚೂರ್ಣ ಮಾಡಿ ಎರಡಾಣೆ ತೂಕ ಚೂರ್ಣ ವನ್ನು ಚೆನ್ನಾಗಿ ಕಾಯಿಸಿದ ದನದ ಹಾಲಿನಲ್ಲಿ ಕದಡಿ ರಾತ್ರಿಯ ಊಟದ ನಂತರ ಸೇವಿಸುವುದು. ಮತ್ತು

ಅಣಿಲೆಕಾಯಿಯನ್ನು ವಸ್ತ್ರಗಾಳಿತ ಚೂರ್ಣ ಮಾಡಿ ಬೆಣ್ಣೆಯಲ್ಲಿ ನುಣ್ಣಗೆ ಅರೆದು ಆಗಾಗ ಲೇಪ ಹಾಕುವುದು. ಎರಡು ವಾರ ಈ ಚಿಕಿತ್ಸೆ ಮಾಡಿದರೆ ಗುಣವಾಗುವುದು.

ರಾಳ ಹಾಗೂ ಇಂದುಪ್ಪನ್ನು ಜೇನಿನಲ್ಲಿ ಅರೆದು ತುಪ್ಪದಲ್ಲಿ ಜಾಳಿಸಿ ಲೇಪಿಸುವುದು.

ಪೊಲಿ ಬಳ್ಳಿಯ ಗಿಡ ಸಮೂಲವಾಗಿ ತಂದು ಕರಿಮಾಡಿ ಎಳ್ಳೆಣ್ಣೆಯಲ್ಲಿ ನುಣ್ಣಗೆ ಅರೆದು ಪದೇ ಪದೇ ಲೇಪಿಸುವುದರಿಂದ ಪಾದ ಸೀಳುವುದು, ಚರ್ಮ ಏಳುವುದು, ಉರಿ, ದಾಹ, ಇತ್ಯಾದಿ ಗುಣವಾಗುವುದು,

ಅಡಿನ ಹಿಕ್ಕೆಯನ್ನು ಕರಿ ಮಾಡಿ ಜೇನಿನಲ್ಲಿ ಸಣ್ಣಗೆ ಅರೆದು ಲೇಪಿಸುವುದು. ಇದರಿಂದ ದದ್ದು, ಚಿರುಕು, ಇತ್ಯಾದಿಯೂ ಸಹ ಗುಣವಾಗುವುದು.

ಹಸಿ ಶುಂಠಿಯ ರಸಕ್ಕೆ ಹನಿಸಿ ಬೆಲ್ಲ ಹಾಕಿ ದಿನಕ್ಕೆ ಅರ್ಧ ಔನ್ಸು ಪ್ರಕಾರ ಬೆಳಗ್ಗೆ ಸೇವಿಸುವುದು. ಹನ್ನೆರಡು ದಿನ ಸೇವಿಸುವುದರಿಂದ ಅಂಗೈ, ಅಂಗಾಲು ಬಿರಿಯುವುದು, ಆಣಿ ಬರುವುದು, ಮುಳ್ಳು ಇತ್ಯಾದಿ ಗುಣವಾಗುವುದು.

**ಕಾಲು ಸೀಳು ಸೀಳಾದರೆ:**

ಸಣ್ಣ ಜಾತಿಯ ನೀರುಳ್ಳಿ ಮತ್ತು ಜೀರಿಗೆ ಸಮಾಂಶ ತೆಗೆದು ಅದರ ಎರಡು ಪಾಲು ತುಪ್ಪ ಹಾಕಿ ಬೇರೆ ಬೇರೆಯಾಗಿ ಹುರಿದು ಒಟ್ಟು ಸೇರಿಸಿ ಅಷ್ಟೇ ಕಲ್ಲು ಸಕ್ಕರೆ ಸೇರಿಸಿ ಚೂರ್ಣ ಮಾಡಿ ದಿನಕ್ಕೆ ಒಂದು ತೊಲೆ ಪ್ರಕಾರ ಸೇವಿಸುವುದು. ಮತ್ತು ಆ ತುಪ್ಪವನ್ನೇ ಗಾಯಗಳಿಗೂ ಹಚ್ಚುವುದು. ಮೂರು ಯಾ ಆರು ದಿನ ಸೇವಿಸುವುದರಿಂದ ಪೂರ್ಣ ಗುಣವಾಗುವುದು.

**ಕಾಲಿನಲ್ಲಿ ಆಣಿ ಬೆಳೆದರೆ:**

ಹುಣಸೆಯ ಎಲೆಯನ್ನು ಜಜ್ಜಿ ಮಜ್ಜಿಗೆಯಲ್ಲಿ ಕಿವಿಚಿ ಸೋಸಿ ರಕ್ತ ವಾಳ, ಸಾಸಿವೆ, ಅಗ್ರದ ಕಾಯಿ ಇವುಗಳನ್ನು ಹಾಕಿ ಬೇಯಿಸಿ ಅರೆದು ಆಗಾಗ ಆರಿದಂತೆ ಲೇಪಿಸುತ್ತಿರಬೇಕು. ಇದರಿಂದ ಅದು ಪಕ್ವವಾಗಿ ಮಾಯವಾಗುವುದು.

ಆಣಿಯಿದ್ದ ಭಾಗದ ಕಶ್ಮಲವನ್ನು ತೆಗೆದು ಗೇರ್ಬೀಜದ ಓಡನ್ನು ಕಾಯಿಸಿ ಅದರ ಎಣ್ಣೆಯನ್ನು ಬಿಸಿಬಿಸಿಯಾಗಿ ವ್ರಣಕ್ಕೆ ಹಾಕುವುದು. ಒಂದು ಸಾರಿ ಮಾತ್ರ ಹಾಕಿದರೆ ಮಾಯುವುದು.

ಕೊಬ್ಬರಿಯ ಎಣ್ಣೆಯನ್ನು ಕಾಯಿಸಿ ಬಿಸಿಯಾಗಿ ವ್ರಣಕ್ಕೆ ಹಾಕುವುದು. ಒಂದು ದಿನ ಮಾತ್ರ ಹಾಕಿದರೆ ಗುಣವಾಗುವುದು.

ಅಂತರಗಂಗೆ ಗಿಡ ಸಮೂಲ ಅರೆದು ಮೂರು ತೊಲೆಗೆ ಒಂದು ತೊಲೆ ದನದ ಬೆಣ್ಣೆಯನ್ನು ಸೇರಿಸಿ ಚಾಳಿಸಿ ಇಟ್ಟು ಕಟ್ಟುವುದು. ಐದು ದಿನ ಸಾರು ಅನ್ನ, ಗೋಧಿ ರೊಟ್ಟಿ, ದನದ ಮಜ್ಜಿಗೆ ಇತ್ಯಾದಿ ಸಪ್ಪೆಯಾಹಾರ ಸುವೀತ್ತಾ ಪಥ್ಯದಿಂದಿದ್ದು ಈ ಔಷಧ ಸೇವಿಸಿದರೆ ಗುಣವಾಗುವುದು.

ಮರ ಕೆಸುವಿನ ಗಡ್ಡೆ, ರಾಮಚ್ಚದ ಬೇರು ಇವುಗಳನ್ನು ನಿಂಬೆಹಣ್ಣಿನ ರಸದಲ್ಲಿ ಅರೆದು ರಾತ್ರಿ ಕಾಲಿಗೆ ಲೇಪಿಸುವುದು. ಒಂದು ವಾರದಲ್ಲಿ ಗುಣವಾಗುವುದು.

ಏಲಕ್ಕಿಯ ಚೂರ್ಣ ಬೆಣ್ಣೆಯಲ್ಲಿ ಕಲಸಿ ಎರಡಾಣೆ ತೂಕದಷ್ಟು ದಿನದಲ್ಲಿ ಒಂದು ಹೊತ್ತು ಪ್ರಕಾರ ಒಂದು ಮಂಡಲಪರ್ಯಂತ ಸೇವಿಸುವುದು.

ಓಮದ ಚೂರ್ಣವನ್ನು ಸಮಾಂಶ ಸಕ್ಕರೆ ಸೇರಿಸಿ ಎರಡಾಣೆ ತೂಕವನ್ನು ದಿನದಲ್ಲಿ ಒಂದು ಹೊತ್ತಿನಂತೆ ಹನ್ನೆರಡರಿಂದ ನಲುವತ್ತೆಂಟು ದಿನವರೆಗೆ ಸೇವನೆ.

ಕರಿಮೆಣಸಿನ ಚೂರ್ಣವನ್ನು ತುಪ್ಪದಲ್ಲಿ ಕಲಸಿ ನಾಲ್ಕಾಣೆ ತೂಕ ದಿನದಲ್ಲಿ ಒಂದು ಸಾರಿ ಸೇವಿಸುವುದು. ಊಟದ ನಂತರ (12ದಿನ)

ನೆರುಗಲದ ಬೇರನ್ನು ನೀರಿನಲ್ಲಿ ತೇದು ಬೆಣ್ಣೆಯಲ್ಲಿ ಜಾಳಿಸಿ ಸೇವಿಸುವುದು.

ನೀರುಳ್ಳಿಯ ರಸಕ್ಕೆ ಜೇನು ಸೇರಿಸಿ ಪ್ರತಿದಿನವೂ ಅರ್ಧ ಔನ್ಸ್ ಪ್ರಕಾರ ಸೇವಿಸುವುದು.

**ಲೇಪಕ್ಕೆ ಮದ್ದುಗಳು:**

ಪಾತಾಳ ಗರುಡನ ಬೇರು, ಶುಂಠಿ, ಉಪ್ಪು, ಇವುಗಳನ್ನು ಸಮಾಂಶ ಸೇರಿಸಿ ಅರೆದು ಕುದಿಸಿ ಲೇಪಿಸುವುದು.

ಬೆಳುಗಲ್ಲಿನ ಚೂರ್ಣಕ್ಕೆ ಸಮಾಂಶ ಉಪ್ಪು ಸೇರಿಸಿ ನುಣ್ಣಗೆ ಅರೆದು ಬಿಸಿ ಮಾಡಿ ಬಟ್ಟೆಯಲ್ಲಿ ಕಟ್ಟಿ ಹುಣ್ಣಿಗೆ ಚೆನ್ನಾಗಿ ಸೇಕಕೊಡುವುದು. ಮತ್ತು ಅದೇ ಮದ್ದನ್ನು ಹುಣ್ಣಿಗೆ ಕಟ್ಟುವುದು. ಮೂರು ದಿನ ಮಾಡಿದರೆ ಗುಣವಾಗುವುದು.

ಅಣಲೆ ಕಾಯಿಯನ್ನು ಮಜ್ಜಿಗೆಯಲ್ಲರೆದು ಲೇಪಿಸುವುದು.

ಸಾಸಿವೆಯನ್ನು ಮಜ್ಜಿಗೆಯಲ್ಲಿ ಅರೆದು ಲೇಪಿಸುವುದು.

ಪಾಜಲೆ ಮರದ ಕೆತ್ತೆಯನ್ನು ನಿಂಬೆ ಹಣ್ಣಿನ ರಸದಲ್ಲಿ ಅರೆದು ಲೇಪಿಸುವುದು.

ಎಕ್ಕೆಯ ಬೇರನ್ನು ನೊಕ್ಕಿ ಸೊಪ್ಪಿನ ರಸದಲ್ಲಿ ಅರೆದು ಸೇವಿಸುವುದು.

ಅತ್ತಿ ಮರದ ಮೊಗ್ಗೆ ಒಂದು ತೊಲೆಯನ್ನು ಮೊಸರಿನಲ್ಲರೆದು ಬೆಳಗ್ಗೆ ಸೇವಿಸುವುದು. ಇದನ್ನು ನಲುವತ್ತೆಂಟು ದಿನ ಸೇವಿಸುವುದಲ್ಲದೆ

ಅತ್ತಿ ಮರದ ಕೆತ್ತೆಯನ್ನು ತುಪ್ಪದಲ್ಲಿ ಹುರಿದು ಅರೆದು ಲೇಪಿಸುವುದು. ಇದರಿಂದ ಶಸ್ತ್ರ ಚಿಕಿತ್ಸೆಯಿಂದಲೂ ಗುಣವಾದಗ ಅಸಾಧ್ಯವ್ರಣಗಳು ಗುಣ ವಾಗುವುವು.

ಎಮ್ಮೆ ಬೆಣ್ಣೆ ಒಂದು ಪಾಲು, ನಿಂಬೆ ಹಣ್ಣಿನ ರಸ ನಾಲ್ಕು ಯಾ ಎಂಟು ಪಾಲು ಸೇರಿಸಿ ಕಾಯಿಸಿ, ಮೊಳೆಯನ್ನು ಕೊಯಿದು ಈ ತುಪ್ಪ ವನ್ನು ಹಚ್ಚಿ ಕೊಳೆ ಸೇರದಂತೆ ಬಟ್ಟೆಕಟ್ಟುವುದು.

**ಅಂಗಾಲು ಉರಿ ಬರುವುದಿದ್ದರೆ:**

ಅಗಿಲು ಗಂಧವನ್ನು ತೇದು ಮೂರು ದಿನ ಲೇಪಿಸುವುದರಿಂದ ಗುಣ ವಾಗುವುದು.

**ಅಂಗೈ ಮತ್ತು ಅಂಗಾಲು ಉರಿಯುತ್ತಿದ್ದರೆ:**

ಚೂರಿ ಗಿಡದ ಎಲೆಯನ್ನರೆದು ಹಚ್ಚುವುದು.

ಹರಳ ಬೀಜದ ಪಪ್ಪನ್ನು ನೊರೆ ಹಾಲಲ್ಲಿ ಅರೆದು ಹಚ್ಚುವುದು.

**ಅಂಗಾಲ ಫಣಿ ಮತ್ತು ಆಣಿಗೆ:**

ಅಂತರ ಗಂಗೆಯನ್ನು ಅರೆದು ಅದರ ಮೂರನೆಯ ಒಂದು ಪಾಲು ಬೆಣ್ಣೆ ಸೇರಿಸಿ ಜಾಳಿಸಿ ಹುಣ್ಣಿಗೆ ಕಟ್ಟುವುದು. ಒಂದು ವಾರ ಹುಳಿ, ಮೆಣಸು, ಸಂಭಾರಗಳನ್ನು ಬಿಟ್ಟು, ಸಾರು ಅನ್ನ, ಮೆತ್ತೆದೋಸೆ, ರೊಟ್ಟಿ, ದನದ ಮಜ್ಜಿಗೆ, ತುಪ್ಪ ಇತ್ಯಾದಿಗಳನ್ನು ಸೇವಿಸುತ್ತಾ ಪಥ್ಯದಿಂದಿದ್ದು ಈ ಔಷಧ ಮಾಡಿಕೊಂಡರೆ ಗುಣವಾಗುವುದು.

**ಕಲ್ಲೊತ್ತಾದರೆ:**

ಕಡು ಕಾರೆ ಬೇರನ್ನು ಉಪ್ಪು ನೀರಿನಲ್ಲಿ ತೇದು ಕುದಿಸಿ ಆರಿದಂತೆ ಲೇಪಿಸುತ್ತಿದ್ದರೆ ಬೇಗನೆ ಗುಣವಾಗುವುದು.

**ಪುನಃ ಪುನಃ ಬರುವ ಕಲ್ಲೊತ್ತಿನ ವ್ರಣಕ್ಕೆ:**

ಕಂಚು ಕಾರೆ ಬೇರನ್ನು ಉಪ್ಪು ನೀರಿನಲ್ಲಿ ತೇದು ಲೇಪಿಸುವುದು.

**ಕಲ್ಲೊತ್ತಾಗಿ ಕೀವಾದರೆ:**

ಇಟ್ಟೋವಿನ ಚಿಗುರನ್ನು ಉಪ್ಪು ಸೇರಿಸಿ ಅರೆದು ಆರಿದಂತೆ ಲೇಪಿಸುವುದು.

**ಕಲ್ಲೊತ್ತಿನ ಬಾವು ಉಬ್ಬಿ ಇದ್ದರೆ:**

ಸುಗಂಧಿಯ ಬೇರನ್ನೂ ಇಟ್ಟೋವಿ (ಇಬ್ಬನೆ ಗಿಡ)ದ ಚಿಗುರನ್ನೂ ನೊರೆ ಹಾಲಿನಲ್ಲಿ ಅರೆದು ಪದೇ ಪದೇ ಲೇಪಿಸಿದರೆ ಶೀಘ್ರವಾಗಿ ಗುಣವಾಗುವುದು.

**ಉಗುರು ಸುತ್ತಿಗೆ:**

ಕರಿ ಮೆಣಸನ್ನು ಎಮ್ಮೆ ಹಾಲಿನಲ್ಲಿ ಅರೆದು ಮೆತ್ತಿ ಕಟ್ಟುವುದು.

ಅರಸಿನ ಹುಡಿ ಮತ್ತು ಸುಣ್ಣವನ್ನು ಸಮಾಂಶವಾಗಿ ಸೇರಿಸಿ ಚೆನ್ನಾಗಿ ಜಾಳಿಸಿ ದಪ್ಪವಾಗಿ ಲೇಪಿಸುವುದು. ಆರಾರ ಲೇಪಹಾಕುತ್ತಿರಬೇಕು.

ಕಹಿಬೇವಿನ ಸೊಪ್ಪು ಉಪ್ಪು ಸೇರಿಸಿ ಅರೆದು ತುಪ್ಪ ಹಾಕಿ ಬಿಸಿ ಮಾಡಿ ಬೆರಳನ್ನು ಅವರೊಳಗೆ ಸಿಕ್ಕಿಸಿಡುವುದು.

ನಿಂಬೆ ಹಣ್ಣನ್ನು ಆ ಬೆರಳಿಗೆ ಹದವಾಗುವಂತೆ ತೂತು ಕೊರೆದ ಬೆರಳನ್ನು ಅದರೊಳಗೆ ಸಿಕ್ಕಿಸಿಡುವುದು.

ಮುಂಡಿ ಗೆಣಸಿನ ಕೈದಂಡು ತೂತು ಕೊರೆದು ನೋವಿನ ಬೆರಳನ್ನು ಅದರೊಳಗೆ ಸಿಕ್ಕಿಸಿಡುವುದು.

ಪೊಂಗಾರವನ್ನು ಬೆಂಕಿಯಲ್ಲಿಟ್ಟು ಅರಳು ಮಾಡಿ ನಿಂಬೆ ಹುಳಿಯ ರಸದಲ್ಲಿ ಕರಗಿಸಿ ಲೇಪಿಸುವುದರಿಂದ ಲೂತಿ ಹುಣ್ಣು ಸಹ ಗುಣವಾಗುವುದು.

ಹಸಿಯರಸಿನ ರಸದಿಂದ ಅಣಲೆಕಾಯಿಯನ್ನು ಕಬ್ಬಿಣದಲ್ಲಿ ತೇದು ಬಿಸಿ ಮಾಡಿ ಆರಿದಂತೆ ಲೇಪ ಹಾಕಿದರೆ ಗುಣವಾಗುವುದು.

**ಬೆರಳುಗಳ ತುದಿಯಲ್ಲಿ, ಉಗುರ ಬುಡದಲ್ಲಿ ಬರುವ ಕೆಲ್ಲಿಗೆ:**

ಚಿತ್ರಮೂಲದ ಹಸಿ ಬೇರನ್ನು ಖೊಬರಿಯ ಎಣ್ಣೆಯಲ್ಲಿ ಅರೆದು ಕಾಯಿಸಿ ಕರಿ ಮಾಡಿ ಮರ್ದಿಸಿ ಕೆಲ್ಲಿಗೆ ಹಾಕುವುದು. ಮೂರು ಯಾ ಆರು ದಿನ ಹಾಕುವುದರಿಂದ ಸಂಪೂರ್ಣ ಗುಣವಾಗುವುದು.

ದನದ ತುಪ್ಪವನ್ನು ಪ್ರತಿದಿನವೂ ಹಚ್ಚುತ್ತಿರುವುದು. ತಿಂಗಳ ಪರಿಯಂತ ಹಚ್ಚುತ್ತಿದ್ದರೆ ಗುಣವಾಗುವುದು.

ಜೇಡೆಮುಳ್ಳಿನ ಬೇರನ್ನು ಕಲಗಚ್ಚಿನಲ್ಲಿ ಯಾ ನೀರಿನಲ್ಲಿ ತೇದು ಆರಿದಂತೆ ಮೂರು ವಾ ಅರು ದಿನ ಲೇಪಿಸುತ್ತಿದ್ದರೆ ಗುಣವಾಗುವುದು.

ಕೆಂಪುತ್ತುರಣೆ ಸಮೂಲ ತಂದು ತೆಂಗಿನ ಎಣ್ಣೆಯಲ್ಲಿ ಕಾಯಿಸಿ ಕರಿ ಮಾಡಿ ಅದರಲ್ಲೇ ಸಣ್ಣಗೆ ಅರೆದು ಹಚ್ಚುವುದರಿಂದ ಕೆಲ್ಲು, ಹುಣ್ಣು, ಬೆರಳ ತುದಿಯಲ್ಲಿ ಬರುವ ಕೊಳೆ ಹುಣ್ಣು ಸಹ ಗುಣವಾಗುವುದು.

ಕೆಲ್ಲುಪ್ಪಾಲೆ ಗಿಡದ ಹಾಲು ಪ್ರತಿದಿನವೂ ಹಾಕುತ್ತಿದ್ದರೆ ಗುಣವಾಗುವುದು.

ತಾಮ್ರದ ತಟ್ಟೆಯಲ್ಲಿ ತೆಂಗಿನ ಕಾಯಿ ಹಾಲು ಹಾಕಿರಿಸಿ ಬರುವ ಕಿಲುಬು ಹಚ್ಚಿದರೆ ಗುಣವಾಗುವುದು.

**ವಿಶೇಷ ಸಲಹೆ:**

ಕೆಲ್ಲು ಇಳಿಯುವ ಉಗುರಿನ ಎರಡೂ ಮೂಲೆಗಳನ್ನು ಕತ್ತರಿಸದೆ ಮೇಲಕ್ಕೆ ಬರಲು ಬಿಟ್ಟು ಉಗುರಿನ ಮಧ್ಯಭಾಗವನ್ನು ಹರಿತವಾದ ಚೂರಿಯಿಂದ ಕೆರೆದು ಬಿಟ್ಟರೆ ಕೆಲ್ಲು ಇಳಿಯುವುದು ನಿಲ್ಲುವುದು.

**ಕಾಲಿನಡಿಯಲ್ಲಿ ಆಗುವ ಗೆದ್ದಲು ಹುಣ್ಣಿಗೆ ಮತ್ತು ಆಣಿಗೆ ಸಹ:**

ಪಾತಾಳ ಗರುಡನ ಬೇರು ಮತ್ತು ಹೊಗೆ ಕರಿ ಇವೆರಡನ್ನೂ ಸಮಾಂಶ ಸೇರಿಸಿ ಗೋಮೂತ್ರದಲ್ಲಿ ಅರೆದು ಕುದಿಸಿ ಲೇಪಿಸಿದರೆ ಗುಣವಾಗುವುದು.

ಮಣ್ಣು ಸಾರಿಸಿದ ನೆಲದ ಮೇಲೆ ಸ್ವಲ್ಪ ಗೆರಟೆಯ ಕೆಂಡವನ್ನು ಹಾಕಿ ಅದಕ್ಕೆ ಅರಸಿನ ಪುಡಿಯನ್ನು ಹಾಕಿ ಅದರ ಮೇಲೆ ಸೇಮಿಗೆಯ ಅಂಡೆಯನ್ನು ಕವಚಿ ಹಾಕುವುದು. ಅದರ ತೂತುಗಳಿಂದ ಮೇಲಕ್ಕೆ ಬರುವ ಹೊಗೆಗೆ ಕಾಲನ್ನು ಬೆವರುವಷ್ಟು ಸಮಯ ಒಡ್ಡುವುದು. ದಿನದಲ್ಲಿ ಒಂದು ಸಾರಿಯಂತೆ ಒಂದು ವಾರ ಹಿಡಿಯುವುದರಿಂದ ಹುಣ್ಣು ಮತ್ತೆ ಹಿಂದಿರುಗಿ ಬಾರದಂತೆ ಗುಣವಾಗುವುದು.

**ಬೆರಳುಗಳಲ್ಲಾಗುವ ಕುರಕ್ಕೆ:**

ನುಗ್ಗೆ ಮರದ ಬೇರನ್ನು ಮಜ್ಜಿಗೆಯಲ್ಲರೆದು ಪದೇ ಪದೇ ಲೇಪಿಸಿದರೆ ಶೀಘ್ರವಾಗಿ ಗುಣವಾಗುವುದು.

**ಕುರವು ಸೋರಿದರೆ:**

ಹಳೆಯದಾದ ದನದ ತುಪ್ಪ ಹನ್ನೆರಡು ತೊಲೆ, ಬೆಳ್ಳುಳ್ಳಿಯ ಬೇಳೆ ನಾಲ್ಕು, ಪಂಚಬಳ್ಳಿ ವೀಳ್ಯದೆಲೆ ನಾಲ್ಕು ಇವುಗಳನ್ನು ಚೆನ್ನಾಗಿ ಕಾಯಿಸಿ ಕರಕಾಗುವಂತೆ ಹುರಿದು ಇಳಿಸಿ ಸಣ್ಣಗೆ ಅರೆದು ಕೊಳಂಬು ಮಾಡಿ ಹಚ್ಚುವುದು.

**ಬೆರಳಕುರ ಮತ್ತು ಹುಣ್ಣುಗಳಿಗೆ:**

ಜೇಡೆ ಮುಳ್ಳಿನ ಬೇರನ್ನೂ, ಕಾರೆಬೇರನ್ನೂ ಕಲಗಚ್ಚಿನಲ್ಲರೆದು ಬಿಡದೆ ಲೇಪಿಸುವುದರಿಂದ ಬಾವು ಸಹ ಗುಣವಾಗುವುದು.

**ಬೆರಳುಗಳ ಎಡೆಯಲ್ಲಿ ಹುಣ್ಣಾದರೆ:**

ಕುಂಕುಮಕ್ಕೆ ತೆಂಗಿನ ಎಣ್ಣೆ ಹಾಕಿ ಕಾಯಿಸಿ ಆ ಎಣ್ಣೆ ಲೇಪಿಸುವುದು.

**ಕೈ ಮತ್ತು ಕಾಲುಗಳ ಬೆರಳುಗಳಲ್ಲಾಗುವ ಹುಣ್ಣಿಗೆ:**

ಪಾಜಳೆ ಕೆತ್ತೆಯನ್ನು ತೆಂಗಿನಕಾಯಿಯ ಹಾಲಲ್ಲಿ ಅರೆದು ಬಿಸಿಲಿನಲ್ಲಿಟ್ಟು, ಮೇಲೆ ನೆಗೆದು ನಿಂತ ಎಣ್ಣೆಯನ್ನು ಲೇಪಿಸುವುದು.

**ಕೈಕಾಲು ಮತ್ತು ಬೆರಳುಗಳಲ್ಲಿ ಬರುವ ಹುಣ್ಣಿಗೆ:**

ಕಿಸ್ಕಾರದ ಬೇರನ್ನೂ ಕೊಂದೆ ಕೆತ್ತೆಯನ್ನೂ ತೆಂಗಿನ ಕಾಯಿಯ ಹಾಲಿನಲ್ಲಿ ಅರೆದು ಲೇಪಿಸಿದರೆ ಬೆರಳಿನ ಎಡೆಯಲ್ಲಿ ಬರುವ ಹುಣ್ಣು ಸಹ ಗುಣವಾಗುವುದು.

**ಕೈಕಾಲುಗಳಲ್ಲಿ ಬರುವ ವ್ರಣಗಳಿಗೆ:**

ಅತ್ತಿ ಕೆತ್ತೆಯನ್ನು ತುಪ್ಪದಲ್ಲಿ ಹುರಿದು ಅರೆದು ಲೇಪಿಸುವುದು ಹಿತ

ಗರಿಕೆ ಹುಲ್ಲನ್ನು ತುಪ್ಪದಲ್ಲಿ ಹುರಿದು ಕರಕು ಮಾಡಿ ಅದರಲ್ಲೇ ಅರೆದು ಲೇಪಿಸುವುದು.

**ಶಾಖಾಗತ ರೋಗಕ್ಕೆ:**

ಕೊಂದೆ ಕೆತ್ತೆ, ಅಣಲೆಕಾಯಿ ಸಿಪ್ಪೆ, ಸುಗಂಧಿಯ ಬೇರು, ಎದೊಳ್ರಿ ಕೆತ್ತೆ' ಭದ್ರಮುಷ್ಟಿಗಡ್ಡೆ. ಕಾಡು ಪಡುವಲ (ಕಹಿ ಪಡುವಲ) ಇವುಗಳ ಅಷ್ಟಾವಶೇಷ ಕಷಾಯ ಮಾಡಿ ಚೆನ್ನಾಗಿ ತಣಿಸಿ ಜೇನು ಮೇಲ್ಪುಡಿ ಹಾಕಿ ದಿನದಲ್ಲಿ ಎರಡು ಹೊತ್ತು ಸೇವನೆ. ಹೀಗೆ ಹನ್ನೆರಡು ದಿನ ಸೇವಿಸುವುದರಿಂದ ಗುಣವಾಗುವುದು.

**ಕೈಕಾಲುಗಳಲ್ಲಿ ಬರುವ ದದ್ದು ಬಿರುಕು ಇತ್ಯಾದಿಗಳಿಗೆ:**

ಅಣಲೆಕಾಯಿ ಸಿಪ್ಪೆಯನ್ನು ವಸ್ತ್ರಗಾಳಿತ ಚೂರ್ಣ ಮಾಡಿ ತುಪ್ಪದಲ್ಲಿ ಕಲಸಿ ಲೇಪಿಸುವುದು.

ದನದ ಬೆರಣೆಯನ್ನು ಮಸಿ ಮಾಡಿ ಜೇನಿನಲ್ಲಿ ಅರೆದು ಲೇಪಿಸುವುದು.

**ಕಾಲಿನಲ್ಲಿ ಬರುವ ಮೊಳೆ ಯಾ ಇತರ ಗ್ರಂಥಿಗಳಿಗೆ:**

ಇಂದುಪ್ಪು ಮತ್ತು ಕರಿಮೆಣಸು ಸಮಾಂಶ ಸೇರಿಸಿ ಅರೆದು ಒಂದು ತೊಲೆಯಷ್ಟು ಸೇವಿಸುವುದು ಮತ್ತು ಅದನ್ನೇ ಲೇಪಿಸುವುದು.

**ಕಾಲಿನ ಊದು ಮತ್ತು ಬಾವುಗಳಿಗೆ:**

ನೀಲಿಯ ಗಿಡದ ಎಲೆಯನ್ನು ಸ್ವಲ್ಪ ನೀರು ಸೇರಿಸಿ ಸಣ್ಣಗೆ ಅರೆದ ಅರಿದಂತೆ ಲೇಪಿಸುತ್ತಿದ್ದರೆ ಗುಣವಾಗುವುದು.

**ಪ್ರಾಯಸ್ಥರ ಪಾದಗಳಲ್ಲಿ ನೀರು ಬಂದರೆ:**

ಆನೆಮುಂಗಿನ ಕೆತ್ತೆಯನ್ನು ಜಜ್ಜಿ ಮಜ್ಜಿಗೆಯಲ್ಲಿ ಕುದಿಸಿ ಸೋಸಿ ಮಜ್ಜಿಗೆಯನ್ನು ಅನ್ನಕ್ಕೆ ಕಲಸಿ ಉಣ್ಣುವುದು.

ಹಣ್ಣಾದ ಬಾಳೆಗೊನೆಯಿಂದ ಹಣ್ಣುಗಳನ್ನು ತೆಗೆದು ಬರಿಯ ಗೊನೆಯನ್ನು ಸಣ್ಣ ಕತ್ತರಿಸಿ ಒಂದು ಮಡಕೆಯಲ್ಲಿ ಹಾಕಿ ಭದ್ರವಾಗಿ ಮುಚ್ಚಿ ಒಲೆಯಲ್ಲಿರಿಸಿ ಭಸ್ಮಮಾಡಿ ವಸ್ತ್ರದಲ್ಲಿ ಗಾಳಿಸಿಟ್ಟುಕೊಂಡು ಒಂದು ಚಿಟಿಕೆ ಭಸ್ಮವನ್ನು ನೆಲ್ಲಿಕಾಯಿಯಷ್ಟು ಬೆಲ್ಲದಲ್ಲಿ ಕಲಸಿ ರಾತ್ರಿ ಒಂದು ಹೊತ್ತಿನಂತೆ ಆರು ದಿನ ಸೇವಿಸುವುದರಿಂದ ಶೋಫ, ಉದರ್ದ ಮತ್ತು ಗುಲ್ಮ ಶೂಲೆಯು ಸಹ ಗುಣವಾಗುವುದು.

**ತಳರೋಗಕ್ಕೆ:**

ಅರಸಿನ, ಉಪ್ಪು, ಬೆಳ್ಳುಳ್ಳಿ, ಭಜೆ, ಸಾಸಿವೆ, ಶುಂಠಿ, ಕರಿಮೆಣಸು. ಉಮ್ಮತ್ತದಕಾಯಿ ಇವುಗಳನ್ನು ಗಂಜಿ ತೆಳಿಯಲ್ಲಿ ಅರೆದು ಲೇಪಿಸುವುದು. ಇದರಿಂದ ಬೆರಳುಗಳ ಎಡೆಯಲ್ಲಿ ಬರುವ ವಾಸನೆಯಿಂದ ಕೂಡಿದ ಹುಣ್ಣು (ತಳರೋಗ) ಗುಣವಾಗುವುದು.

ಬೂದಿ ಕುಂಬಳದ ಎಲೆಯನ್ನು ನೆರಳಿನಲ್ಲಿ ಒಣಗಿಸಿ ಭಸ್ಮ ಮಾಡಿ, ಎಮ್ಮೆಯ ಬೆಣ್ಣೆಯಲ್ಲಿ ಕಲಸಿ ಆಗಾಗ ಲೇಪಿಸುವುದರಿಂದ ಗುಣವಾಗುವುದು.

ಆನೆಮುಂಗಿನ ಕೆತ್ತೆಯನ್ನು ಹಸಿಯರಸಿನದ ರಸದಲ್ಲಿ ತಿರೆದು ಎಮ್ಮೆಯ ಬೆಣ್ಣೆ ಹಾಕಿ ಜಾಳಿಸಿ ಲೇಪಿಸುವುದು.

**ತಳರೋಗವು ದೀರ್ಘ ಕಾಲದ್ದಾಗಿದ್ದರೆ:**

ಕುಂಬಳ ಮರದ ಕೆತ್ತೆ, ಏಕನಾಯಕನ ಬೇರಿನಕೆತ್ತೆ ಸಮಾಂಶ ಸೇರಿಸಿ ಜಜ್ಜಿ ಹಾಕಿ ಮದ್ದಿನ ಗಂಜಿ ಮಾಡಿ ನೊರೆ ಹಾಲು ಹಾಕಿ ಪ್ರತಿದಿನ ಬೆಳಗ್ಗೆ ಒಂದು ವಾರ ಉಣ್ಣುವುದರಿಂದ ಗುಣವಾಗುವುದು.

ಭಜೆ, ಬೆಳ್ಳುಳ್ಳಿ, ತ್ರಿಕಟು, ಹಳದಿ ಧತ್ತೂರ (ಉಮ್ಮತ್ತೆ)ದ ಕಾಯಿ ಇವುಗಳನ್ನು ಸಮಾಂಶ ಸೇರಿಸಿ ಧಾನ್ಯಾಮ್ಲದಲ್ಲರೆದು ಲೇಪಿಸುವುದು ಹಿತ.

**ಕಂಕುಳ ಹುಣ್ಣಿಗೆ:**

ಟಂಕಣಖಾರವನ್ನು ಅರಳು ಮಾಡಿ ಚೂರ್ಣಿಸಿ ಹುಣ್ಣಿಗೆ ಹಾಕುವುದರಿಂದ ಗುಣವಾಗುವುದು.

**ಕಂಕುಳ ಕುರಕ್ಕೆ:**

ಜೀಕೆಕೋಡು, ಅಮೆಚಿಪ್ಪು, ಆನೆಯ ಎಲುಬು, ಕಂಕುಷ್ಠ ಮತ್ತು ಜೀರಿಗೆ ಈ ನಾಲ್ಕರ ಪೈಕಿ ಯಾವುದಾದರೊಂದನ್ನು ಮಜ್ಜಿಗೆಯಲ್ಲರೆದು. ಲೇಪಿಸುವುದು. ಮತ್ತು—

ಕಂಕುಷ್ಠ ಮತ್ತು ಜೀರಿಗೆ ಇವುಗಳ ಅಷ್ಟಾವಶೇಷ ಕಷಾಯ ಮೂರು ದಿನ ಸೇವನೆ.

ಕಿರಿಸೀಸ ಮತ್ತು ಗೇರುಕಾಯಿ ಇವುಗಳನ್ನು ನಿಂಬೆ ಹಣ್ಣಿನ ರಸದಲ್ಲಿರೆದು ಮೂರು ದಿನ ಲೇಪಿಸಿದರೆ ಗುಣವಾಗುವುದು.

**ಕಾಲಿನಲ್ಲಿ ನರಗಳು ಸೆಳೆಯುವುದಿದ್ದರೆ:**

ನುಗ್ಗೆ ಮರದ ಕೆತ್ತೆಯನ್ನು ಒಂದು ಚಿಟಿಕೆ ಜೀರಿಗೆ ಸೇರಿಸಿ ಅರೆದು ಬಿಸಿಮಾಡಿ ಲೇಪಿಸುವುದು.

**ಚಿಲಂದಿ ಹುಣ್ಣಿಗೆ:**

ಆನೆಲದ್ದಿಯ ರಸವನ್ನು ಮೂರು ದಿನ ಸೇವಿಸುವುದು ಮತ್ತು ಲೇಪಿಸುವುದರಿಂದ ಗುಣವಾಗುವುದು.

# ಕ್ರಿಮಿದೋಷ ನಿವೃತ್ತಿ

**ಕ್ರಿಮಿಬಾಧೆಗೆ:**

ಗೋಳಿಬೀಣಿನ ರಸ ಒಂದು ಔನ್ಸು ಮತ್ತುಜೇನು ಒಂದು ಚಮಚ ಸೇರಿಸಿ ಪ್ರತಿದಿನ ಬೆಳಗ್ಗೆ ಸೇವಿಸುವುದು. ಮೂರು ದಿನ ಸೇವಿಸುವುದರಿಂದ ಗುಣವಾಗುವುದು.

ಬಳಂಗದ ಬೇರಿನ ಕೆತ್ತೆಯನ್ನು ಮದ್ದಿನ ಗಂಜಿ ಮಾಡಿ ಮಜ್ಜಿಗೆ ಹಾಕಿ ಬೆಳಗ್ಗೆ ಉಣ್ಣುವುದು. ಮೂರು ದಿನ ಉಣ್ಣುವುದರಿಂದ ಉದರ ಕ್ರಿಮಿ, ಮಲಕ್ರಿಮಿ ಇತ್ಯಾದಿ ಕ್ರಿಮಿಗಳೆಲ್ಲಾ ನಿರ್ನಾಮವಾಗಿ ಹೋಗುವುದು.

ಗಿಜಿ ಗಿಜಿ ಕಾಯಿ ಗಿಡದ ಎಲೆಯನ್ನು ಉಪ್ಪು ಸೇರಿಸಿ ಅರೆದು ಒಂದೂ ವರೆ ತೊಲೆಯಷ್ಟು ಸೇವಿಸಿದರೆ ಕ್ರಿಮಿಬಾಧೆಯು ನಿವಾರಣೆಯಾಗುವುದು

ಕಹಿಬೇವಿನ ಚಿಗುರನ್ನೂ ಓಮವನ್ನೂ ಸಮಾಂಶ ಸೇರಿಸಿ ಚೂರ್ಣ ಮಾಡಿ ಜೇನಿನಲ್ಲಿ ಕಲಸಿ ನೆಕ್ಕುವುದು. ಒಂದು ವಾರ ಸೇವಿಸುವುದರಿಂದ ಎಲ್ಲಾ ವಿಧದ ಕ್ರಿಮಿಬಾಧೆಯು ನಿವೃತ್ತಿಯಾಗುವುದು.

**ಮಲಕ್ರಿಮಿಗೆ:**

ತುಂಬೆ ಗಿಡದ ಎಲೆ, ಪಾಂಡೇಲು ಗಿಡದ ಎಲೆ ಇವುಗಳನ್ನು ಸಮಾಂಶ ಸೇರಿಸಿ ಬೆಳ್ತಿಗೆ ಅಕ್ಕಿ ಹಾಕಿ ಗಂಜಿ ಮಾಡಿ ಅದರತೆಳಿಯನ್ನು ಕುಡಿಯುವುದು ಹಿತ.

ತುಂಬೆಯ ಬೇರು ಎರಡು ತೊಲೆಯನ್ನು ಜಜ್ಜಿ ಅರ್ಧ ಕುಡ್ತಿ ಮಜ್ಜಿಗೆಯಲ್ಲಿ ಹಾಕಿ ಕುದಿಸಿ ಸೋಸಿ ಬೆಳಗ್ಗೆ ಸೇವಿಸುವುದು. ಮೂರು ದಿನ ಸೇವಿಸಿದರೆ ಗುಣವಾಗುವುದು.

ವಿಶಾಲರಿ ಚೂರ್ಣವನ್ನು ಮಜ್ಜಿಗೆಯಲ್ಲಿ ಹಾಕಿ ಕುದಿಸಿ ಬಿಸಿಯಾಗಿ ಸೇವಿಸಿದರೆ ಮಲಕ್ರಿಮಿಯು ನಾಶವಾಗುವುದು.

ಕಾಡುಕೇಸೆಗಡ್ಡೆ ಮತ್ತು ಅರಿಸಿನಗಡ್ಡೆ ಒಂದೊಂದು ತೊಲೆ ಪ್ರಕಾರ ಸೇರಿಸಿ ಜಜ್ಜಿ ಅರ್ಧಕುಡ್ತೆ ಮಜ್ಜಿಗೆಯಲ್ಲಿ ಹಾಕಿ ಚೆನ್ನಾಗಿ ಕುದಿಸಿ ಸೋಸಿ ಸೇವಿಸುವುದು. ಹೀಗೆ ಮೂರು ದಿನ ಸೇವಿಸಿದರೆ ಕಿಲುಬೆ ಹುಳದ ಬಾಧೆ ನಿವೃತ್ತಿಯಾಗುವುದು. ಮಾತ್ರವಲ್ಲದೆ ಕೃಮಿಕುಲವೇ ನಿರ್ಮೂಲ ವಾಗುವುದು.

ವಿಶಾಲರಿಯ ಚೂರ್ಣ ಅರ್ಧ ತೊಲೆಗೆ ಅಷ್ಟೇ ಸಕ್ಕರೆ ಸೇರಿಸಿ ರಾತ್ರಿ ಊಟದ ನಂತರ ಸೇವಿಸಿ ಬೆಳಗ್ಗೆ ಒಂದು ಔನ್ಸು ಹರಳೆಣ್ಣೆ ಕುಡಿದರೆ ಭೇದಿ ಯಾಗಿ ಕಿಲಾಮಿಹುಳದ ಕುಟುಂಬವೇ ಬಿದ್ದು ಹೋಗುವುದು.

ಅರ್ಧ ಅಥವಾ ಒಂದು ಕುಡ್ತೆ ಹಾಗಲ ಸೊಪ್ಪಿನ ರಸಕ್ಕೆ ಸಮಾಂಶ ತೆಂಗಿನ ಕಾಯಿಯ ತನಿಹಾಲನ್ನು ಸೇರಿಸಿ ಕುದಿಸಿ ಸೇವಿಸಿದರೆ ಕೃಮಿ ಭೇದಿ ಯಾಗಿ ಹೋಗುವುದು. ಹದಿನೈದು ದಿನಗಳಿಗೊಮ್ಮೆಯಂತೆ ಮೂರು ಸರ್ತಿ ಸೇವಿಸಿದರೆ ನಿಶ್ಶೇಷವಾಗಿ ಪರಿಹಾರವಾದೀತು.

**ಮಕ್ಕಳಿಗೆ ಎರೆಹುಳ (ಉದರಕೃಮಿ) ತುಂಬಿದರೆ:**

ಕೊಜಂಬೆ ಸೊಪ್ಪನ್ನು ಇಂದುಪ್ಪು ಸೇರಿಸಿ ಅರೆದು ನಾಭಿಯ ಸುತ್ತಲೂ ಲೇಪ ಹಾಕಿದರೆ ಹುಳ ಹೋಗುವುದು.

ಈಂದಿನ ಮರದ ಐದಾರು ಹಣ್ಣುಗಳನ್ನು ಜಜ್ಜಿ ಮೊದಲನೆಯ ದಿನ ರಾತ್ರಿ ಮಜ್ಜಿಗೆಯಲ್ಲಿ ಹಾಕಿ ಭದ್ರವಾಗಿರಿಸಿ ಬೆಳಗ್ಗೆ ಕಿವಿಚಿ ಸೋಸಿ ಸೇವಿಸಿ ದರೆ ಎರೆಯು ತಾನಾಗಿ ಹೋಗುವುದು. ಮೂರು ದಿನ ಸೇವಿಸಿದರೆ ಎರೆಯು ಸಂಪೂರ್ಣ ಬಿದ್ದು ಹೋಗಿ ಸುಖವಾಗುವುದು.

ವೈತ ಬಳ್ಳಿಯ ರಸವನ್ನು ಅರ್ಧ ಕುಡ್ತೆ ಪ್ರಕಾರ ಮೂರು ದಿನ ಬೆಳಗ್ಗೆ ಸೇವಿಸಿದರೆ ಎರೆಹುಳವು ಸೀದಾ ಹೋಗುವುದು.

ನೀರ್ಪಾಜೆ ಮರದ ಮೇಣವನ್ನು ಬಿಸಿ ನೀರಿನಲ್ಲಿ ಕದಡಿ ಸೇವಿಸಿದರೆ ಅಪಾಯವಿಲ್ಲದೇನೇ ಎರೆಯು ಭೇದಿಯೊಡನೆ ಹೋಗುವುದು.

**ರಕ್ತಗತ ಕೃಮಿಗೆ (ಮೈಮೇಲೆ ಕೃಮಿ ಹರಿಯುವಂತಾಗುವುದು):**

ಕಾಳುಜೀರಿಗೆಯನ್ನು ನಿಂಬೆಹಣ್ಣಿನ ರಸದಲ್ಲಿ ಅರೆದು ಆರಿದಂತೆ ಮೈ ಸರ್ವಾಂಗಕ್ಕೂ ಲೇಪಿಸಿ ಮಿಂದರೆ ಹೊರಗಿನ ಹಾಗೂ ಒಳಗಿನ ರಕ್ತಗತ ಕೃಮಿಗಳು ಕೂಡಾ ನಾಶವಾಗಿ ಗುಣವಾಗುವುದು.

**ತಲೆಯೊಳಗೆ ಕೃಮಿ ಕಚ್ಚಿದಂತಾಗುವುದಿದ್ದರೆ:**

ವಿಶಾಲರಿ ಚೂರ್ಣವನ್ನು ಕಪ್ಪು ಬಣ್ಣದ ಆಡಿನ ಮೂತ್ರದಲ್ಲಿ ಅರೆದು ಮೂಗಿನ ಎರಡು ಸೊಳ್ಳೆಗಳಿಗೂ ನಸ್ಯ ಹಾಕಿದರೆ ಶಿರೋಗತ ಕೃಮಿಯು ನಾಶವಾಗುವುದು.

**ಕೃಮಿಕುಲ ನಾಶಕ್ಕೆ:**

ಕಹಿ ಬೇವಿನ ಎಣ್ಣೆಯ ನಸ್ಯ, ಪಾನ ಹಾಗೂ ಲೇಪಗಳಿಂದ ಶರೀರದ ಕೃಮಿಗಳೂ ನಾಶವಾಗುವುವು.

**ಮಕ್ಕಳ ಎರೆಗೆ:**

ತಗ್ಗಿ ಬೇರಿನ ಕೆತ್ತೆಯನ್ನು ಉಪ್ಪಿನಲ್ಲಿ ಹುಗಿದಿಟ್ಟು ಒಂದು ಘಂಟೆಯ ನಂತರ ಹುರಿದು ಮೊಸರಿನಲ್ಲಿ ಅರೆದು ಕುಡಿಸುವುದು.

ಬಿದಿರಿನ ಕಳಿಲೆಯ ರಸ ಒಂದು ಚಮಚ, ಹಸಿಯರಸಿನ ರಸ ಒಂದು ಚಮಚ ಸೇರಿಸಿ ಒಂದು ಸಣ್ಣ ಬಿಲ್ಲೆ ಆರತಿಕರ್ಪೂರವನ್ನು ನುಣ್ಣಗೆ ಪುಡಿ ಮಾಡಿ ಆ ರಸದಲ್ಲಿ ಕದಡಿಸಿ ರಾತ್ರಿ ಊಟದ ನಂತರ ಕುಡಿಸುವುದು. ಕುಡಿಸಿದ ಮೂರನೆಯ ದಿನದಿಂದ ಮತ್ತಿನ ಮೂರು ದಿನಗಳಲ್ಲಿ ಎರೆಗಳು ತಾನಾಗಿ ಬಿದ್ದು ಹೊಗುವುವು. ಮಧುರಾಹಾರವನ್ನು ಸೇವಿಸದೆ ಆರು ದಿನ ಪಥ್ಯದಲ್ಲಿರಬೇಕು. ಪ್ರಾಯಕ್ಕೆ ತಕ್ಕಂತೆ ಹದವರಿತು ಕೊಡಲು ತಿಳಿದಿರುವುದು ಅವಶ್ಯವಾಗಿದೆ.

ಹೂಬಾಳೆಯ ಬೇರು ಒಂದು ತೊಲೆ ನುಣ್ಣಗೆ ಅರೆದು ನೊರೆ ಹಾಲಿನಲ್ಲಿ ಕದಡಿ ಬೆಳಗ್ಗೆ ಸೇವಿಸುವುದು. ಇದರಿಂದ ಮಕ್ಕಳ ಎರೆಹುಳ ನಿವೃತ್ತಿಯಾಗುವುದು.

**ಮಕ್ಕಳ ಕೃಮಿಬಾಧೆಗೆ (ಬಾಲಕರಿಗೆ):**

ತಗ್ಗಿ ಬೇರನ್ನು ನೀರಿನಲ್ಲಿ ತೇದು ನೆಕ್ಕಿಸಿದರೆ ಜೀರ್ಣಶಕ್ತಿ ಸರಿಯಾಗಿ ಕೃಮಿಬಾಧೆ ನಿವೃತ್ತಿಯಾಗುವುದು.

ತ್ರಿಫಲೆ, ಇಲಿಕಿವಿಗಿಡ, ನುಗ್ಗೆಬೇರಿನ ಕೆತ್ತೆ ಇವುಗಳ ಅಷ್ಟಮಾಂಶ ಕಷಾಯ ತಯಾರಿಸಿ ವಿಶಾಲರಿ ಚೂರ್ಣ ಮೇಲ್ಪುಡಿ ಹಾಕಿ ದಿನದಲ್ಲಿ ಎರಡು

ಹೊತ್ತು ಪ್ರಕಾರ ತಾಯಿ ಕುಡಿದರೆ ಮೊಲೆ ತಿನ್ನುವ ಮಕ್ಕಳ ಉದರಕೃಮಿ ಮತ್ತು ಮಲಕೃಮಿಗಳು ನಾಶವಾಗುವುವು.

ಪಂಚಪತ್ರೆ ಗಿಡವ ಸಮೂಲ ಸ್ವಚ್ಛಪಡಿಸಿ ಒಂದು ತೊಲೆಯಷ್ಟನ್ನು ತಣ್ಣೀರಿನಲ್ಲಿ ಅರೆದು ಕದಡಿ ಕುಡಿಸಿದರೆ ಕೃಮಿಯು ತಾನಾಗಿ ಹೋಗುವುದು.



ಚೆನ್ನಾರೆ ಬಳ್ಳಿ

# ಗುಲ್ಮ ರೋಗ

**ಗುಲ್ಮಕ್ಕೆ:**

ಅರ್ಧ ಗುಲುಗುಂಜಿ ತೂಕ ಇಂಗು ಮತ್ತು ಒಂದು ತೊಲೆ ಸೈಂದವ ಲವಣ ಒಟ್ಟು ಸೇರಿಸಿ ಹಸಿಶುಂಠಿಯ ರಸದಲ್ಲಿ ಅರೆದು ಸೇವಿಸುವುದು.

ಹಿಪ್ಪಲಿ, ಕಾಡುಕೇನೆ ಗಡ್ಡೆ, ಅಣಿಲೆಕಾಯಿ, ಸೈಂಧವ ಲವಣ, ಕರಿ ಹಿಂಗು, ತತಾಪೆ, ಶುಂಠಿ, ಇವುಗಳ ಚೂರ್ಣ ಮಾಡಿ ಸಮಾಂಶ ಬೆಲ್ಲ ಸೇರಿಸಿ ದಿನದಲ್ಲಿ ಒಂದು ತೊಲೆ ಪ್ರಕಾರ ತಿಂದು ಬಿಸಿ ನೀರು ಕುಡಿಯುವುದು. ಹನ್ನೆರಡು ಯಾ ಹದಿನಾಲ್ಕು ದಿವಸಗಳ ಸೇವನೆಯಿಂದ ಗುಣವಾಗುವುದು.

ಕರಿಲೊಕ್ಕಿಯ ಚಿಗುರನ್ನು ಆವಿಯಲ್ಲಿ ಬೇಯಿಸಿ ನೆರಳಿನಲ್ಲಿ ಒಣಗಿಸಿ ಚೂರ್ಣ ಮಾಡಿ ಆಡಿನ ತುಪ್ಪ ಹಾಕಿ ಕಾಯಿಸಿ ಲೇಹ್ಯ ಪಾಕದಲ್ಲಿಳಿಸಿ ಇರಿಸಿ ಕೊಂಡು, ಪ್ರತಿದಿನ ಬೆಳಗ್ಗೆ ಎರಡು ಅಣೆ ತೂಕದಷ್ಟು ಸೇವಿಸುವುದು. ನಲುವತ್ತೆಂಟು ದಿನ ಸೇವಿಸುವುದರಿಂದ ಗುಲ್ಮ ಹಾಗೂ ಮೊಲೆಹಾಲು ದೋಷ ಸಹ ಗುಣವಾಗುವುದು.

ನುಗ್ಗೆಯ ಮರದ ಕೆತ್ತೆ ಕಷಾಯ ಮಾಡಿ ಇಂಗು (ಶುದ್ಧಿ) ಮತ್ತು ಇಂದುಪ್ಪು ಮೇಲ್ಪುಡಿ ಹಾಕಿ ದಿನದಲ್ಲಿ ಒಂದು ಹೊತ್ತು ಪ್ರಕಾರ ಮೂರು ಯಾ ಆರು ದಿನ ಸೇವಿಸುವುದು ಹಿತ.

**ವಾತ ಗುಲ್ಮಕ್ಕೆ:**

ನೊಕ್ಕಿಯ ಚಿಗುರು ಒಂದು ಹಿಡಿ ತಂದು ನೀರಲ್ಲಿ ಬೇಯಿಸಿ ಅರೆದು ಮಜ್ಜಿಗೆಯಲ್ಲಿ ಕದಡಿ ಸೇವಿಸುವುದರಿಂದ ಗುಣವಾಗುವುದು.

**ಗುಲ್ಮ ಅರುಚಿ ಅಗ್ನಿಮಾಂದ್ಯಗಳಿಗೆ:**

ಒಣ ಶುಂಠಿಯನ್ನು ಅಷ್ಟಮಾಂಶ ಕಷಾಯ ಮಾಡಿ ಸೋಸಿ ಶುಂಠಿ ಯನ್ನು ತೇದು ¼ ತೊಲೆಯಷ್ಟನ್ನು ಕಷಾಯದಲ್ಲಿ ಕದಡಿ ಒಂದು ಚಮಚ ತುಪ್ಪ ಹಾಕಿ ಸೇವಿಸುವುದು.

# ವಾಂತಿ ರೋಗ

**ವಾಂತಿ ಜೋರಾದರೆ:**

ಭದ್ರಮುಷ್ಠಿಗಡ್ಡೆ, ಅತಿವಿಡಯ. ಕರ್ಕಟಶೃಂಗಿ, ಇವುಗಳನ್ನು ಸಮಾಂಶ ಸೇರಿಸಿ ಚೂರ್ಣ ಮಾಡಿ ಜೇನಿನಲ್ಲಿ ಕಲಸಿ ಸ್ವಲ್ಪ ಸ್ವಲ್ಪವಾಗಿ ನೆಕ್ಕುತ್ತಿದ್ದರೆ ಗುಣವಾಗುವುದು

ಬಿಲ್ವಪತ್ರೆ ಬೇರಿನ ಪಾದಾವಶೇಷ ಕಷಾಯ ಅಥವಾ ಶೀತಕಷಾಯ ಮಾಡಿ ಚೆನ್ನಾಗಿ ತಣಿಸಿ ಜೇನು ಹಾಕಿ ಆಗಾಗ ಸೇವಿಸಿದರೆ ಗುಣವಾಗುವುದು.

ಉದ್ದಿನ ಬಿಳಿ ಬೇಳೆಯನ್ನರೆದು ಸಕ್ಕರೆ ಹಾಕಿ ನೆಕ್ಕಿಸುವುದರಿಂದ ಗುಣವಾಗುವುದು.

**ವಾಂತಿಯಾಗುವುದಿದ್ದರೆ:**

ಮಾವಿನ ಚಿಗುರಿನ ರಸವನ್ನು ಮೂಗಿಗೆ ನಶ್ಯವೆರೆದರೆ ಕೂಡಲೇ ನಿಲ್ಲುವುದು.

ಒಂದು ಚಿಟಿಕೆ ಬಿಳುಗಾರದ ಅರಳನ್ನು ನೀರಿನಲ್ಲಿ ಕದಡಿ ಹನಿಸಿ ಆ ಹನಿನೀರು ಒಂದೊಂದೇ ಚಮಚ ಪ್ರಕಾರ ಆಗಾಗ ಸೇವಿಸುವುದರಿಂದ ಗುಣವಾಗುವುದು.

ಪೇರಳೆ ಮರದ ಕೆತ್ತೆಯನ್ನು ಜಜ್ಜಿ ಮಜ್ಜಿಗೆಯಲ್ಲಿ ಹಾಕಿ ಕುದಿಸಿ ಸೋಸಿ ಉಪ್ಪು ಹಾಕಿ ಆ ಮಜ್ಜಿಗೆಯನ್ನು ಸ್ವಲ್ಪ ಸ್ವಲ್ಪವಾಗಿ ಪದೇ ಪದೇ ಕುಡಿದರೆ ಗುಣವಾಗುವುದು.

ಏಲಕ್ಕಿಯನ್ನು ನೀರಿನಲ್ಲಿ ಅರೆದು ಒಂದೊಂದೇ ಚಮಚ ಆಗಾಗ ಸೇವಿಸುವುದು.

**ರಕ್ತವು ವಾಂತಿಯಾಗುತ್ತಿದ್ದರೆ:**

ಇಪ್ಪೆ ಹೂವು, ಜ್ಯೇಷ್ಠಮಧು, ಇವುಗಳ ಹಾಲು ಕಷಾಯ ಮಾಡಿ ಬೆಲ್ಲ ಮೋಲ್ಪುಡಿ ಹಾಕಿ ಸೇವಿಸುವುದು. ಒಂದು ವಾರ ಸೇವಿಸುವುದರಿಂದ ನಿವಾರಣೆಯಾಗುವುದು.

ಆಡುಸೋಗೆ ಬೇರಿನ ಕಷಾಯ ಮಾಡಿ ತಣಿಸಿ ಜೇನು ಹಾಕಿ ಸೇವಿಸುವುದು ಹಿತ.

ಮಾವಿನ ಕೆತ್ತೆ, ನೇರಿಲಕೆತ್ತೆ, ನೀರು ಮರುವದ ಕೆತ್ತೆ ಇವುಗಳನ್ನು ಸಮಾಂಶ ಸೇರಿಸಿ ಜಜ್ಜಿ ಶೀತ ಕಷಾಯ ತಯಾರಿಸಿ ಬೆಳಗ್ಗೆ ಸೋಸಿ ಒಂದು ತೊಲೆ ಜೇನು ಹಾಕಿ ಒಂದೊಂದೇ ಔನ್ಸಿನಂತೆ ಆಗಾಗ ಸೇವಿಸುತ್ತಿರುವುದು. ಅಥವಾ ದಿನದಲ್ಲಿ ಮೂರು ಹೊತ್ತಿನಂತೆ ಸೇವಿಸುವುದು. ಮೂರು ಯಾ ಆರು ದಿನ ಸೇವಿಸುವುದರಿಂದ ಗುಣವಾಗುವುದು.

**ವಾಂತಿ ಮತ್ತು ಭೇದಿ ಎರಡೂ ಆಗುವುದಿದ್ದರೆ:**

ಹಸಿಶುಂಠಿಯ ರಸಕ್ಕೆ ಅಥವಾ ನಿಂಬೆ ಹಣ್ಣಿನ ರಸಕ್ಕೆ ಜೇನು ಸೇರಿಸಿ ಅಥವಾ ಒಂದು ಚಿಟಕೆ ಏಲಕ್ಕಿ ಚೂರ್ಣವನ್ನು ಹಾಕಿ ಸೇವಿಸುವುದು.

**ಮಕ್ಕಳಿಗೆ ವಾಂತಿ ಸಹಿತ ಭೇದಿಯಿದ್ದರೆ:**

ಅರಳು, ಇಂದುಪ್ಪು, ಮಾವಿನಕಾಯಿಯ ಹುಂಗು (ಪಪ್ಪು =ತಿಳಲು) ಇವುಗಳನ್ನು ಸಮಾಂಶ ತೆಗೆದು ಚೂರ್ಣ ಮಾಡಿ ಜೇನಿನಲ್ಲಿ ಜಾಳಿಸಿ ಪದೇ ಪದೇ ನೆಕ್ಕಿಸುವುದರಿಂದ ಗುಣವಾಗುವುದು.

**ಮಕ್ಕಳಿಗೆ ವಾಂತಿ ಜೋರಾದರೆ:**

ಭಜೆಯ ಭಸ್ಮವನ್ನು ನನ್ನಾಲಿಬೇರಿನ ರಸದಲ್ಲಿ ಅರೆದು ನೆಕ್ಕಿಸುವುದು ಹಿತ.

**ಮಕ್ಕಳ ವಾಂತಿ ಜ್ವರಕ್ಕೆ:**

ಅತಿವಿಡಯದ ಚೂರ್ಣವನ್ನು ಜೇನಿನಲ್ಲಿ ಕಲಸಿ ನೆಕ್ಕಿಸುವುದು.

**ಒಂದು ಯಾ ಎರಡು ವರ್ಷದ ಮಕ್ಕಳ ವಾಂತಿ ಹಾಗೂ ಜ್ವರಕ್ಕೆ:**

ಬಿಲ್ವಪತ್ರೆಯ ಬೇರು, ಧಾತಕೀ ಕುಸುಮ, ಮೊಡಂದೆ ಕೆತ್ತೆ, ಗಜ ಪಿಪ್ಪಲಿ, ಇವುಗಳ ಫಾಂಟ ಕಷಾಯ ತಯಾರಿಸಿ ಜೇನು ಹಾಕಿ ಕುಡಿಸುವುದು. ಇದರಿಂದ ಒಳಜ್ವರ, ವಾಂತಿ, ಕೆಮ್ಮು, ಮಂದಾಗ್ನಿ, ಇತ್ಯಾದಿ ಎಲ್ಲಾ ಕಾಯಿಲೆಯೂ ಗುಣವಾಗುವುದು.

**ವಾಂತಿ ಮಾಡಿಸಲಿಕ್ಕೆ ಮದ್ದುಗಳು:**

ಹಾಡೆಗಡ್ಡೆ. ಈಶ್ವರ ಬಳ್ಳಿ ಬೇರು. ಪಾತಾಳ ಗರುಡನ ಬೇರು, ಈ ಮೂರನ್ನೂ ಬೇರೆ ಬೇರೆ ತೇದು ಸಮಾಂಶ ತೆಗೆದು ಎರಡು ತೊಲೆಯಷ್ಟು ಸೇರಿಸಿ ದನದ ನೊರೆಹಾಲು ಒಂದು ಕುಡ್ತೆಯಲ್ಲಿ ಅಥವಾ ನೀರಿನಲ್ಲಿ ಕದಡಿ ಸೇವಿಸುವುದರಿಂದ ಚೆನ್ನಾಗಿ ವಾಂತಿಯಾಗುವುದು.

**ಪ್ರತಿವಿಧಿ:** ಅನ್ನಕ್ಕೆ ಗಟ್ಟಿ ಮೊಸರು ಹಾಕಿ ಉಣ್ಣುವುದು.

ಕೊಂದೆ ಮರದ ಚಿಗುರು ಮತ್ತು ಸಮಾಂಶ ಹುಣಸೆ ಹುಳಿ ಸೇರಿಸಿ ಅರೆದು ಒಂದು ತೊಲೆ ಸೇವಿಸಿದರೆ ವಾಂತಿಯಾಗುವುದು.

ಕಹಿಸೋರೆಯ ಬೀಜ, ಕಡುಕಾರೆ ಕಾಯಿ, ಜ್ಯೇಷ್ಠಮಧು, ಕಹಿಹೀರೆ, ನೆಲಕ್ಕಂಚಿಗಿಡದ ಸೊಪ್ಪು, ಕಾಗೆತೊಂಡೆ, ಎದ್ರೋಳಿ ಸೊಪ್ಪು, ಹೆದ್ದುಂಬೆ ಬೇರು, ಕೊಡಸಿಗೆ ಬೀಜ, ಕರಿಜೀರಿಗೆ, ಕಾಡುಕಂಚಿ, ಚಿತ್ರಮೂಲದ ಬೇರು (ಶುದ್ಧಿ) ಕೊರುಂಗು ಮರದ ಕೆತ್ತೆ, ರಾವು ಬೀಜದ ಕೆತ್ತೆ(ಶುದ್ಧಿ), ಉಪ್ಪು, ಹಿಪ್ಪಲಿ, ಸಾಸಿವೆ, ಏಲಕ್ಕಿ, ಇವುಗಳ ಪೈಕಿ ಒಂದನ್ನು ಹಸಿನೀರಿನಲ್ಲಿ ಅರೆದು ಧಾರಾಳ ಕುಡಿಸಿದರೆ ವಾಂತಿಯಾಗುವುದು.

**ಪ್ರತಿವಿಧಿ:** ಮಜ್ಜಿಗೆ ಅನ್ನ ಉಣ್ಣುವುದು.

ಕರಿನುಕ್ಕಿಯ ಸೊಪ್ಪು ಬಾಡಿಸಿ ತೆಗೆದ ರಸ ಒಂದೂವರೆ ಕುಡುತೆಗೆ ಅದರಷ್ಟೇ ನೊರೆಹಾಲು ಸೇರಿಸಿ ಕುಡಿದರೆ ಚೆನ್ನಾಗಿ ವಾಂತಿಯಾಗುವುದು.

**ಪ್ರತಿ ವಿಧಿ:** ನಿಂಬೆ ಹಣ್ಣಿನ ರಸವನ್ನು ನೆಕ್ಕುವುದು.

ನೇರಿಲ ನಾರಿನ ರಸಕ್ಕೆ ಸಮಾಂಶ ನೊರೆಹಾಲು ಸೇರಿಸಿ ಕುಡಿಯುವುದು.

ಕಹಿಬೇವಿನ ಕೆತ್ತೆಯಾ ಸೊಪ್ಪು ನೀರು ಸೇರಿಸಿ ಜಜ್ಜಿ ತೆಗೆದ ರಸ ಧಾರಾಳವಾಗಿ ಸೇವಿಸಿದರೆ ವಾಂತಿಯಾಗುವುದು.

# ಮಲಶುದ್ಧಿ

**ಮಲಬದ್ಧವಾದರೆ:**

ಇಂದುಪ್ಪನ್ನು ಎಳ್ಳೆಣ್ಣೆಯಲ್ಲಿ ಅರೆದು ಕಿಬ್ಬೊಟ್ಟೆಗೆ ಲೇಪಿಸುವುದು.

ಹಳೆಯ ಹುಣಸೆ ಹುಳಿಗೆ ಹರಳೆಣ್ಣೆ ಸೇರಿಸಿ ಮರ್ದಿಸಿ ಬತ್ತಿ ಮಾಡಿ ಗುದದ್ವಾರಕ್ಕೆ ತಿಕ್ಕಿದರೆ ಕೂಡಲೇ ಮಲವು ಶೋಧನೆಯಾಗುವುದು.

ಅತ್ತಿಯ ಎಲೆಯನ್ನು ಜಜ್ಜಿ ಕಲಗಚ್ಚಿನಲ್ಲಿ ಕಿವಿಚಿ ಸೋಸಿ ಎರಡು ತೊಲೆ ಕಲ್ಲು ಸಕ್ಕರೆ ಹಾಕಿ ದಿನದಲ್ಲಿ ಒಂದು ಹೊತ್ತು ಪ್ರಕಾರ ಹನ್ನೆರಡು ದಿನ ಸೇವಿಸುವುದರಿಂದ ಸರಾಗವಾಗಿ ಶೋಧನೆ ಆದೀತು.

**ಜೀರ್ಣಶಕ್ತಿಯಿಲ್ಲದೆ ಮಲಬಂಧವಾದರೆ:**

ಶುಂಠಿ ಮತ್ತು ಹರಳ ಬೀಜದ ಪಪ್ಪು ಸಮಾಂಶ ಸೇರಿಸಿ ವಸ್ತ್ರಗಾಳಿತ ಚೂರ್ಣ ಮಾಡಿ ಅದರ ಮೂರು ಪಾಲು ಬೆಲ್ಲದಲ್ಲಿ ಕಲಸಿ ನೆಲ್ಲಿಕಾಯಿಯ ಗಾತ್ರ ಮಾತ್ರೆ ಮಾಡಿ ದಿನದಲ್ಲಿ ಎರಡು ಹೊತ್ತು ಒಂದೊಂದು ಮಾತ್ರೆ ಪ್ರಕಾರ ಒಂದು ವಾರ ಸೇವನೆಯಿಂದ ಮಲ ಸಡಿಲವಾಗುವುದು; ಜೀರ್ಣ ಶಕ್ತಿ ಹೆಚ್ಚುವುದು.

ಶುಂಠಿ ಮತ್ತು ಓಮ ಸಮಾಂಶ ಚೂರ್ಣ ಮಾಡಿ ಮಜ್ಜಿಗೆಯಲ್ಲಿ ಕದಡಿ ಸೇವಿಸುವುದು. ಜೀರ್ಣಶಕ್ತಿ ಚುರುಕಾಗಿ, ಮಲಶೋಧನೆ ಆದೀತು

ಕಡಿರಬೇರು ಮತ್ತು ಶುಂಠಿ ಅಷ್ಟಾವಶೇಷ ಕಷಾಯ ಮಾಡಿ ಎಳ್ಳೆಣ್ಣೆ ಮೇಲ್ಬುಡಿ ಹಾಕಿ ದಿನದಲ್ಲಿ ಎರಡು ಹೊತ್ತು ಸೇವಿಸಿದರೆ ಕೋಷ್ಠ ಶುದ್ಧಿಯಾಗಿ ಮಲವು ಶಿಥಿಲವಾಗಿ ಶೋಧನೆಯಾಗುವುದು.

ತಗ್ಗಿ ಬೇರನ್ನು ನೀರಿನಲ್ಲಿ ತೇದು ನೆಕ್ಕುವುದು. ಅಥವಾ

ಹರಳ ಗಿಡದ ಬೇರನ್ನು ಗಂಧದಂತೆ ತೇದು ಒಂದು ತೊಲೆಯಷ್ಟನ್ನು ಬೆಣ್ಣೆಯಲ್ಲಿ ಕಲಸಿ ನೆಕ್ಕಿದರೆ ಮಲವು ಶಿಥಿಲವಾಗಿ ಹೋಗುವುದು.

ಇಂದುಪ್ಪನ್ನು ತುಪ್ಪದಲ್ಲರೆದು ಬಿಸಿ ಮಾಡಿ ಕಿಬ್ಬೊಟ್ಟೆಗೆ ಲೇಪಿಸುವುದು. ಮಲ ಸಡಿಲವಾಗಿ ಶೋಧನೆ ಆದೀತು.

ಕೊಂದೆ ಗಿಡದ ಚಿಗುರು ನಿಂಬೆ ಹಣ್ಣಿನ ರಸದಲ್ಲಿ ಅರೆದು ನೆಲ್ಲಿ ಕಾಯಿಯ ಗಾತ್ರ ಮಾತ್ರೆ ಮಾಡಿ ಬೆಳಗ್ಗೆ ಒಂದು ಮಾತ್ರೆ ಮಾತ್ರ ಸೇವಿಸುವುದು.

(ಜುಲಾಬು ಹೆಚ್ಚಾದರೆ ಪ್ರತಿವಿಧಿ ಮಜ್ಜಿಗೆ ಅನ್ನ ಊಟ.)

### ಗ್ರಹಣೀ ದೋಷದಿಂದ ಮಲವು ಬೆಳ್ಳಗಾಗಿದ್ದರೆ:

ಅರ್ಧ ತೊಲೆಯಿಂದ ಒಂದು ತೊಲೆ ಕಟುಕರೋಹಿಣಿಯನ್ನು ಜಜ್ಜಿ ಪಾದಾವಶೇಷ ಕಷಾಯ ಮಾಡಿ ಸೇವಿಸುವುದು. ಆರು ದಿನ ಸೇವಿಸುವುದರಿಂದ ಗುಣವಾಗುವುದು.

### ವೃದ್ಧರಿಗೆ ಮಲಬಂಧವಾದರೆ ಮತ್ತು ಸದಾ ಮಲಬದ್ಧ ಇರುವವರಿಗೆ:

ಒಂದು ಔನ್ಸು ನೊರೆಹಾಲು, ಎರಡು ಔನ್ಸು ಮೊಸರು, ಎರಡು ಚಮಚ ಬೆಲ್ಲದ ರವೆ. ಎರಡು ಚಮಚ ಎಳ್ಳೆಣ್ಣೆ, ಇವುಗಳನ್ನೊಟ್ಟು ಸೇರಿಸಿ ಸೇವಿಸಿದರೆ ಬದ್ಧಗುದ, ಕೋಷ್ಠಬಂಧ, ಮಲಕ್ಷಯ, ಇತ್ಯಾದಿ ಗುಣವಾಗಿ ಶೋಧನೆಯು ಸುಲಭವಲ್ಲಾಗುವುದು.

### ಮಲಮೂತ್ರ ಬಂದಾಗಿ ಮಕ್ಕಳ ಹೊಟ್ಟೆಯು ಬಾತುಹೋದರೆ:

ಮೂರು ಭಾಗ ನೆಲಮುಚ್ಚಿರುಗಡ್ಡೆಯ ಚೂರ್ಣವನ್ನೂ ಒಂದು ಭಾಗ ಜೀರಿಗೆಯ ಚೂರ್ಣವನ್ನೂ ಸೇರಿಸಿ ಪ್ರಾಯವನ್ನನುಸರಿಸಿ ನಾಲ್ಕಾಣೆ ತೂಕದ ವರೆಗೆ ದಿನದಲ್ಲಿ ಎರಡು ಹೊತ್ತು ಬಿಸಿ ನೀರಿನಲ್ಲಿ ಸೇವಿಸುವುದು.

### ಚಿಕ್ಕ ಮಕ್ಕಳ ಮಲವು ಒಣಗಿ ಆಡಿನ ಹಿಕ್ಕೆಯಂತಾದರೆ:

ಅತ್ತಿ ಮರದ ಕೆತ್ತೆಯನ್ನು ಮೊಲೆಹಾಲಿನಲ್ಲಿ ತೇದು ದಿನವೂ ನೆಕ್ಕಿಸುವುದು. ಆರು ದಿನ ನೆಕ್ಕಿಸುವುದರಿಂದ ಗುಣವಾಗುವುದು.

### ದೊಡ್ಡವರಿಗೆ ಮಲವು ಒಣಗಿ ಆಡಿನ ಹಿಕ್ಕೆಯಂತಾದರೆ:

ಒಂದು ತೊಲೆ ಇಂದುಪ್ಪನ್ನು ಸಮಪ್ರಮಾಣ ದನದ ತುಪ್ಪದಲ್ಲರೆದು ರಾತ್ರಿಯ ಊಟದ ನಂತರ ಸೇವಿಸುವುದು. ಮೂರು ದಿನ ಸೇವಿಸುವುದರಿಂದ ಗುಣವಾಗುವುದು.

### ಚಿಕ್ಕ ಮಕ್ಕಳಿಗೆ ಮಲಶೋಧನೆಯಾಗದಿದ್ದರೆ:

ಹರಳ ಪಪ್ಪನ್ನು ಅಥವಾ ಇಲಿ ಹಿಕ್ಕೆಯನ್ನು ನಿಂಬೆಯ ರಸದಲ್ಲಿ ಅರೆದು ನಾಭಿಗೆ ಯಾ ಗುದಕ್ಕೆ ಲೇಪಿಸುವುದರಿಂದ ಶೋಧನೆಯಾಗುವುದು.

**ಮಲ ಬದ್ಧತೆಗೆ:**

ಒಳ್ಳೆಕ್ಕೊಡಿ, ಕುಂಟಾಂಗಿಲದಚಿಗುರು. ಪೇರಳೆಚಿಗುರು, ಜೇಡೆಮುಳ್ಳಿನ ಗಿಡದ ಚಿಗುರು, ಚೀಮುಳ್ಳಿನ ಚಿಗುರು, ಕಿಸ್ಕಾರ (ಕೇಪಳ)ದ ಚಿಗುರು. ಎಂಜಿರು ಗಿಡದ ಚಿಗುರು. ಕಬರು ಕೊಡಿ ಇವುಗಳ ರಸಕ್ಕೆ ಬೆಳುಕಲ್ಲನ್ನು ಕಾಯಿಸಿ ಹಾಕಿ ಕುದಿಸಿ ಕುಡಿಸುವುದು. ಇದರಿಂದ ಹೊಟ್ಟೆಯು ಚುರುಕಾಗಿ ಶೂಲೆ, ಮಲಬದ್ಧತೆ, ಮಂದಾಗ್ನಿ ಇತ್ಯಾದಿ ಗುಣವಾಗುವುದು.

**ಮಲ ಕ್ಷಯಕ್ಕೆ:**

ಕಡಿರು ಬೇರು ಮತ್ತು ಶುಂಠಿ ಇವುಗಳನ್ನು ಸಮಾಂಶ ಸೇರಿಸಿ ಜಜ್ಜಿ ಹಾಲು ಕಷಾಯ ಮಾಡಿ ಒಂದೊಂದು ತೊಲೆ ಬೆಲ್ಲ ಮತ್ತು ಎಳ್ಳೆಣ್ಣೆ ಹಾಕಿ ಸೇವಿಸುವುದು. ಮೂರು ದಿನ ಸೇವಿಸುವುದರಿಂದ ಮಲವು ತಕ್ಕ ಪ್ರಮಾಣದಲ್ಲಿ ಶೋಧನೆಯಾಗುವುದು.

ರವೆಯೊಂದಿಗೆ ಶುಂಠೀ ಚೂರ್ಣವನ್ನು ಕಲಸಿ ಒಂದೊಂದು ತೊಲೆ ಹಾಲು, ಮೊಸರು, ತುಪ್ಪ, ಎಳ್ಳೆಣ್ಣೆಗಳನ್ನು ಹಾಕಿ ಸೇವಿಸುವುದು. (ಮೂರು ದಿನ)

**ಸುಲಭವಲ್ಲಿ ಭೇದಿಯಾಗಲಿಕ್ಕೆ:**

ಹರಳಗಿಡದ ಹಸಿ ಬೇರು ಎರಡು ತೊಲೆ ತೇದು ನೊರೆಹಾಲಿನಲ್ಲಿ ಕವಡಿ ಬೆಳಗ್ಗೆ ಸೇವಿಸಿದರೆ ಭೇದಿಯಾಗುವುದು.

ತ್ರಿಫಲೆಗಳು ಮತ್ತು ಖದಿರ ಇವುಗಳನ್ನು ಒಂದೊಂದು ತೊಲೆ ಪ್ರಕಾರ ಸೇರಿಸಿ ಜಜ್ಜಿ ಅಷ್ಟಾವಶೇಷ ಕಷಾಯ ಮಾಡಿ ಇಳಿಸಿ ಸೋಸಿ ಎರಡಾಣೆ ತೂಕ ವಿಶಾಲರಿ ಚೂರ್ಣವನ್ನು ಮೇಲ್ಪುಡಿ ಹಾಕಿ ದಿನದಲ್ಲಿ ಎರಡು ಹೊತ್ತು ಸೇವಿಸುವುದು. (ಅವಶ್ಯವಿದ್ದರೆ ಮೂರು ದಿನ ಸೇವಿಸುವುದು.)

ನಾಗದಂತಿ ಬೀಜ, ತಿಗಡೆ, ತ್ರಿಫಲೆ, ಕಾಡುಸೌತೆ, ಕೋಲುಕಳ್ಳಿ ಶಂಖಪುಷ್ಪದ ಬೇರು, ನೀಲಿಬೇರು, ಹಾಲೆಬೇರು, ಕೊಂಜಂಬೆ ಬೇರು, ಕಂಬಿಪ್ಪಾಲೆ ಬೇರು, ಎಕ್ಕೆಹಾಲು, ಇವುಗಳಲ್ಲಿ ಯಾವುದಾದರೂ ಒಂದನ್ನು ಪ್ರಮಾಣವರಿತು ಹಾಲಿನಲ್ಲಿ ಅಥವಾ ಗೋಮೂತ್ರದಲ್ಲಿ ಅರೆದು ಇಲ್ಲವೆ

ಕಷಾಯ ಮಾಡಿ ಕುಡಿದರೆ ಭೇದಿಯಾಗುವುದು. (ಇವೆಲ್ಲವುಗಳಿಗೂ ಪ್ರತಿ ವಿಧಿ ಮೊಸರನ್ನದ ಊಟ).

**ಭೇದಿಯು ಜಾಸ್ತಿಯಾದರೆ:**

ಶ್ರೀಗಂಧವನ್ನು ಸೀಯಾಳದ ನೀರಿನಲ್ಲಿ ತೇದು ಕದಡಿಸಿ ಕುಡಿಯುವು ದರಿಂದ ಕೂಡಲೇ ಶಾಂತವಾದೀತು.

**ಮಕ್ಕಳಿಗೆ ಭೇದಿಯು ಜಾಸ್ತಿಯಾದರೆ:**

ಎಕ್ಕೆ ಮತ್ತು ನುಕ್ಕಿ ಗಿಡಗಳ ಎರಡೆರಡು ಚಿಗುರುಗಳನ್ನು ತಂದು ಸ್ವಲ್ಪ ತೆಂಗಿನಕಾಯಿ ಹಾಲಿನಲ್ಲಿ ಅರೆದು ಒಂದು ಚಮಚದಷ್ಟು ಕುಡಿಸು ವುದು. ತಕ್ಷಣ ಭೇದಿಯಾಗುವುದು ನಿಲ್ಲುವುದು.

**ನೆತ್ತಿ ಕಂಡೆಯಾದರೆ—(ರಕ್ತಾತಿಸಾರ):**

ಎಂಜಿರು ಚಿಗುರನ್ನು ನುಣ್ಣಗೆ ಅರೆದು ಒಂದು ತೊಲೆಯಷ್ಟನ್ನು ಆಕಳ ಮೊಸರಿನಲ್ಲಿ ಕದಡಿ ಸೇವಿಸುವುದು.

ಹಾಡೆಯ ಸೊಪ್ಪನ್ನು ಹಾಲಿನಲ್ಲಿ ಕಿವಿಚಿ ತುಪ್ಪ ಹಾಕಿ ಸೇವಿಸುವುದು.

**ಉಷ್ಣ ಹೊರಕಡೆಗೆ ಮಾತ್ರೆ:**

ದಾಳಿಂಬೆ ಓಡು ಹತ್ತು ತೊಲೆ, ಏಲಕ್ಕಿ ಒಂದು ತೊಲೆ, ಜೀರಿಗೆ ಎರಡು ತೊಲೆ. ಮೆತ್ತೆ ಮೂರು ತೊಲೆ. ಓಮ ನಾಲ್ಕು ತೊಲೆ, ಹೀಗೆ ಇಪ್ಪತ್ತು ತೊಲೆ ಮದ್ದು ತೆಗೆದು ಜೀರಿಗೆ ಕಷಾಯದಲ್ಲಿ ಅರೆದು ಗುಂಜಾಗಾತ್ರದ ಮಾತ್ರೆಗಳನ್ನಾಗಿ ಮಾಡಿ ನೆರಳಿನಲ್ಲಿ ಒಣಗಿಸಿಟ್ಟುಕೊಂಡು ಜೀರಿಗೆ ಕಷಾಯದಲ್ಲಿ ತೇದು ಸೇವಿಸುವುದು.

**ಅಪಾನ ವಾಯು ದೋಷಕ್ಕೆ:**

ಒಂದು ತೊಲೆ ತಿಗಡೆ, ಎರಡು ತೊಲೆ ದ್ರಾಕ್ಷೆ, ಎರಡು ತೊಲೆ ಕರಿ ಹುರುಳಿ ಇವುಗಳನ್ನು ಸಮಾಂಶ ಸೇರಿಸಿ ಅಷ್ಟಾವಶೇಷ ಕಷಾಯ ಮಾಡಿ ಸೋಸಿ ಒಂದು ಚಮಚ ಹರಳೆಣ್ಣೆ ಹಾಕಿ ಕದಡಿ ರಾತ್ರಿ—ಬೆಳಗ್ಗೆ ಎರಡು ಹೊತ್ತಿನ ಪ್ರಕಾರ ಮೂರು ವಾ ಆರು ದಿನ ಸೇವಿಸುವುದರಿಂದ ಅಪಾನ ವಾಯು ದೋಷದಿಂದ ಬರುವ ಮಲ ಮೂತ್ರ ತಡೆ, ಹೊಟ್ಟೆ ಉಬ್ಬರ ಕಿಬ್ಬೊಟ್ಟೆ ಶಬ್ದ, ಬೆನ್ನೆಲುಬು—ಕುತ್ತಿಗೆ ಬಚ್ಚುವುದು, ಬಹಳವಾಗಿ ತೇಗು ಬರುವುದು, ಇತ್ಯಾದಿಗಳೆಲ್ಲ ಗುಣವಾದೀತು.

# ಮೂತ್ರ ಶುದ್ಧಿ

## ಬಹು ಮೂತ್ರಕ್ಕೆ:

ಪೊಡಂಡೆ (ಲೋಧ್ರ) ಕೆತ್ತೆ. ಬಬ್ಬಸಕೆತ್ತೆ. ರಾಮಂಚ್ಚದ ಬೇರು. ಶ್ರೀಗಂಧ ಇವುಗಳ ಅಷ್ಟಾವಶೇಷ ಕಷಾಯ ಮಾಡಿ ತಣಿಸಿ ಜೇನು ಹಾಕಿ ದಿನದಲ್ಲಿ ಎರಡು ಹೊತ್ತು ಪ್ರಕಾರ ಸೇವಿಸುವುದು.

ಒಂದು ತೊಲೆ ತೊಂಡೆ ಬೇರನ್ನು ಎಮ್ಮೆ ಮಜ್ಜಿಗೆಯಲ್ಲಿ ಅರೆದು ಸೇವಿಸುವುದು. ಆರು ಯಾ ಹನ್ನೆರಡು ದಿನ ಸೇವಿಸಿದರೆ ಗುಣವಾಗುವುದು.

ಅರಸಿನದ ಕಲ್ಕ (ಅರಪ್ಪು) ಎರಡು ತೊಲೆಯನ್ನು ನೀರಿನಲ್ಲಿ ಕದಡಿ ಪ್ರತಿದಿನ ಬೆಳಗ್ಗೆ ಸೇವನೆ. ಹೀಗೆ ಮೂರು ಯಾ ಆರು ದಿನ ಕಡುಪಥ್ಯದಲ್ಲಿ ಸೇವಿಸುವುದು.

ಜಿಂಕೆಕೋಡು (ಮೃಗಶೃಂಗ), ಅಶ್ವತ್ಥದ ಬೀಜ, ಇವುಗಳನ್ನು ಅರ್ಧಾರ್ಧ ತೊಲೆ ಪ್ರಕಾರ ಸೇರಿಸಿ ಮಜ್ಜಿಗೆಯಲ್ಲಿ ಅರೆದು ಕದಡಿ ಸೇವಿಸುವುದು.

ಕಹಿಬೇವಿನ ಕೆತ್ತೆಯನ್ನು ಹಾಲು ಕಷಾಯ ಮಾಡಿ ಸೇವಿಸುವುದು. ಆರು ಯಾ ಹನ್ನೆರಡು ದಿನ ಸೇವನೆ ಹಿತ. ಸೀಮೂತ್ರಕ್ಕೂ ಹಿತ.

ಕರಿಯ ಎಳ್ಳು ಹುರಿದು ಬೆಲ್ಲಪಾಕದಲ್ಲಿ ಹಾಕಿ ಉಂಡೆ ಮಾಡಿ ರಾತ್ರಿ ಮತ್ತು ಬೆಳಗ್ಗೆ ಒಂದೊಂದು ಉಂಡೆ ಪ್ರಕಾರ ಹನ್ನೆರಡು ದಿನ ತಿನ್ನುವುದು.

ಬಯಲುಚುಳ್ಳಿ ಬೀಜವನ್ನು ಹಾಲಿನಲ್ಲಿ ನೆನೆಸಿ ಜಜ್ಜಿ ಸಕ್ಕರೆ ಹಾಕಿ ನುಣ್ಣಗೆ ಅರೆದು ಹಾಲಿನಲ್ಲಿ ಕದಡಿ ಸೇವಿಸುವುದು.

ಉಪ್ಪು ಮತ್ತು ಬಯಲುಚುಳ್ಳಿ ಬೀಜ ಸಮಾಂಶ ತೆಗೆದು ಚೂರ್ಣ ಮಾಡಿ ಎಮ್ಮೆ ಮೊಸರಿನಲ್ಲಿ ಕದಡಿ ಬೆಳಗ್ಗೆ ಸೇವಿಸುವುದು.

ಬಿಳಿ ದಾಸವಾಳದ ಬೇರು ಮತ್ತು ಹೆಸರು ಧಾನ್ಯ ಸಮಾಂಶ ಸೇರಿಸಿ ಜಜ್ಜಿ ಅಷ್ಟಾವಶೇಷ ಕಷಾಯ ಮಾಡಿ ಚೆನ್ನಾಗಿ ತಣಿಸಿ ಜೇನು ಹಾಕಿ ಸೇವಿಸುವುದು.

ನೆಲ್ಲಿಚಟ್ಟು, ಬಾಳೆಯಹಣ್ಣು, ಇವುಗಳನ್ನು ಅಷ್ಟಾವಶೇಷ ಕಷಾಯ ಮಾಡಿ ಸೇವಿಸುವುದು. ಯಾ ಹಸಿಯಾಗಿ ಕಿವಿಚಿ ಸೇವಿಸುವುದು.

ಅವರೆ ಹೂವನ್ನು ಕಲಗಚ್ಚಿನಲ್ಲಿ ಅರೆದು ಸೇವಿಸುವುದು.

ಬಿಲ್ವಪತ್ರೆ ಬೇರಿನ ತಿರುಳು ತಂದು ಹೂಜಿಯ ನೀರಿನಲ್ಲಿ ತೇದು ಕುಡಿಯುವುದು. ಹುಳಿ, ಮೆಣಸುಗಳನ್ನು ಬಿಟ್ಟು ಹಾಲು ಮತ್ತು ಆಯಾ ದಿನದ ಮಜ್ಜಿಗೆಯನ್ನು ಉಪಯೋಗಿಸುತ್ತ ಮೂರು ದಿನ ಈ ಮದ್ದು ಸೇವಿಸುವುದು. ಯಾ ಆರು ದಿನವೂ ಸೇವಿಸಬಹುದು.

ಗೇರು ಮರದ ಕೆತ್ತೆ ಮತ್ತು ಮರದರಸಿನ ಕೆತ್ತೆ ಮೂರು ಮೂರು ತೊಲೆ, ಔಡಲಬೇರು. ಅಣಲೆಕಾಯಿ ಸಿಪ್ಪೆ ನಾಲ್ಕು ನಾಲ್ಕು ತೊಲೆ, ದ್ರಾಕ್ಷೆ ಐದು ತೊಲೆ ಸೇರಿಸಿ ಜಜ್ಜಿ ಮೂರು ಕುತ್ತಿ ನೀರಿನಲ್ಲಿ ಕಷಾಯವಿರಿಸಿ ಬತ್ತಿಸಿ ಮೂರು ಕುಡ್ತೆ ಮಾಡಿ ಸೋಸಿ ಭದ್ರವಾಗಿರಿಸಿಕೊಂಡು ಹೊತ್ತಿಗೆ ಅರ್ಧ ಕುಡ್ತೆ ಪ್ರಕಾರ ದಿನದಲ್ಲಿ ಎರಡು ಹೊತ್ತು ಸೇವಿಸುವುದು. ಮೂರು ದಿನ ಸೇವನೆಯಿಂದ ಗುಣವಾಗುವುದು.

ಅಣಲೆಕಾಯಿ, ಕೊಂದೆ ಹೂವು, ಪಾಷಾಣಭೇದಿ, ಅಡುಸೋಗೆ ಬೇರು ಪತ್ರೆ, ಇವುಗಳ ಅಷ್ಟಾವಶೇಷ ಕಷಾಯ ಮಾಡಿ ಬೆಲ್ಲದ ರವೆ ಹಾಕಿ ಅರ್ಧ ಕುಡ್ತೆ ಪ್ರಕಾರ ಸೇವಿಸುವುದು. ಹೀಗೆ ಮೂರು ದಿನ ಸೇವಿಸುವುದರಿಂದ ಗುಣವಾಗುವುದು.

ಹೊನಗೊನ್ನೆ ಗಿಡ ಸಮೂಲ ಸವಣೆ ಅಕ್ಕಿಯ ಕಲಗಚ್ಚಿನಲ್ಲಿ ಅರೆದು ಸೇವಿಸುವುದು.

ಎಳ್ಳು ಮತ್ತು ಅರಸಿನ ಸಮಾಂಶ ಸೇರಿಸಿ ಬೆಲ್ಲದಲ್ಲಿ ಕಲಸಿ ಅಡಕೆಯ ಗಾತ್ರದಷ್ಟು ತಿಂದು ಕಾದಾರಿದ ನೀರನ್ನು ಕುಡಿಯುವುದು. ಹೀಗೇ ದಿನದಲ್ಲಿ ಎರಡು ಹೊತ್ತು ಪ್ರಕಾರ ಒಂದು ವಾರ ಸೇವಿಸುವುದು.

ಹಸಿಶುಂಠಿಯ ರಸಕ್ಕೆ ಕಲ್ಲು ಸಕ್ಕರೆ ಹಾಕಿ ದಿನದಲ್ಲಿ ಎರಡು ಹೊತ್ತು ಒಂದು ವಾರ ಸೇವಿಸುವುದು.

ಪಾದರೀ ಮರದ ಕೆತ್ತೆಯನ್ನು ಸಮಾಂಶ ಶುಂಠಿ ಸೇರಿಸಿ ಹಾರಿದ ದನದ ಹಾಲಿನಲ್ಲಿ ಅರೆದು ಬೆಲ್ಲ ಸೇರಿಸಿ ಪ್ರಾತಃಕಾಲದಲ್ಲಿ ಸೇವನೆ ಸಾರು ಅನ್ನ ಪಥ್ಯದಿಂದಿದ್ದು ಈ ಔಷಧ ಸೇವಿಸಿದರೆ ಗುಣವಾಗುವುದು.

ನೆಲ್ಲಿಚಟ್ಟು, ಕಡಿಲಬೇರು, ಗಂಧ ಇವುಗಳನ್ನು ಸಮಾಂಶ ಸೇರಿಸಿ ಚೂರ್ಣ ಮಾಡಿ, ಭೃಂಗರಾಜ ರಸ (ಗರಗದ ರಸ) ಮತ್ತು ಎಳ್ಳೆಣ್ಣೆ ಇವುಗಳನ್ನು ಸಮಾಂಶ ಸೇರಿಸಿ ಚೆನ್ನಾಗಿ ಜಾಳಿಸಿ ಗುಹ್ಯಾಂಗ ಸಹಿತ ವಸ್ತಿಗೆ ಲೇಪಿಸುವುದು ಮತ್ತು ಆರಿದಾಗ ಬಿಸಿನೀರಿನಿಂದ ತೊಳೆಯುವುದರಿಂದ ಗುಣವಾಗುವುದು.

**ಮೂತ್ರವು ಎಡೆಬಿಡದೆ ಹೋಗುತ್ತಿದ್ದರೆ:**

ಹುಣಸೆ ಸೊಪ್ಪನ್ನು ಜಜ್ಜಿ ಅದರ ಸ್ವರಸವನ್ನು ತೆಗೆದು ಸಮಾಂಶ ಮಜ್ಜಿಗೆ ಸೇರಿಸಿ ಸೇವಿಸಿದರೆ ಗುಣವಾಗುವುದು.

**ವಾತ ಬಹುಮೂತ್ರಕ್ಕೆ:**

ಪೂಪೀರೆಗಡ್ಡೆ, ಎಲಪದಿಗನ ಬೇರು ಇವುಗಳನ್ನು ಸಮಾಂಶ ಕೂಡಿಸಿ ಒಂದು ತೊಲೆಯನ್ನು ದನದ ನೊರೆ ಹಾಲಿನಲ್ಲಿ ಅರೆದು ಕದಡಿ ಸೇವಿಸುವುದು.

**ಮೇಹದಿಂದ ಮೂತ್ರವು ಹೆಚ್ಚು ಹೋಗುವುದಿದ್ದರೆ:**

ತ್ರಿಫಲಾ ಚೂರ್ಣವನ್ನು ಜೇನಿನಲ್ಲಿ ಕಲಸಿ ನೆಕ್ಕುವುದು.

ಕಿರುನೆಲ್ಲಿಯ ರಸದಲ್ಲಿ ಹಸಿಯರಸಿನವನ್ನು ತೇದು ಸೇವಿಸುವುದು.

ಚೇಳು ಬಾಲದ ಗಿಡದ ರಸ ಒಂದು ಔನ್ಸ್ ಒಂದು ಔನ್ಸ್ ಎಳ್ಳೆಣ್ಣೆ ಹಾಕಿ ಸೇವಿಸುವುದು.

ಒಂದು ತೊಲೆ ಬಿದಿರಸೊಪ್ಪು ತಂದು ಮೊಸರಿನಲ್ಲರೆದು ಕದಡಿ ಸೇವನೆ

ಸೀಗೆ ಬೇರಿನ ಕಷಾಯವನ್ನು ಸೇವಿಸುವುದೂ ಹಿತ.

**ಮೂತ್ರಾತಿಸಾರ ಮತ್ತು ಪ್ರಮೇಹಗಳಿಗೆ:**

ಸಣ್ಣ ಜಾತಿಯ ಮದುರಂಗಿ ಸೊಪ್ಪಿನ ನಾರು ಹಾಗೂ ತೊಟ್ಟು ತೆಗೆದು ಒಂದು ತೊಲೆ ಸೊಪ್ಪು ಒಂದು ಚಿಟಿಕೆ ಜೀರಿಗೆ ಸೇರಿಸಿ ಸಣ್ಣಗೆ ಅರೆದು ಒಂದು ಕುಡ್ತೆ ದನದ ನೊರೆಹಾಲಿನಲ್ಲಿ ಕದಡಿ ಒಂದು ಚಮಚ ಸಕ್ಕರೆ ಹಾಕಿ ದಿನದಲ್ಲಿ ಒಂದು ಹೊತ್ತು ಪ್ರಕಾರ ಐದು ದಿನ ಸೇವಿಸಿದರೆ ಗುಣವಾಗುವುದು. ಹಾಲು ಅನ್ನ ಮತ್ತು ಸಪ್ಪೆಯಾದ ಆಹಾರ ಸೇವಿಸುತ್ತಾ ಈ ಮದ್ದು ಸೇವಿಸಿದರೆ ಎಲ್ಲಾ ತರದ ಮೂತ್ರರೋಗವೂ ಹಳದಿ ಕಾಮಿಲೆಯೂ ಸಹ ಗುಣವಾಗುವುದು.

**ಉರಿಯೊಡನೆ ಬಹುಮೂತ್ರ ಹೋಗುವುದಿದ್ದರೆ:**

ಪಚ್ಚೆ ಹೆಸರು, ದಾಸವಾಳದ ಬೇರು, ಇವುಗಳ ಅಷ್ಟಾವಶೇಷ ಕಷಾಯ ಮಾಡಿ ಸೇವಿಸುವುದು. ಒಂದು ವಾರ ಸೇವನೆಯಿಂದ ಗುಣವಾಗುವುದು.

**ನೀರಿನಂತೆ ಮೂತ್ರವು ಹೆಚ್ಚಾಗಿ ಹೋಗುವುದಿದ್ದರೆ:**

ಪ್ರತಿ ದಿನ ಬೆಳಗ್ಗೆ ಬಿಳಿ ದಾಸವಾಳದ ಐದೈದು ಮೊಗ್ಗೆಗಳನ್ನು ಕಲ್ಲು ಸಕ್ಕರೆ ಸೇರಿಸಿ ಜಗಿದು ತಿನ್ನುವುದು. ಒಂದು ಯಾ ಎರಡು ವಾರ ಸೇವಿಸುವುದು.

ಜಾಜಿಮಲ್ಲಿಗೆಯ ಬೇರನ್ನು ಕಷಾಯ ಮಾಡಿ ತಣಿಸಿ ಜೇನು ಹಾಕಿ ಸೇವಿಸುವುದು ಹಿತ.

**ಮೂತ್ರಾತಿಸಾರಕ್ಕೆ:**

ಸಾಸಿವೆ ಮತ್ತು ಬೆಲ್ಲ ಇವುಗಳನ್ನು ಸಮಾಂಶ ತೆಗೆದು ಅರೆದು ಬೋಗರಿಯ ಗಾತ್ರದಷ್ಟು ಸೇವಿಸುವುದು ಹಿತ.

ಅಶ್ವಗಂಧಿ ಮತ್ತು ಭದ್ರಮುಷ್ಠಿ ಒಟ್ಟಿಗೆ ಚೂರ್ಣ ಮಾಡಿ ಜೇನಿನಲ್ಲಿ ಕಲಸಿ ಸೇವಿಸುವುದು.

ಸಾಸಿವೆಯ ಚೂರ್ಣವನ್ನು ಬೆಲ್ಲದಲ್ಲಿ ಕಲಸಿ ಕಡಲೆಯ ಗ್ರಾತದ ಮಾತ್ರೆಗಳನ್ನಾಗಿ ಮಾಡಿ ಒಂದೊಂದು ಮಾತ್ರೆಯನ್ನು ಪ್ರತಿದಿನ ಎರಡು ಹೊತ್ತು ಸೇವಿಸುವುದು.

**ಸೋಮ ರೋಗಕ್ಕೆ:**

ಜ್ಯೇಷ್ಠಮಧು, ನೆಲಕುಂಬಳಗಡ್ಡೆ, ಇವುಗಳ ಹಾಲು ಕಷಾಯ ಮಾಡಿ ಚೆನ್ನಾಗಿ ತಣಿಸಿ ಜೇನು ಮತ್ತು ಸಕ್ಕರೆ ಮೇಲ್ಪುಡಿ ಹಾಕಿ ಬೆಳಗ್ಗೆ ಸೇವಿಸುವುದು. ಹೀಗೆ ಒಂದು ವಾರ ಸೇವಿಸುವುದರಿಂದ ಮೂತ್ರರೋಗ, ಧಾತುಸ್ರಾವ, ಬಹುಮೂತ್ರ ಇತ್ಯಾದಿಗಳು ಗುಣವಾಗುವುವು.

**ಉರಿಮೂತ್ರಕ್ಕೆ:**

ಹುಣಸೆಯ ಎಲೆಯನ್ನು ಜಜ್ಜಿ ಮೊಸರಿನಲ್ಲಿ ಕಿವಿಚಿ ಸೋಸಿ ಬೆಳಗ್ಗೆ ಸೇವಿಸುವುದರಿಂದ ಗುಣವಾಗುವುದು.

ಅಜ್ಜಿಕಬ್ಬನ್ನು (ಒಂದು ತರದ ಬಂದಣಿಕೆ) ಹಾಕಿ ಮದ್ದಿನ ಗಂಜಿ ಮಾಡಿ ಬೆಳಗ್ಗೆ ಉಣ್ಣುವುದು. ಎಂಟು ದಿನ ಉಣ್ಣುವುದರಿಂದ ಮೇಹ ವ್ಯಾಧಿಯು ಸಹ ಗುಣವಾಗುವುದು.

ಅತ್ತಿಕೆತ್ತೆ, ಬೇಂಗದ ಮರದ ಕೆತ್ತೆ, ಕೊಟ್ಟೆಮುಳ್ಳು, ಗಿಡದ ಬೇರಿನ ಕೆತ್ತೆ, ಇವುಗಳ ಮದ್ದಿನ ಗಂಜಿ ಒಂದು ವಾರ ಸೇವಿಸುವುದರಿಂದ ಗುಣವಾಗುವುದು. ಮಾತ್ರವಲ್ಲ ಬಾಯಿಹುಣ್ಣು, ಹೊಟ್ಟೆಯೊಳಗಿನ ಶೂಲೆ, ಗುಹ್ಯ ವ್ರಣ ಸಹಿತ ಗುಣವಾಗುವುದು.

ದೊಡ್ಡ ಪರ್ಪಟಗಿಡ (ಮಣಿತುಂಬೆ ಗಿಡ) ಸಮೂಲ ತಂದು ಅಷ್ಟಾವಶೇಷ ಕಷಾಯ ಮಾಡಿ ಮೂರು ದಿನ ಸೇವಿಸುವುದರಿಂದ ನಿವಾರಣೆಯಾಗುವುದು.

ಹಳೆಯ ಹುಣಸೆಹಣ್ಣು ಒಂದು ತೊಲೆಯನ್ನು ಸೀಯಾಳದ ನೀರಿನಲ್ಲಿ ಅಥವಾ ಹೂಜಿ ನೀರಿನಲ್ಲಿ ಹಳೆ ಬೆಲ್ಲದೊಂದಿಗೆ ಕದಡಿ ಸೋಸಿ ಸೇವಿಸುವುದರಿಂದ ಉರಿಮೂತ್ರ, ಬಹುಮೂತ್ರ ಇತ್ಯಾದಿಗಳು ಗುಣವಾಗುವುವು. ಹುಣಸೆ ಸಾರು ಮತ್ತು ಅನ್ನ ಉಣ್ಣುವುದು ಹಿತ.

ಏಕನಾಯಕನ ಬೇರಿನ ಕೆತ್ತೆ ಒಂದು ತೊಲೆಯನ್ನು ದನದ ಹುಳಿ ಮಜ್ಜಿಗೆಯಲ್ಲಿ ಅರೆದು ಕುಡಿಯುವುದು.

ನೆಲಚಪ್ಪರೆಯನ್ನು (ಭೂಮಿ ಬಲಾ) ಸಮೂಲ ತಂದು ಸ್ವಚ್ಛಪಡಿಸಿ ಒಂದು ತೊಲೆಯಷ್ಟನ್ನು ನಯವಾಗಿ ಅರೆದು ಒಂದು ಕುಡ್ತೆ ದನದ ನೊರೆ ಹಾಲಿನಲ್ಲಿ ಕದಡಿ ಸೇವಿಸುವುದು. ಬೆಳಗ್ಗೆ ಒಂದು ಹೊತ್ತಿನ ಪ್ರಕಾರ ಮೂರು ದಿನ ಸೇವಿಸಿದರೆ ಗುಣವಾಗುವುದು. ಆರು ದಿನ ಸೇವಿಸಿದರೆ ಶುಕ್ಲ ಧಾತುವೂ ಪುಷ್ಟಿಯಾಗುವುದು. ಮಾತ್ರವಲ್ಲದೆ ಇದು ಸ್ತ್ರೀಯರ ರಕ್ತಸ್ರಾವಕ್ಕೆ ಉತ್ತಮವಾದ ಸಿದ್ಧೌಷಧ.

ಜಾಜಿಯ ಚಿಗುರನ್ನು ದನದ ನೊರೆಹಾಲಿನಲ್ಲಿ ಅರೆದು ಕದಡಿ ಒಂದು ಚಮಚ ಸಕ್ಕರೆ ಹಾಕಿ ಬೆಳಗ್ಗೆ ಒಂದು ಹೊತ್ತು ಪ್ರಕಾರ ಮೂರು ದಿನ ಸೇವಿಸುವುದು. ನೀರುಳ್ಳಿ ಗಡ್ಡೆಯನ್ನು ಸುಟ್ಟು ತುಪ್ಪದಲ್ಲಿ ಅರೆದು ನಾಭಿಗೆ ಲೇಪಿಸುವುದು.

ನಾಲ್ಕು ತೊಲೆ ಅತ್ತಿಕೆತ್ತೆಯನ್ನು ಮೂರು ಕುಡ್ತೆ ಕಲಗಚ್ಚಿನಲ್ಲಿ ಅರೆದು ಸೋಸಿ ಒಂದು ಔನ್ಸ್ ನಿಂಬೆ ಹಣ್ಣಿನ ರಸ ಮತ್ತು ನಾಲ್ಕು ತೊಲೆ ಸಕ್ಕರೆ ಹಾಕಿ ಸೇವಿಸುವುದು. ಹೀಗೆ ಮೂರು ದಿನ ಸೇವಿಸಿದರೆ ಗುಣವಾಗುವುದು.

ಅಡಕೆ ಗಿಡದ ಎಳೆಯ ಚಿಗುರು ಮತ್ತು ಜೀರಿಗೆ ಸಮಾಂಶ ಸೇರಿಸಿ ಎರಡು ತೊಲೆ, ನುಣ್ಣನೆ ಅರೆದು ಮೂರು ಕುಡ್ತೆ ಎಮ್ಮೆ ಮೊಸರಿನ ಕೆನೆ ನೀರಿನಲ್ಲಿ ಕದಡಿ ಒಂದು ತೊಲೆ ಬೆಲ್ಲ ಹಾಕಿ ಬೆಳಗ್ಗೆ ಸೇವಿಸುವುದು. ಮೂರು ದಿನ ಸೇವಿಸಿದರೆ ಗುಣವಾಗುವುದು

ಗಂಧಮೆಣಸಿ (ಬಾಲಮೆಣಸು) ನ ಕಷಾಯದಲ್ಲಿ ಆರು ಯಾ ಹತ್ತು ಬಿಂದು ಶುದ್ಧವಾದ ಗಂಧದೆಣ್ಣೆ ಹಾಕಿ ಸೇವಿಸುವುದು. ಹನ್ನೆರಡು ಯಾ ಇಪ್ಪತ್ತನಾಲ್ಕು ದಿನ ಸೇವಿಸುವುದರಿಂದ ಉಷ್ಣಮೇಹ ರೂಪವಾದ ಉರಿಮೂತ್ರವು ಗುಣವಾಗುವುದು.

ಸಮೂಲ ಪಾಡೆಬಳ್ಳಿಯನ್ನು ಒಂದು ಚಿಟಿಕಿ ಜೀರಿಗೆ ಸೇರಿಸಿ ಜಜ್ಜಿ ರಸ ತೆಗೆದು ಸಮಾಂಶ ದನದ ಮೊಸರು ಸೇರಿಸಿ ಬೆಳಗ್ಗೆ ಸೇವಿಸುವುದು. ಒಂದು ವಾರ ಸೇವನೆಯಿಂದ ಗುಣವಾಗುವುದು.

ದ್ರಾಕ್ಷಿ, ನೆಲ್ಲಿಚಟ್ಟು, ಕಲ್ಲುಸಕ್ಕರೆ ಇವುಗಳನ್ನು ಜಜ್ಜಿ ಅರ್ಧ ಕುಡ್ತೆ ನೀರಿನಲ್ಲಿ ಶೀತ ಕಷಾಯ ಮಾಡಿ ರಾತ್ರೆ ಮುಚ್ಚಿ ಇರಿಸಿ ಬೆಳಗ್ಗೆ ಸೋಸಿ ಅರ್ಧ ಕುಡ್ತೆ ನೈಕದಳಿ ಬಾಳೆಗಡ್ಡೆಯ ರಸ ಸೇರಿಸಿ ಸೇವಿಸುವುದು. ಮೂರು ದಿನ ಸೇವಿಸುವುದು.

ದನದ ನೊರೆಹಾಲು ಮತ್ತು ಹಸಿನೀರು ಸಮಾಂಶ ಸೇರಿಸಿ ಒಂದು ಕುಡ್ತೆ ಬೆಳಗ್ಗೆ ಸೇವಿಸಿದರೆ ದಾಹಯುಕ್ತವಾದ ಮೂತ್ರದೋಷವು ಗುಣವಾಗುವುದು.

ಕರ್ಪಕಂಜಿ ಗಿಡದ ಕೆತ್ತೆಯನ್ನು ದನದ ನೊರೆಹಾಲಿನಲ್ಲಿ ಕಿವಿಚಿ ಸೇವಿಸುವುದು ಹಿತ.

ಪುಳಿಚ್ಚಪ್ಪಿನ ಬೇರು ಸ್ವಚ್ಛಪಡಿಸಿ ದನದ ನೊರೆಹಾಲಿನಲ್ಲಿ ಕಿವಿಚಿ ಸೇವನೆ.

ಅತ್ತಿಮರದ ಬೇರನ್ನು ಕಡಿದು ಸುರಿಯುವ ರಸವನ್ನು ಸಂಗ್ರಹಿಸಿ ಸೇವಿಸುವುದು.

ಹೊನಗೊನ್ನೆ ಗಿಡದ ರಸಕ್ಕೆ ಸಕ್ಕರೆ ಹಾಕಿ ಸೇವಿಸುವುದೂ ಹಿತ.

ಏಲಕ್ಕಿ ಚೂರ್ಣ, ಹುರಿದ ಜೀರಿಗೆಯ ಚೂರ್ಣ, ಸಕ್ಕರೆ ಇವುಗಳನ್ನು ಸಮಾಂಶ ಸೇರಿಸಿ ಬೆಣ್ಣೆಯಲ್ಲಿ ಕಲಸಿ ನೆಕ್ಕುವುದು.

ಬಾಳೆಗಡ್ಡೆಯ ರಸವನ್ನು ಸಮಾಂಶ ಗೋಮೂತ್ರ ಸೇರಿಸಿ ಸೇವಿಸುವುದು.

ಶ್ರೀಗಂಧವನ್ನು ಕಲಗಚ್ಚಿನಲ್ಲಿ ತೇದು ಸಕ್ಕರೆ ಸೇರಿಸಿ ಸೇವಿಸುವುದು.

ಹರಳಬೀಜ ಅಥವಾ ಎಳ್ಳು ಅರೆದು ವಸ್ತಿಗೆ ಲೇಪಿಸುವುದು. ಇದರಿಂದ ಕೂಡಲೆ ಉರಿ ಶಾಂತವಾಗುವುದು.

ಎರಡು ತೊಲೆ ಮೆತ್ತೆ ಸ್ವಚ್ಛಪಡಿಸಿ ಮೂರು ಔನ್ಸು ನೀರಿನಲ್ಲಿ ನೆನೆ ಹಾಕಿ ಮುಚ್ಚಿರಿಸಿ ಬೆಳಗ್ಗೆ ಅರೆದು ಕದಡಿ ಸೇವಿಸುವುದು.

ಹಾಲಿನಲ್ಲಿ ಬೆಲ್ಲವನ್ನು ಕದಡಿ ಸೇವಿಸುವುದರಿಂದ ಶಾಂತಿ.

ನೆಲ್ಲಿಚಟ್ಟನ್ನು ಎಮ್ಮೆಯ ಮೊಸರಿನಲ್ಲಿ ಅರೆದು ಬೆಳಗ್ಗೆ ಸೇವಿಸುವುದು

**ಉರಿಮೂತ್ರ ಮತ್ತು ಮೂತ್ರ ತಡೆಯಾದರೆ:**

ಜೀರಿಗೆಯನ್ನು ಹುರಿದು ಚೂರ್ಣ ಮಾಡಿ ಬೆಲ್ಲದಲ್ಲಿ ಕಲಸಿ ಶುಂಠಿ ಕಾಯಿಯ ಗಾತ್ರದಷ್ಟು ಸೇವಿಸುವುದು.

**ಮೂತ್ರಕಲ್ಲು ಆದರೆ:**

ಒಂದು ತೊಲೆ ಕರಿಲೊಕ್ಕಿ ಬೇರನ್ನು ಸೀಯಾಳದ ನೀರಿನಲ್ಲಿ ಅಥವಾ ಮಜ್ಜಿಗೆಯಲ್ಲಿ ತೇದು ಕದಡಿ ಸೇವಿಸುವುದು. ಒಂದು ವಾರ ಸೇವಿಸುವುದರಿಂದ ಮೂತ್ರಕಲ್ಲು ನಿವಾರಣೆಯಾಗುವುದಲ್ಲದೆ ಹನಿಮೂತ್ರವೂ ಗುಣವಾಗುವುದು.

ಬಾಲಮೆಣಸನ್ನು ನೀರಿನಲ್ಲಿ ಅರೆದು ವಸ್ತಿಗೆ ಲೇಪಿಸಿದರೆ ಕೂಡಲೇ ಮೂತ್ರವು ಸಲೀಸಾಗಿ ಹೋಗುವುದು.

ಕುಂಬಳಕಾಯಿಯ ಬೀಜವನ್ನು ಶೀತ ಕಷಾಯ ಮಾಡಿ ಬೆಲ್ಲ ಹಾಕಿ ಒಂದು ವಾರ ಸೇವಿಸುವುದರಿಂದ ಗುಣವಾಗುವುದು.

ಕೇಪಳ ಬೇರಿನ ಹಾಲು ಕಷಾಯ ಸೇವಿಸುವುದು. ಒಂದು ವಾರದ ವರೆಗೆ ಸೇವಿಸುವುದರಿಂದ ನಿವಾರಣೆಯಾಗುವುದು.

ಜಾಜಿ ಮಲ್ಲಿಗೆಯ ಬೇರನ್ನು ಕಪ್ಪು ಬಣ್ಣದ ಆಡಿನ ಮೂತ್ರದಲ್ಲಿ ಅರೆದು ಸಕ್ಕರೆ ಹಾಕಿ ಬೆಳಗ್ಗೆ ಒಂದು ಹೊತ್ತು ಮೂರು ದಿನ ಸೇವಿಸುವುದು.

ಬಿಲ್ವಪತ್ರೆ ಬೇರನ್ನು ಮಜ್ಜಿಗೆಯಲ್ಲಿ ತೇದು ಒಂದು ತೊಲೆ ಮಜ್ಜಿಗೆಯಲ್ಲೇ ಕದಡಿ ಸೇವಿಸುವುದು.

ಕೊಡಗಪ್ಪಾಲೆ ಬೇರಿನ ಕೆತ್ತೆ ಒಂದು ತೊಲೆಯನ್ನು ಮಜ್ಜಿಗೆಯಲ್ಲಿ ತೇದು ಕದಡಿ ಸೇವಿಸುವುದು.

ಎಳೆ ಚೀನಿಕಾಯಿಯನ್ನು ಸ್ವಲ್ಪ ಉಪ್ಪು ಹಾಕಿ ಬೇಯಿಸಿ ಧಾರಾಳ ತಿನ್ನುವುದು. ಮತ್ತು ಪೆಟ್ಲುಪ್ಪನ್ನು ನಿಂಬೆಹಣ್ಣಿನ ರಸದಲ್ಲಿ ತೇದು ಕಿಬ್ಬೊಟ್ಟೆಗೆ ಲೇಪಿಸುವುದು. ಇದರಿಂದ ಮೂತ್ರಕಲ್ಲು ಮೂತ್ರದೊಂದಿಗೆ ಬಿದ್ದು ಹೋಗಿ ಸುಖವಾಗುವುದು.

ನುಗ್ಗೆ ಕೆತ್ತೆಯ ಅಷ್ಟಾವಶೇಷ ಕಷಾಯ ಮಾಡಿ ಹಿಪ್ಪಲಿ ಚೂರ್ಣವನ್ನು ಮೇಲ್ಪುಡಿ ಹಾಕಿ ದಿನದಲ್ಲಿ ಎರಡು ಹೊತ್ತು ಪ್ರಕಾರ ಒಂದು ವಾರ ಸೇವನೆ.

ನೆಲ್ಲಿಸೊಪ್ಪಿನ ರಸಕ್ಕೆ ಎಳ್ಳೆಣ್ಣೆ ಹಾಕಿ ಸೇವಿಸುವುದು. (ಒಂದು ವಾರ)

ತಶಾಪೆಯ ಚೂರ್ಣವನ್ನು ಮಜ್ಜಿಗೆಯಲ್ಲಿ ಕದಡಿ ಬಿಡದೆ ಒಂದು ವಾರ ಸೇವಿಸುವುದು.

ಮೂಲಂಗಿ ಗಡ್ಡೆಯ ರಸ ಒಂದು ಔನ್ಸು ಸಕ್ಕರೆ ಹಾಕಿ ಸೇವನೆ.

## ಮೂತ್ರದಲ್ಲಿ ಕಲ್ಲು ಯಾ ಹ್ಯೊಗೆ ಇದ್ದರೆ:

ರಾಗಿ ಹುಡಿಯನ್ನು ಜೇನಿನಲ್ಲಿ ಕಲಸಿ, ಮೂರು ಕುಡ್ತೆ ಎಮ್ಮೆಯ ಹಾಲಿನಲ್ಲಿ ಕದಡಿ ಸೇವಿಸುವುದು. ಒಂದು ವಾರ ಸೇವಿಸಬೇಕು.

ಶತಾವರಿಯ ಸ್ವರಸಕ್ಕೆ ಸಮಾಂಶ ನೊರೆಹಾಲು ಸೇರಿಸಿ ಅರ್ಧ ಕುಡ್ತೆ ಸೇವಿಸುವುದು. ಒಂದು ವಾರದ ವರೆಗೆ ಸೇವನೆ ಹಿತ.

## ಪ್ರಮೇಹ ಕಲ್ಲು ಬೆಳೆದರೆ:

ಕಂಚು ಹುಳಿ ಮರದ ಸೊಪ್ಪನ್ನು ಸ್ವಲ್ಪ ಬಿಳಿಜೇರಿಗೆ ಸೇರಿಸಿ ಜಜ್ಜಿ ಸ್ವಲ್ಪ ನೀರು ಸೇರಿಸಿ ಹಿಂಡಿ ಕಾಲು ಕುಡ್ತೆ ರಸವನ್ನು ಸೇವಿಸುವುದು. ಮತ್ತು ಅದರ ರಸವನ್ನೇ ತಲೆಗೂ ಸರ್ವಾಂಗಕ್ಕೂ ಲೇಪಿಸಿ ಒಂದು ಝಾವದ ಬಳಿಕ ಸ್ನಾನ ಮಾಡುವುದು. ಹೀಗೆ ಮೂರು ದಿನ ಚಿಕಿತ್ಸೆ ಮಾಡಿಕೊಂಡರೆ ಕಲ್ಲು ಸ್ವತಃ ಕತ್ತರಿಸಿ ಬೀಳುವುದು.

## ಶರ್ಕರಾ ಮೂತ್ರಕ್ಕೆ:

ಬಿಳಿ ದಾಸವಾಳದ ಬೇರನ್ನು ಜಜ್ಜಿ ಮಜ್ಜಿಗೆಯಲ್ಲಿ ಹಾಕಿ ಕುದಿಸಿ ಸೇವಿಸುವುದು.

ಕಿಸ್ಕಾರ (ಕೇಪಳ) ಹೂವಿನ ರಸ ಅರ್ಧ ಕುಡ್ತೆಯನ್ನು ಅಷ್ಟೇ ಮಜ್ಜಿಗೆ ಸೇರಿಸಿ ಬತ್ತಿಸಿ ರಸ ಮಾತ್ರ (ಅರ್ಧ ಕುಡ್ತೆ) ಉಳಿಸಿಕೊಂಡು ಇಳಿಸಿ ಸೇವನೆ.

**ಮೂತ್ರ ಕೃಛ್ರಕ್ಕೆ:**

ಕರಿಹುರುಳಿಯನ್ನು ಕಷಾಯ ಮಾಡಿ ಸೇವಿಸುವುದು ಹಿತ.

ಒಂದು ತೊಲೆ ಕರಿಮೆಣಸಿನ ಚೂರ್ಣವನ್ನು ದನದ ಬೆಣ್ಣೆಯಲ್ಲಿ ಚೆನ್ನಾಗಿ ಜಾಳಿಸಿ ತಿನ್ನುವುದು. ಕೂಡಲೇ ಸುಖ.

ನೆಲ್ಲಿಚಟ್ಟಿನ ಅಷ್ಟಾವಶೇಷ ಕಷಾಯ ಮಾಡಿ ಅದಕ್ಕೆ ಒಂದು ತೊಲೆ ಬೆಲ್ಲ ಹಾಕಿ ಸೇವಿಸುವುದು.

ನೆಗ್ಗಿಲು ಮುಳ್ಳಿನ ಕಷಾಯ ಮಾಡಿ ಚೆನ್ನಾಗಿ ತಣಿಸಿ ಜೇನು ಮತ್ತು ಸಕ್ಕರೆ ಪೋಲ್ಪುಡಿ ಹಾಕಿ ದಿನದಲ್ಲಿ ಎರಡು ಹೊತ್ತು ಸೇವಿಸುವುದು. ಮೂರು ದಿನ ಸೇವಿಸುವುದು.

ಒಂದು ತೊಲೆ ಹಸಿಯರಸಿನ, ಒಂದು ತೊಲೆ ಕರಿಮೆಣಸು ಒಟ್ಟಿಗೆ ನುಣ್ಣಗೆ ಅರೆದು ಒಂದು ಕುಡ್ತೆ ಎಮ್ಮೆ ಮೊಸರಿನಲ್ಲಿ ಕದಡಿ ಸೇವಿಸುವುದು. ಇದರಿಂದ ಎಲ್ಲಾ ತರದ ಮೂತ್ರ ರೋಗವೂ ನಿವಾರಣೆಯಾಗುವುದು.

**ಮೂತ್ರಕೃಛ್ರ ಮತ್ತು ಹನಿ ಮೂತ್ರಗಳಿಗೆ:**

ಬಿಸಿ ಹಾಲಿಗೆ ಸಕ್ಕರೆ ಹಾಕಿ ಸೇವಿಸುವುದು.

ಶತಾವರಿಯ ಕಷಾಯ ಸೇವಿಸುವುದು.

**ಹನಿ ಮೂತ್ರಕ್ಕೆ:**

ಓರಿಲೆ ತಾವರೆ ಗಡ್ಡೆಯನ್ನು ನೊರೆಹಾಲಿನಲ್ಲಿ ಅಥವಾ ಮೊಸರ ನೀರಿನಲ್ಲಿ ಅರೆದು ಸೇವಿಸಿದರೆ ಶೀಘ್ರ ಗುಣವಾಗುವುದು.

ಸೀಯಾಳದ ನೀರಿನಲ್ಲಿ ಕಾಲು ತೊಲೆ ಯಾಲಕ್ಕಿಯನ್ನು ಚೂರ್ಣ ಮಾಡಿ ಹಾಕಿ ಅಥವಾ ಕೊತ್ತಂಬರಿಯ ಚೂರ್ಣವನ್ನು ಹಾಕಿ ಸೇವಿಸುವುದು. ಮತ್ತು ಈರುಳ್ಳಿಯನ್ನು ಸುಟ್ಟು ಅರೆದು ನಾಭಿಗೆ ಲೇಪಿಸುವುದು.

ಮಜ್ಜಿಗೆಯಲ್ಲಿ ಬೆಲ್ಲವನ್ನು ಕದಡಿ ಸೇವಿಸುವುದು.

ಹಸಿಯಾದ ಪುನರ್ನವಿಯ ಬೇರು (ಬೆಳ್ಳಡಕಿಲು) ಸಮಾಂಶ ಹಸಿ ಕಡಿರು ಬೇರು ಸೇರಿಸಿ ಜಜ್ಜಿ ಹಾಕಿ ಬೆಳ್ತಿಗೆ ಅಕ್ಕಿಯ ತೆಳಿಯಲ್ಲಿ ಕಿವಿಚಿ ಸೋಸಿ ಸಕ್ಕರೆ ಹಾಕಿ ಒಂದು ಕುಡ್ತೆ ಸೇವಿಸುವುದು. ಪಥ್ಯಕ್ಕೆ ತೊಗರಿ

ಸಾರು. ಬೆಳ್ಳಿಗೆ ಅಕ್ಕಿ ಅನ್ನ. ಮತ್ತು ಹಾಲು. ಹೀಗೆ ಈ ಮದ್ದನ್ನು ಕಡು ಪಥ್ಯದಲ್ಲಿ ಹನ್ನೆರಡು ದಿನ ಸೇವಿಸಿದರೆ ಎಲ್ಲಾ ತರದ ಮೂತ್ರದೋಷವೂ ನಿರ್ನಾಮವಾಗುವುದು.

**ಪಿತ್ತಕೃಛ್ರಕ್ಕೆ:**

ದ್ರಾಕ್ಷೆ, ಕಬ್ಬು, ನೆಗ್ಗಿಲುಮುಳ್ಳು, ಇವುಗಳ ಅಷ್ಟಾವಶೇಷ ಕಷಾಯ ಮಾಡಿ ಚೆನ್ನಾಗಿ ತಣಿಸಿ ಜೇನು ಮತ್ತು ಸಕ್ಕರೆ ಮೇಲ್ಪುಡಿ ಹಾಕಿ ಸೇವಿಸುವುದು.

ಸೌತೆ ಕಾಯಿಯ ಬೀಜ, ಜ್ಯೇಷ್ಠಮಧು, ಮರದರಸಿನ, ಇವುಗಳನ್ನು ಒಂದೊಂದು ತೊಲೆ ಪ್ರಕಾರ ಸೇರಿಸಿ ಕಲಗಚ್ಚಿನಲ್ಲಿ ಅರೆದು ಸೇವಿಸುವುದು

**ಎಲ್ಲಾ ತರದ ಕೃಛ್ರಕ್ಕೆ:**

ನೆಗ್ಗಿಲುಮುಳ್ಳನ್ನು ಇಲಿ ಹಿಕ್ಕೆ ಮತ್ತು ಸೌತೆ ಬೀಜಗಳೊಂದಿಗೆ ಕಲಗಚ್ಚಿನಲ್ಲಿ ಅರೆದು ಕಿಬ್ಬೊಟ್ಟೆಗೆ ದಪ್ಪವಾಗಿ ಲೇಪಿಸಿದರೆ ಕೂಡಲೇ ಗುಣವಾಗುವುದು.

**ರಕ್ತ ಮೂತ್ರಕ್ಕೆ:**

ನೇರಳೆಕೆತ್ತೆ, ಅತ್ತಿಕೆತ್ತೆ, ಗೋಳಿಕೆತ್ತೆ, ಇವುಗಳ ರಸ ಒಂದು ಪಾವಿಗೆ ಅಷ್ಟೇ ನೊರೆಹಾಲು ಸೇರಿಸಿ ಒಂದು ತೊಲೆ ಬೆಲ್ಲ ಹಾಕಿ ಕದಡಿ ಬೆಳಗ್ಗೆ ಸೇವನೆ. ಮೂರು ದಿನ ಸೇವಿಸಬೇಕು.

ಲೋಳೆಸರದ ಗಡ್ಡೆ ಇಲ್ಲವೆ ಹೆಡೆಯನ್ನು ಬೆಂಬೂದಿಯಲ್ಲಿ ಹುಗಿದು ಬೇಯಿಸಿ ರಸ ಹಿಂಡಿ ಅರ್ಧ ಕುಡ್ತೆ ರಸಕ್ಕೆ ಎರಡು ತೊಲೆ ನಿಂಬೆ ಹಣ್ಣಿನ ರಸ ಸೇರಿಸಿ, ಅರ್ಧ ಕುಡ್ತೆ ಎಮ್ಮೆ ಮೊಸರನ್ನೂ ಹಾಕಿ ಬೆಳಗ್ಗೆ ಒಂದು ವಾರ ಸೇವಿಸುವುದರಿಂದ ಮೂತ್ರನಾಳ ವ್ರಣಸಹಿತ ಗುಣವಾಗುವುದು.

**ರಕ್ತಮೂತ್ರ, ಹನಿಮೂತ್ರಗಳಿಗೆ:**

ತೆಂಗಿನ ಮರದ ಎಳೆ ಹಿಂಗಾರವನ್ನು ಅಕ್ಕಿ ತೊಳೆದ ನೀರಿನಲ್ಲಿ ಅರೆದು ಸೇವಿಸುವುದು.

**ಮೂತ್ರ ಕಟ್ಟಿಗೆ:**

ಕರಿಂ ಕುರುಂಜಿ (ಕಪ್ಪು ಗೋರಟೆ) ಗಿಡದ ಎಲೆಗಳ ಅಷ್ಟಾವಶೇಷ ಕಷಾಯ ಸೇವನೆ ಹಿತ.

ಪೂಪೀರೆ ಗಡ್ಡೆಯನ್ನು ಕಪ್ಪು ಬಣ್ಣದ ಆಡಿನ ಮೂತ್ರದಲ್ಲಿ ಅರೆದು ಬಿಳೆಗಾರದರಳಿನ ಚೂರ್ಣವನ್ನು ಹಾಕಿ ಸೇವಿಸುವುದು.

ಹರಳ ಬೀಜವನ್ನು ಅಥವಾ ಎಳ್ಳನ್ನು ಅರೆದು ಹೊಕ್ಕಳಿನ ಕೆಳಗೆ (ವಸ್ತಿಗೆ) ದಪ್ಪವಾಗಿ ಲೇಪ ಹಾಕಿದರೆ ಕೂಡಲೇ ಮೂತ್ರ ಬಿಡುವುದು.

ಒಂದು ತೊಲೆ ಸೌತೆಬೀಜವನ್ನು ಅರ್ಧ ತೊಲೆ ಇಂದುಪ್ಪು ಸೇರಿಸಿ ಗಂಜಿ ತಿಳಿಯಲ್ಲಿ ಅರೆದು ಸೋಸಿ ಸೇವಿಸುವುದು.

ಏಲಕ್ಕಿಯ ಚೂರ್ಣವನ್ನು ಬಾಳೆಗಡ್ಡೆಯ ರಸದಲ್ಲಿ ಕದಡಿ ಯಾ ಹಾಲಿನಲ್ಲಿ ಕದಡಿ ಸೇವಿಸುವುದು.

ಅಗಸೆ ಸೊಪ್ಪನ್ನು ಅಷ್ಟಾವಶೇಷ ಕಷಾಯ ಮಾಡಿ ಬಿಳೆಗಾರದರಳಿನ ಚೂರ್ಣವನ್ನು ಮೇಲ್ಪುಡಿ ಹಾಕಿ ಸೇವಿಸುವುದು.

ಬೆಳ್ತಿಗೆ ಅಕ್ಕಿಯ ಗಂಜಿ ಇರಿಸಿ ಅದು ಕುದಿಯುವಾಗ ಗಂಜಿಯನ್ನು ತೆಗೆದು ಅದಕ್ಕೆ ನಿಂಬೆ ಹಣ್ಣಿನ ರಸ ಮತ್ತು ಸಕ್ಕರೆ ಹಾಕಿ ಸೇವಿಸುವುದು.

ಜಾಜಿ ಮಲ್ಲಿಗೆಯ ಬೇರನ್ನು ಕಪ್ಪು ಬಣ್ಣದ ಆಡಿನ ಹಾಲಿನಲ್ಲಿ ತೇದು ಕದಡಿ ಬೆಳಗ್ಗೆ ಸೇವಿಸುವುದು.

ನುಗ್ಗೆ ಬೇರಿನ ಅಷ್ಟಾವಶೇಷ ಕಷಾಯ ಮಾಡಿ ಬಿಸಿ ಬಿಸಿಯಾಗಿ ಕುಡಿಯುವುದು. ಹಾಲು ಅನ್ನ—ಉಪ್ಪು ಸೇರಿಸದೆ ಸಪ್ಪೆ ಉಣ್ಣುವುದು.

**ಮೂತ್ರದಲ್ಲಿ ಕೀವು ಹೋಗುವುದಿದ್ದರೆ:**

ನೆಲಪ್ಪನೆಗಡ್ಡೆ, ಕಾಚಿತಿರುಳು, ನೆಗ್ಗಿಲು ಮುಳ್ಳು, ನೇರಳೆಕೆತ್ತೆ, ಶತಾವರಿಗಡ್ಡೆ ಇವುಗಳ ಪಾದಾವಶೇಷ ಕಷಾಯವನ್ನು ದಿನದಲ್ಲಿ ಎರಡು ಹೊತ್ತಿನಂತೆ ಸೇವಿಸುವುದು. ಉರಿದಾಹಗಳೊಂದಿಗೆ ಸ್ರಾವವಾಗುವುದಿದ್ದರೆ ಈ ಕಷಾಯಕ್ಕೆ ಜೀರಿಗೆ ಮತ್ತು ಬಾಲಮೆಣಸುಗಳ ಚೂರ್ಣ ಎರಡಾಣೆ ತೂಕದಷ್ಟು ಹಾಕಿ ಸೇವಿಸುವುದು ಹಿತ. (ಒಂದು ವಾರ ವಾ 12 ದಿನ)

**ಮೂತ್ರನಾಳದಲ್ಲಿ ವ್ರಣವಾಗಿದ್ದರೆ:**

ಜಾಜಿಸೊಪ್ಪು, ಮದರಂಗಿ ಸೊಪ್ಪು ಇವುಗಳನ್ನು ಅರೆದು ಲೇಪಿಸುವುದು. ಮತ್ತು ಇವುಗಳ ಕಷಾಯದಿಂದಲೇ ಶೌಚವನ್ನು ಮಾಡಿದರೆ ಗುಣವಾಗುವುದು.

ಶ್ರೀಗಂಧವನ್ನು ತೇದು ಒಂದು ತೊಲೆಯಷ್ಟನ್ನು ದನದ ಹಾಲಿನಲ್ಲಿ ಕದಡಿ ಒಂದು ಚಮಚ ತುಪ್ಪವನ್ನೂ ಹಾಕಿ ಸೇವಿಸುವುದು. ಒಂದು ವಾರದ ವರೆಗೆ ಸೇವಿಸುವುದರಿಂದ ರಕ್ತಮೂತ್ರವು ಗುಣವಾಗುವುದು.

**ಮೂತ್ರವು ಗಂಜಿ ತೆಳಿಯಂತೆ ದಪ್ಪವಾಗಿ ಹೋಗುವುದಾದ್ದರೆ:**

ಕಹಿಬೇವಿನ ಕಿತ್ತೆಯನ್ನು ಅಷ್ಟಾವಶೇಷ ಕಷಾಯ ಮಾಡಿ ಚೆನ್ನಾಗಿ ತಣಿಸಿ ಜೇನು ಮೇಲ್ಪುಡಿ ಹಾಕಿ ದಿನದಲ್ಲಿ ಎರಡು ಹೊತ್ತು ಪ್ರಕಾರ ಹನ್ನೆರಡು ಯಾ ಇಪ್ಪತ್ತನಾಲ್ಕು ದಿನ ಸೇವನೆ.

**ಮೂತ್ರವು ಬದ್ಧವಾದರೆ:**

ಮುರದ ಕಲ್ಲನ್ನು ಕಾಯಿಸಿ ತಣ್ಣೀರಿನಲ್ಲಿ ಮುಳುಗಿಸಿ ಆ ಕುದಿದ ನೀರನ್ನು ತಣಿಸಿ ಕುಡಿದರೆ ಮೂತ್ರವು ಬಿಡುವುದು.

ಉಮ್ಮತ್ತದ ಬೇರು, ತೆಂಗಿನ ಬೇರು, ಅಡಕೆ ಮರದ ಬೇರು, ತಾಳೆ ಬೇರು, ಇಲಿಯ ಹಿಕ್ಕೆ ಇವುಗಳಲ್ಲಿ ಯಾವುದಾದರೂ ಒಂದನ್ನು ಕಲಗಚ್ಚಿನಲ್ಲರೆದು ಕಿಬ್ಬೊಟ್ಟೆಗೆ ಲೇಪಿಸುವುದು ಹಿತ.

ಅರ್ಧ ತೊಲೆ ಬಾಲಮೆಣಸಿನ ಚೂರ್ಣವನ್ನು ಒಂದು ಕುಡ್ತೆ ಕಲಗಚ್ಚಿನಲ್ಲಿ ಅರೆದು ಸೇವಿಸುವುದು. ಹೀಗೆ ಮೂರು ದಿನ ಸೇವಿಸಬೇಕು.

ಕುಂಕುಮ ಕೇಸರಿ ಒಂದಾಣೆ ತೂಕವನ್ನು ಅರ್ಧ ಕುಡ್ತೆ ಹಸಿನೀರಿನಲ್ಲಿ ಕದಡಿ ಸೇವಿಸುವುದು.

**ವಾತದಿಂದ ಮೂತ್ರವು ಬಂಧವಾದರೆ:**

ಹರಳ ಬೀಜವನ್ನು ಬೇಯಿಸಿ ನುಣ್ಣಗೆ ಅರೆದು ವಸ್ತಿಗೆ ಲೇಪಿಸುವುದು.

**ಉಷ್ಣದಿಂದ ಮೂತ್ರವು ಬಂಧವಾದರೆ:**

ಎಳ್ಳನ್ನು ಬೇಯಿಸಿ ನುಣ್ಣಗೆ ಅರೆದು ವಸ್ತಿಗೆ ಲೇಪಿಸುವುದು.

**ಮಲಮೂತ್ರಗಳೆರಡೂ ಬಂಧವಾದರೆ:**

ಅಣಲೆಕಾಯಿ ಮತ್ತು ಶುಂಠಿ ಇವುಗಳನ್ನು ಸಮಪ್ರಮಾಣ ಸೇರಿಸಿ ಚೂರ್ಣ ಮಾಡಿ ಬೆಲ್ಲದಲ್ಲಿ ಕಲಸಿ ಪ್ರತಿದಿನ ಒಂದು ತೊಲೆಯ ಪ್ರಕಾರ ತಿನ್ನುವುದು. (ಹಸಿನೀರನ್ನು ಕುಡಿಯಲೇ ಬಾರದು.)

ಬಾಳೆಯ ಹಣ್ಣು ಮತ್ತು ಹುಣಸೆ ಹಣ್ಣು ಇವೆರಡನ್ನೂ ನೀರಿನಲ್ಲಿ ಕಿವಿಚಿ ಸೇವಿಸಿದರೆ ಮಲಮೂತ್ರಗಳು ಸಲೀಸಾಗಿ ಬಿಡುಗಡೆಯಾಗುವುವು.

ಗರಿಕೆಯ ಬೇರಿನ ರಸ, ಹುಣಸೆ ಯಾ ನಿಂಬೆ ಹಣ್ಣಿನ ರಸ, ಮಜ್ಜಿಗೆ ಇವು ಮೂರೂ ಸಮಾಂಶ ಸೇರಿಸಿ ಕುಡಿಯುವುದು.

ತೊಂಡೆ ಬೇರಿನ ರಸಕ್ಕೆ ಕಲ್ಲು ಸಕ್ಕರೆ ಹಾಕಿ ಅರ್ಧ ಯಾ ಒಂದು ಕುಡ್ತೆ ರಸ ಸೇವನೆ.

ತೊಗರಿ ಕಷಾಯ ಸೇವನೆಯೂ ಉಪಯುಕ್ತವಾಗಿದೆ.

ಕುದಿಯುವ ಬಿಸಿನೀರು ಒಂದು ಕುಡ್ತೆಗೆ ಒಂದು ತೊಲೆ ಬೆಣ್ಣೆ ಹಾಕಿ ಹದವಾಗಿ ತಣಿಸಿ ಕುಡಿಯುವುದು.

**ಮೂತ್ರ ವಿಕಾರಕ್ಕೆ:**

ಏಲಕ್ಕಿಯ ಚೂರ್ಣವನ್ನು ಮಜ್ಜಿಗೆಯಲ್ಲಿ ಕದಡಿ ಸೇವಿಸುವುದು.

**ಎಲ್ಲಾ ತರದ ಮೂತ್ರದೋಷಕ್ಕೆ:**

ಬಿಲ್ವಪತ್ರೆ ಸೊಪ್ಪಿನ ಸ್ವರಸ, ದನದ ಮಜ್ಜಿಗೆ ಸಮಾಂಶ ಸೇರಿಸಿ ಅರ್ಧ ಕುಡ್ತೆ ಕುದಿಸಿ ಬತ್ತಿಸಿ ಕಾಲು ಕುಡ್ತೆ ಮಾಡಿ ಇಳಿಸಿ ಬೆಳಗ್ಗೆ ಸೇವಿಸುವುದು. ಪಥ್ಯವಾಗಿದ್ದುಕೊಂಡು ಏಳರಿಂದ ನಲುವತ್ತೆಂಟು ದಿನ ವರೆಗೆ ಸೇವಿಸುವುದು. ಇದರಿಂದ ಮಕ್ಕಳ ಮೂತ್ರದೋಷವು ಸಹ ಪೂರ್ಣ ಗುಣವಾಗುವುದು; ಸಿಹಿ ಮೂತ್ರವೂ ಗುಣವಾದೀತು.

ಬೂದು ಕುಂಬಳದ ಎಲೆಯ ರಸ ಒಂದೌನ್ಸು, ಒಂದು ತೊಲೆ ಎಳ್ಳೆಣ್ಣೆ ಸೇರಿಸಿ ಪ್ರತಿದಿನ ಬೆಳಗ್ಗೆ ಸೇವಿಸುವುದು. ಮೂರು ಯಾ ಆರು ದಿನ ಸೇವಿಸುವುದರಿಂದ ಬಹುಮೂತ್ರ, ಮೂತ್ರದೊಂದಿಗೆ ಧಾತುವಿನ ಸ್ರಾವ, ದಾಹ ಇತ್ಯಾದಿ ಮೂತ್ರದೋಷಗಳು ಗುಣವಾಗುವುವು.

ಶ್ರೀಗಂಧ ಮತ್ತು ಬೇಂಗದ ತಿರುಳು ಇವುಗಳ ಅಷ್ಟಾವಶೇಷ ಕಷಾಯ ಹನ್ನೆರಡು ದಿನ ಸೇವಿಸುವುದರಿಂದ ಗುಣವಾಗುವುದು.
ಶುದ್ಧಿ ಮಾಡಿದ ಚಿತ್ರಮೂಲದ ಬೇರು ಒಂದು ಪಾಲು, ಅಮೃತಬಳ್ಳಿ ಎರಡು ಪಾಲು ಸೇರಿಸಿ ಅಷ್ಟಾವಶೇಷ ಕಷಾಯ ಸೇವನೆ.

**ಮೂತ್ರ ಶುದ್ಧಿಗೆ:**

ಒಂದು ಕುಡ್ತೆ ದನದ ನೊರೆಹಾಲಿನಲ್ಲಿ ಒಂದು ತೊಲೆ ತೇದ ಶ್ರೀಗಂಧವನ್ನು ಕದಡಿ ಸೇವಿಸುವುದು. ಹೀಗೆ ಹನ್ನೆರಡು ದಿನ ಸೇವಿಸಬೇಕು.

**ರಕ್ತ ಮತ್ತು ಮೂತ್ರಶುದ್ಧಿಗೆ:**

ಖದಿರ ಸಾರ (ಕಾಚಿ ತಿರುಳು)ವನ್ನು ಅಷ್ಟಾವಶೇಷ ಕಷಾಯ ಮಾಡಿ ನಾಲ್ಕು ಬಿಂದು ಶುದ್ಧವಾದ ಗಂಧದೆಣ್ಣೆ ಹಾಕಿ ದಿನದಲ್ಲಿ ಎರಡು ಹೊತ್ತು ಪ್ರಕಾರ ಹನ್ನೆರಡು ದಿನ ಸೇವನೆ.

**ಹಳದಿ ಬಣ್ಣವಾಗಿ ಮೂತ್ರ ಹೋಗುವುದಿದ್ದರೆ:**

ಒಂದು ತೊಲೆ ನೆಲನೆಲ್ಲಿ, ಒಂದು ಚಿಟಿಕೆ ಜೀರಿಗೆ ಇವುಗಳನ್ನು ಎಮ್ಮೆಯ ಮಜ್ಜಿಗೆಯಲ್ಲಿ ಅರೆದು ಕದಡಿ ಬೆಳಗ್ಗೆ ಒಂದು ಹೊತ್ತು ಪ್ರಕಾರ ಹನ್ನೆರಡು ದಿನ ಸೇವಿಸುವುದು.

**ಮೂತ್ರದೋಷದಿಂದಾಗುವ ಒಂದು ತರದ ಅಂಜಿಕೆಗೆ:**

ಬೂದಿ ಕುಂಬಳದ ಎಲೆಯ ಹಾಲು ಕಷಾಯ ಒಂದು ವಾರ ಸೇವಿಸುವುದು.

ಭದ್ರಮುಷ್ಠಿಗಡ್ಡೆ, ಲಾವಂಚ, ಪರ್ಪಟ ಗಿಡ ಇವುಗಳ ಅಷ್ಟಾವಶೇಷ ಕಷಾಯ ಸೇವಿಸುವುದು.

**ಬಾಲಕರಿಗೆ ಅರಿವಿಲ್ಲದೆ ರಾತ್ರಿ ಚಾಪೆಯಲ್ಲಿ ಮೂತ್ರ ಹೋಗುವುದಿದ್ದರೆ:**

ಸುಗಂಧಿ ಬೇರನ್ನು ನೊರೆಹಾಲಿನಲ್ಲಿ ತೇದು ಪ್ರತಿದಿನ ಬೆಳಗ್ಗೆ ಸೇವಿಸುವುದು. ಏಳು ದಿನ ಸೇವನೆಯಿಂದ ಗುಣವಾಗುವುದು.

ಚೆಂಡೆಯ ಬೀಜದ ಹಾಲುಕಷಾಯ ಸೇವನೆಯಿಂದ ಗುಣವಾಗುವುದು.

**ನಿದ್ದೆಯಲ್ಲಿ ಮೂತ್ರ—ಇದಕ್ಕಾಗುವ ಕೆಲವು ಪ್ರಯೋಗಗಳು:**

ರಾತ್ರಿಯಲ್ಲಿ ಮಗು ಮಲಗುವ ಹಾಸಿಗೆಯಡಿಯಲ್ಲಿ ಒಂದು ಹಿಡಿ ಬೆಳ್ತಿಗೆ ಅಕ್ಕಿಯನ್ನು ಹಾಕಿ ಬೆಳಗ್ಗೆ ಆ ಅಕ್ಕಿಯನ್ನು ಹುರಿದು ಮಗುವಿಗೆ ತಿನ್ನಿಸುವುದು. (ಮೂರು ದಿನ)

ಮಗುವು ಮೂತ್ರ ಮಾಡಿದ ಚಾಪೆಯಡಿಯ ಮಣ್ಣು ಒಂದು ಚಿಟಿಕೆಯನ್ನು ಹುರಿದು ಚೂರ್ಣ ಮಾಡಿ ಜೇನಿನಲ್ಲಿ ಕಲಸಿ ಆ ಮಗುವಿಗೆ ನೆಕ್ಕಿಸುವುದು. (ಮೂರು ದಿನ)

ಇಲಿಯು ಬಿಲದಿಂದೆಳೆದು ಹಾಕಿದ ಮಣ್ಣು ಒಂದು ಚಿಟಿಕೆಯನ್ನು ಹುರಿದು ಚೂರ್ಣ ಮಾಡಿ ಜೇನಿನಲ್ಲಿ ಜಾಳಿಸಿ ತಿನಿಸುವುದು.) ಮೂರು ದಿನ ಈ ಯಾವುದೇ ಮದ್ದಿನ ಹೆಸರು—ವಿಚಾರ ಮಗುವಿಗೆ ತಿಳಿದಿರಬಾರದು.)

**ಮಕ್ಕಳ ಮೂತ್ರದೋಷಕ್ಕೆ:**

ಇಲಿಕಿವಿ ಗಿಡದ ಕಷಾಯವನ್ನು ಅಥವಾ ಬಂದ ನಾರಿನ ಕಷಾಯವನ್ನು ನಲುವತ್ತೆಂಟು ದಿನಗಳ ವರೆಗೆ ಕುಡಿಸುವುದರಿಂದ ಗುಣವಾಗುವುದು. (ಇದರಿಂದ ಮಕ್ಕಳ ಲಿವರ್ ಸಹ ಗುಣವಾಗುವುದು.)

ಬಿಸಿ ಹಾಲಿಗೆ ಹರಳೆಣ್ಣೆ ಹಾಕಿ ಕುಡಿಸುವುದು. ಸಾಮಾನ್ಯ ಮೂತ್ರ ದೋಷಗಳಿಗೆಲ್ಲಾ ಹಿತವಾದೀತು.

ವಿ.ಸೂ:—ಕಷಾಯ, ಕಲ್ಕ, ಫಾಂಟ, ಶೀತ ಕಷಾಯ, ಕಲ್ಕ. ಇತ್ಯಾದಿ ಔಷಧಗಳ ತಯಾರಿಕೆ ಪ್ರಮಾಣ ವಿವರಗಳಿಗೆ ಪುಸ್ತಕದ ಕೊನೆ ಪುಟಗಳಲ್ಲಿ ನೋಡಿರಿ.

# ಮೂಲವ್ಯಾಧಿ

**ಮೂಲವ್ಯಾಧಿಗೆ:**

ಎಲಗದ ಮಯಣ ಒಂದು ಪಾಲು, ಜಾದ್ರಿಕಾಯಿ ಒಂದು ಪಾಲು, ಶುಂಠಿ ಎರಡು ಪಾಲು ಒಟ್ಟಿಗೆ ಸೇರಿಸಿ ನಿಂಬೆ ಹಣ್ಣಿನ ರಸದಲ್ಲಿ ಅರೆದು ನೆಲ್ಲಿ ಕಾಯಿಯ ಗಾತ್ರ ಮಾತ್ರೆ ಮಾಡಿ ದಿನದಲ್ಲಿ ಒಂದು ಮಾತ್ರೆ ಪ್ರಕಾರ ಮೊಸರಿನಲ್ಲರೆದು ಸೇವನೆ.

ಕೇನೆ (ಸೂರಣ—ಸುವರ್ಣ) ಗಡ್ಡೆಯನ್ನು ಪುಟಪಾಕದಲ್ಲಿ ಬೇಯಿಸಿ ರಸ ತೆಗೆದು ಒಂದು ಚಮಚ ರಸ, ಒಂದು ಚಮಚ ಎಳ್ಳೆಣ್ಣೆ, ಒಂದು ಚಿಟಿಕಿ ಇಂದುಪ್ಪು ಇವುಗಳನ್ನು ಒಟ್ಟು ಸೇರಿಸಿ ಜಾಳಿಸಿ ದಿನದಲ್ಲಿ ಒಂದು ಸಾರಿಯಂತೆ ಒಂದು ವಾರ ಸೇವಿಸುವುದರಿಂದ ನಿಶ್ಶೇಷವಾಗಿ ಗುಣವಾಗುವುದು.

ಅಣಲೆಕಾಯಿಯ ಚೂರ್ಣ ಬೆಲ್ಲದಲ್ಲಿ ಕಲಸಿ ದಿನದಲ್ಲಿ ಒಂದು ತೊಲೆ ಪ್ರಕಾರ ಸೇವಿಸುತ್ತಾ ಬರಲು ಗುಣವಾಗುವುದು.

ಅಮೃತ ಬಳ್ಳಿಯ ಸತ್ವಕ್ಕೆ ಸಮಾಂಶ ಸಕ್ಕರೆ ಸೇರಿಸಿ ಪ್ರತಿ ದಿನ ತಿನ್ನುವುದರಿಂದ ಗುಣವಾಗುವುದು.

ಗಾಮಟೆ ಕೆತ್ತೆಯ ಚೂರ್ಣವನ್ನು ಹೊತ್ತಿಗೆ ಅರ್ಧ ತೊಲೆ ಪ್ರಕಾರ ದಿನದಲ್ಲಿ ಎರಡು ಹೊತ್ತು ದನದ ತುಪ್ಪದಲ್ಲಿ ಕಲಸಿ ತಿನ್ನುವುದು. ಇಪ್ಪತ್ತನಾಲ್ಕು ಪಾ ನಲುವತ್ತೆಂಟು ದಿನ ಸೇವನೆ ಹಿತ.

**ಗುದಭ್ರಂಶವಾದರೆ: (ಗಂಡೆ ಹೊರಡುವುದು)**

ಭಜೆಯ ಚೂರ್ಣವನ್ನು ಕೆಂಡದ ಮೇಲೆ ಹಾಕಿ ಬರುವ ಹೊಗೆಯನ್ನು ಗುದದ್ವಾರಕ್ಕೆ ಒಡ್ಡಿದರೆ ಆ ಕೂಡಲೇ ನಿವಾರಣೆಯಾಗುವುದು.

**ಗುದಾಂಕುರ:**

ಹಸಿಶುಂಠಿಯನ್ನು ಕಳ್ಳಿ ಹಾಲಿನಲ್ಲಿ ಅರೆದು ಬಟ್ಟೆಗೆ ಪೂಸಿ ಬತ್ತಿ ಮಾಡಿ ಆ ಬತ್ತಿಯನ್ನು ರಾತ್ರೆ ಗುದದ್ವಾರದಲ್ಲಿ ತುರುಕಿಸಿಡುವುದು. ಇದರಿಂದ ಮೊಳೆಯು ಕರಗಿ ಹೋಗುವುದು.

ಹದವಾಗಿ ಬೆಳೆದ ಕಳ್ಳಿಯ ಎಲೆಯನ್ನು ಜಜ್ಜಿ ಗುದದ್ವಾರದಲ್ಲಿಟ್ಟು ಕಟ್ಟುವುದು. ಹೀಗೆ ಮೂರು ದಿನ ಕಟ್ಟುವುದರಿಂದ ತುರಿಕೆ, ಕೃಮಿ, ಅರ್ಶಸ್, ಇತ್ಯಾದಿಗಳು ಗುಣವಾಗುವುವು.

ಉರಿಸಣಿಗೆ ಬೇರು, ಬಿಲ್ವಪತ್ರೆ ಬೇರು,ಓಮ, ಶುಂಠಿ, ಇವು ಪ್ರತಿಯೊಂದೂ ಅರ್ಧ ತೊಲೆ ಪ್ರಕಾರ ತೆಗೆದು ಇಲ್ಲವೇ ಯಾವುದಾದರೂ ಒಂದನ್ನೇ ಎರಡು ತೊಲೆ ತೆಗೆದು ಎರಡು ತೊಲೆ ಹಾಡೆಗಡ್ಡೆ ಸೇರಿಸಿ ಅಷ್ಟಾವಶೇಷ ಕಷಾಯ ಮಾಡಿ ಸೇವಿಸುವುದರಿಂದ ಎಲ್ಲಾ ತರದ ಮೂಲವ್ಯಾಧಿಯು ಗುಣವಾಗುವುದು.

ಸಮುದ್ರ ಫಲ ತೇದು ಎರಡಾಣೆ ತೂಕದಷ್ಟನ್ನು ದನದ ಹಾಲಿನಲ್ಲಿ ಕದಡಿ ಸೇವಿಸುವುದು. 7—12 ದಿನ,

ಅಕ್ಕಿ ಹುಡಿ ಮತ್ತು ಅರಸಿನದ ಹುಡಿ ಇವುಗಳನ್ನು ಒಟ್ಟಿಗೆ ಕದಡಿ ಕಾಯಿಸಿ ಇಟ್ಟು ಕಟ್ಟುವುದರಿಂದ ಮೂಲವ್ಯಾಧಿ ಮೊಳೆ ಗುಣವಾಗುವುದು.

ಒಂದು ರಾತಲು ತೆಗ್ಗಾಮೆ ಬೇರನ್ನು ಒಂದು ಕುಡ್ತೆ ದನದ ಹಾಲಿನಲ್ಲಿ ಬೇಯಿಸಿ ನೆರಳಿನಲ್ಲಿ ಒಣಗಿಸಿ ಚೂರ್ಣ ಮಾಡಿ ದಿನದಲ್ಲಿ ಅರ್ಧ ತೊಲೆ ಪ್ರಕಾರ ದನದ ತುಪ್ಪದಲ್ಲಿ ಜಾಳಿಸಿ ತಿನ್ನುವುದು. ನಲುವತ್ತೆಂಟು ದಿನಗಳ ವರೆಗೆ ನಂಜಿನ ಪದಾರ್ಥಗಳನ್ನು ಸೇವಿಸದೆ ಹದವಾಗಿ ಹಾಲು ತಪ್ಪುಗಳನ್ನು ಸೇವಿಸುತ್ತಾ ಔಷಧ ತೆಗೆದುಕೊಳ್ಳುವುದು. ಮತ್ತು—

**ಲೇಪಕ್ಕೆ:** ಹಳೆಯ ಮುಂಡಾಗಿ ಚಾಪೆಯನ್ನು ಸುಟ್ಟು ಕರಿ ಮಾಡಿ ಆ ಕರಿಯನ್ನು ಜೇನಿನಲ್ಲರೆದು ಹರಳೆಣ್ಣೆ ಹಾಕಿ ಲೇಪಿಸುವುದು. ಇದರಿಂದ ಮೂಲವ್ಯಾಧಿ—ಒಳ ಹೊರ ಮೊಳೆಗಳು ಸಹ ನಿರ್ನಾಮವಾಗುವುವು.

ಗರಿಕೆ ಹುಲ್ಲಿನ ರಸ ಅರ್ಧ ಕುಡ್ತೆ ಮತ್ತು ಒಂದು ತೊಲೆ ಜೇನು ಯಾ ಸಕ್ಕರೆ ಹಾಕಿ ಸೇವಿಸುವುದು.

ಕೊರುಂಗು ಮರದ ಚಿಗುರು ತಂದು ಎಳ್ಳೆಣ್ಣೆ ಮತ್ತು ತುಪ್ಪ ಹಾಕಿ ಹುರಿದು ಸಮಾಂಶ ಅರಳು ಸೇರಿಸಿ ಚೂರ್ಣ ಮಾಡಿ ಊಟದ ಆರಂಭದಲ್ಲಿ ಸೇವಿಸುವುದು. ಇದರಿಂದ ಕಟ್ಟಿ ಹೋಗಿರುವ ಗುದವು ಬಿಟ್ಟು ಸರಿಯಾಗಿ ಯುಕ್ತ ಸ್ಥಿತಿಯನ್ನು ಹೊಂದುವುದು.

ಬಿಳಿಯೆಲಗದ ಮರದ ಕೆತ್ತೆ ನಾಲ್ಕು ತೊಲೆಯನ್ನು ಜಜ್ಜಿ ಉಪ್ಪು ತಾಗಿಸದ ಹೊಸ ಪಾತ್ರೆಯಲ್ಲಿ ಹಾಕಿ ಉಣ್ಣಲು ಬೇಕಾದಷ್ಟು ಅಕ್ಕಿ ಮತ್ತು ಅಕ್ಕಿಯು ಬೇಯಲು ಬೇಕಾದಷ್ಟು ನೀರು ಹಾಕಿ ಗಂಜಿ ಮಾಡಿ ಒಂದು ಪಾವು ದನದ ನೊರೆ ಹಾಲು ಹಾಕಿ ಸಪ್ಪೆಯಾಗಿ ಉಣ್ಣುವುದು

ಹೀಗೆ ಹನ್ನೆರಡು ದಿನ ಉಂಡ ಮೇಲೆ ಮೂರು ದಿನ ಬಿಟ್ಟು ಪುನಃ ಹನ್ನೆರಡು ದಿನ. ಆ ಮೇಲೆ ಮೂರು ದಿನ ಬಿಟ್ಟು ಪುನಃ ಹನ್ನೆರಡು ದಿನ ಉಣ್ಣುವುದು. ಈ ಪ್ರಕಾರ ಒಟ್ಟು ನಲ್ವತ್ತೆಂಟು ದಿನ ಈ ಗಂಜಿಯನ್ನುಣ್ಣುವುದರಿಂದ ಎಲ್ಲಾ ತರದ ಮೂಲವ್ಯಾಧಿಯೂ ಗುಣವಾಗುವುದು.

ಸೀಗೆ ಬೀಜದ ಚೂರ್ಣವನ್ನು ಸಮಾಂಶ ಬೆಣ್ಣೆ ಮತ್ತು ತಂಳಸಿ ಬೆಲೆಯ ರಸವನ್ನು ಸೇರಿಸಿ ಜಾಳಿಸಿ ನಾಭಿಗೂ ಮೂಲಕ್ಕೂ ಲೇಪಿಸುವುದು. ಒಣಗಿದಾಗ ಅತ್ತಿ, ಇತ್ತಿ, ಗೋಳಿ, ಅಶ್ವತ್ಥ ಮರಗಳ ಕೆತ್ತೆಯ ಕಷಾಯಂ ದಲ್ಲಿ ಒಂದು ಯಾ ಎರಡು ಗಂಟೆ ಹೊತ್ತು ನಾಭಿಯೂ ಗುದವೂ ಮುಳ ಗಿರುವಂತೆ ಕುಳಿತುಕೊಳ್ಳುವುದು. ಇದರಿಂದ ಮೂಲ ಬಿರಿದಿರುವುದು, ಊದುವುದು, ಮೂಲದ ಮೊಳೆಗಳು, ಕುರು, ಹುಣ್ಣು ಇತ್ಯಾದಿಗಳು ನಿರ್ನಾಮವಾಗಿ ಮೂಲವ್ಯಾಧಿಯು ಜಟ ಸಹಿತ ನಿವಾರಣೆಯಾಗುವುದು.

ನಾಚಿಕೆ ಮುಳ್ಳಿನ ಗಿಡ ಸಮೂಲವಾಗಿ ಜಜ್ಜಿ ತೆಗೆದ ಅರ್ಧ ಕುಡ್ತೆ ಸ್ವರಸಕ್ಕೆ ಮೂರು ತೊಲೆ ಬೆಣ್ಣೆ ಹಾಕಿ ಚೆನ್ನಾಗಿ ಜಾಳಿಸಿ, ಒಂದು ತೊಲೆ ಸಕ್ಕರೆ ಹುಡಿಮಾಡಿ ಸೇರಿಸಿ ಮರ್ದಿಸಿ ಗಾಳಿ ತಾಗದಂತೆ ಭದ್ರವಾಗಿರಿಸಿ ಕೊಂಡು ಪ್ರತಿದಿನ ಬೆಳಗ್ಗೆ ಅರ್ಧ ತೊಲೆ ಪ್ರಕಾರ ಕೆಲವು ದಿನಗಳ ವರೆಗೆ ಸೇವಿಸುವುದು.

ಬಿಳಿ ಎಲಗದ ಹೂವಿನ ಮೊಗ್ಗೆ, ಕಿಸ್ಕಾರ ಹೂ, ಸುಗಂಧಿಯ ಬೇರು, ಇವುಗಳ ವಸ್ತ್ರಗಾಳಿತ ಚೂರ್ಣ ಮಾಡಿ ಕೆಂದಾಳಿ ಸೀಯಾಳದ ನೀರಿನಲ್ಲ ಮೂರು ಗಂಟೆ ಕಾಲ ನೆನೆ ಹಾಕಿ ಒಂದು ಭಾಗ ದನದ ತುಪ್ಪ ಹಾಕಿ ಪಾಕ ಮಾಡುವುದು. ಪಾಕವು ಹದವಾದಾಗ ಇಳಿಸಿ ಒಂದು ಭಾಗ ಕಲ್ಲು ಸಕ್ಕರೆಯ ಚೂರ್ಣವನ್ನು ಸೇರಿಸಿ ತೊಳೆಸಿ ಭದ್ರವಾಗಿರಿಸಿಕೊಂಡು ಹೊತ್ತಿಗೆ ಕಾಲುತೊಲೆ ಪ್ರಕಾರ ದಿನದಲ್ಲಿಎರಡು ಹೊತ್ತು ಸೇವಿಸುವುದು. ಅದರಿಂದ ನಲುವತ್ತೆಂಟು ದಿನ ವರೆಗೆ ಸೇವಿಸಬಹುದು.

ಗದ್ದೆ ಕರಂಡೆ ಗಿಡದ ಸೊಪ್ಪನ್ನು ಒಣಗಿಸಿ ಬೆಳಗ್ಗೆ ದನದ ಹಾಲಿನಲ್ಲಿ ಅಥವಾ ಮೊಸರಿನಲ್ಲಿ ಅರೆದು ಸೇವಿಸುವುದು. ಒಂದು ವಾರ ಸೇವನೆ ಹಿತ. ಉಪ್ಪು ಹುಳಿಗಳನ್ನು ಬಿಟ್ಟು ಹಾಲು ಅನ್ನ ಸೇವಿಸಿ ಪಥ್ಯವಾಗಿರುವುದು.

ಸುವರ್ಣಗಡ್ಡೆಯನ್ನು ದನದ ಹಾಲು ಅಥವಾ ಮೊಸರಿನಲ್ಲಿ ಅರೆದು ಬೆಳಗ್ಗೆ ಸೇವಿಸುವುದು. ಮೇಲಿನಂತೆ ಪಥ್ಯದಿಂದ ಮೂರು ದಿನ ಸೇವನೆ ಹಿತ.

ಶುದ್ಧಿ ಮಾಡಿದ ಚಿತ್ರಮೂಲದ ಬೇರನ್ನು ಪಂಚಗವ್ಯದಲ್ಲಿ ಯಾ ಮಜ್ಜಿಗೆಯಲ್ಲಿ ಅರೆದು ಮಾತ್ರೆ ಮಾಡಿ ಬೆಳಗಿನ ಜಾವದಲ್ಲಿ ಒಂದೊಂದು ಮಾತ್ರೆ ಪ್ರಕಾರ ಸೇವಿಸುವುದು. ಕೆಲವೇ ದಿನಗಳಲ್ಲಿ ಗುಣವಾಗುವುದು.

**ಮೂಲದಲ್ಲಿ ಮೊಳೆಯಿದ್ದರೆ:**

ಒಂದು ಪಾಲು ಜೀರಿಗೆಯನ್ನು ಒಂಬತ್ತು ಪಾಲು ಚೂರಿಗಿಡದ ಎಲೆಯೊಂದಿಗೆ ನುಣ್ಣಗೆ ಅರೆದು ಬೋಗರಿ ಕಾಯಿಯ ಗಾತ್ರದ ಮಾತ್ರೆ ಮಾಡಿ ದಿನಕ್ಕೆ ಒಂದು ಮಾತ್ರೆಯ ಪ್ರಕಾರ ಕೆಲವು ದಿನ ಬೆಳಗ್ಗೆ ಸೇವಿಸುವುದು.

ಗೋಳಿಯ ಎಲೆಯನ್ನು ಸುಟ್ಟು ಕರಿಮಾಡಿ ಎಳ್ಳೆಣ್ಣೆಯಲ್ಲರೆದು ಗುದಕ್ಕೆ ಲೇಪಿಸುವುದು.

ಕಾಡು ಕೇನೆಯ ಗಡ್ಡೆಯನ್ನು ಸಮಾಂಶ ಗುರುಗಂಜಿ ಬೀಜದೊಂದಿಗೆ ಹಸಿನೀರಿನಲ್ಲಿ ನುಣ್ಣಗೆ ಅರೆದು ಲೇಪಿಸುವುದು.

ತುಂಬೆ ಗಿಡದ ಸ್ವರಸದ ಒಂದು ತೊಲೆ, ಕಲ್ಲು ಸುಣ್ಣದ ತಿಳಿನೀರು ಒಂದು ತೊಲೆ ಇವುಗಳನ್ನು ಚೆನ್ನಾಗಿ ಮಿಶ್ರಮಾಡಿ ಸೇವಿಸಿದರೆ ಒಳ ಹೊರ ಮೊಳೆಗಳು ಕರಗಿ ಮಾಯುವುವು.

ಕಾಡು ಕೇನೆ ಗಡ್ಡೆಯ ಮೇಲಿನ ಸಿಪ್ಪೆ ತೆಗೆದು ಗಡ್ಡೆಯನ್ನು ಇಟ್ಟೋವಿನ ಎಲೆಗಳಿಂದ ಭದ್ರವಾಗಿ ಸುತ್ತಿ ಕಟ್ಟಿ ಬೆಂಬೂದಿಯಲ್ಲಿ ಹುಗಿದು ಬೇಯಿಸಿ ತೆಗೆದುತೆಳ್ಳಗೆ ಕತ್ತರಿಸಿ ಒಣಗಿಸಿ ಚೂರ್ಣ ಮಾಡಿ ಹೊತ್ತಿಗೆ ಕಾಲು ತೊಲೆ ಪ್ರಕಾರ ದಿನದಲ್ಲಿ ಎರಡು ಹೊತ್ತು ಮಜ್ಜಿಗೆಯಲ್ಲಿ ಕದಡಿ ಸೇವಿಸುವುದು. ಒಂದು ಯಾ ಎರಡು ವಾರ.

**ಗುದಭ್ರಂಶ—(ಗಡ್ಡೆ ಹೊರಡುವುದು)ಕ್ಕೆ:**

ಹುಣಸೆಯ ಎಲೆ ಮತ್ತು ತುಂಬೆಯ ಎಲೆ ಇವುಗಳ ಕಷಾಯದಲ್ಲಿ ಧಾನ್ಯಾಮ್ಲ ಸೇರಿಸಿ ಯಾ ಸೇರಿಸದೆ ಈ ಕಷಾಯದಿಂದ ಶೌಚ ಮಾಡುವುದು

ಒಂದು ಭಾಗ ಇಂದುಪ್ಪು, ಎರಡು ಭಾಗ ಜೀರಿಗೆ, ಮೂರು ಭಾಗ ಓಮ, ನಾಲ್ಕು ಭಾಗ ಹಿಪ್ಪಲಿ, ಐದು ಭಾಗ ಶುಂಠಿ, ಹದಿನೈದು ಭಾಗ ಅಣಿಲೆಕಾಯಿ ಇವುಗಳನ್ನು ಒಟ್ಟಿಗೆ ಕುಟ್ಟಿ ಚೂರ್ಣಿಸಿ ಅರ್ಧ ತೊಲೆ ಪ್ರಕಾರ ಜೇನು ಮತ್ತು ಸಕ್ಕರೆಯೊಂದಿಗೆ ಜಾಳಿಸಿ ರಾತ್ರಿ ಮತ್ತು ಬೆಳಗ್ಗೆ ಎರಡು ಹೊತ್ತಿನಂತೆ ಹನ್ನೆರಡು ದಿನ ಸೇವಿಸುವುದು.

ಒಂದು ರೂಪಾಯಿ ತೂಕ ಹಿಂಗು, ಎರಡು ರೂಪಾಯಿ ತೂಕ ಛಜಿ, ಮೂರು ರೂಪಾಯಿ ತೂಕ ಶುದ್ಧಿ ಮಾಡಿದ ಚಿತ್ರಮೂಲದ ಬೇರು, ನಾಲ್ಕು ರೂಪಾಯಿ ತೂಕ ಶುಂಠಿ, ಐದು ರೂಪಾಯಿ ತೂಕ ಓಮ, ಆರು ರೂಪಾಯಿ ತೂಕ ಅಣಲೆಕಾಯಿ, ಏಳು ರೂಪಾಯಿ ತೂಕ ಹಿಪ್ಪಲಿ, ಎಂಟು ರೂಪಾಯಿ ತೂಕ ಕಂಕುಷ್ಠ, ಒಂಬತ್ತು ರೂಪಾಯಿ ತೂಕ ತಿಗಡೆ ಇವುಗಳನ್ನು ಒಟ್ಟು ಸೇರಿಸಿ ಚೂರ್ಣ ಮಾಡಿ ಪ್ರತಿದಿನವೂ ಒಂದು ತೊಲೆ ಚೂರ್ಣವನ್ನು ದನದ ತುಪ್ಪದಲ್ಲಿ ಕಲಸಿ ತಿನ್ನುವುದು. ಹಾಲು ಅನ್ನ ಉಣ್ಣುತ್ತಾ ಪಥ್ಯದಿಂದಿರುವುದು. ಇದರಿಂದ ಮೂಲವ್ಯಾಧಿಯು ನಿಶ್ಶೇಷವಾಗಿ ಗುಣವಾಗುವುದು.

ಕರಿಲೊಕ್ಕಿ (ಕರಿನೆಕ್ಕಿ) ಚಿಗುರು ಏಳು, ಬೆಳ್ಳುಳ್ಳಿ ಬೇಳೆ ಏಳು, ಕಾಳು ಮೆಣಸು ಏಳು, ಈ ಮೂರನ್ನೂ ಒಟ್ಟು ಸೇರಿಸಿ ಗಂಡು ಕರುವಿರುವ ಎಮ್ಮೆಯು ಕಟ್ಟು ಮೊಸರಿನಲ್ಲಿ ಅರೆದು ಬೆಳಗ್ಗೆ ಸೇವಿಸುವುದು. ಉಪ್ಪು ಹುಳಿ ಮೆಣಸುಗಳನ್ನು ಬಿಟ್ಟು ಬರೇ ಹಾಲು ಮೊಸರಿನೊಂದಿಗೆ ಉಣ್ಣುವುದು, ಹೀಗೆ ಒಂದು ವಾರ ಸೇವಿಸುವುದರಿಂದ ಗುಣವಾಗುವುದು.

ಸುವರ್ಣಗಡ್ಡೆ, ಚಿತ್ರಮೂಲ (ಶುದ್ಧಿ), ಓಮ, ಶುಂಠಿ, ಕರಿಜೀರಿಗೆ ಸುಗ್ಗಿ ಬೇರಿನ ಕೆತ್ತೆ ಇವುಗಳನ್ನು ಸಮಾಂಶ ಸೇರಿಸಿ ಅರೆದು ಒಂದು ತೊಲೆಯಷ್ಟನ್ನು ಬಿಸಿನೀರಿನಲ್ಲಿ ಕದಡಿ ಸೇವಿಸುವುದು. ಸಾರು ಅನ್ನ ಪಥ್ಯದಲ್ಲಿ ಒಂದು ವಾರ ಸೇವನೆ ಹಿತ.

## ಗಡ್ಡೆಯು ಹೊರಗೆ ಬಂದರೆ (ಗುದ ಭ್ರಂಶಕ್ಕೆ):

ಹಾಗಲ ಸೊಪ್ಪನ್ನು ಉಪ್ಪು ಸೇರಿಸಿ ಅರೆದು ಒಂದು ಕಾಸರ್ಕನ ಎಲೆಗೂ ಮತ್ತು ಮೂಲಕ್ಕೂ ಲೇಪಿಸಿ ಗಡ್ಡೆಯ ಮೇಲೆ ಆ ಎಲೆಯನ್ನಿರಿಸಿ ನಿಧಾನವಾಗಿ ಮೇಲಕ್ಕೆ ಒತ್ತಿದರೆ ಗಡ್ಡೆಯು ಸಣ್ಣದಾಗಿ ಸ್ವಸ್ಥಾನವನ್ನು ಸೇರುವುದು. ಹೀಗೆ ಒಂದೆರಡು ಸರ್ತಿ ಮಾಡುವುದರಿಂದ ಗುಣವಾಗುವುದು.

ಹಲಸಿನ ಮರದ ಹಣ್ಣೆಲೆಗೆ ಎಣ್ಣೆ ಸವರಿ ಸ್ವಲ್ಪ ಬಿಸಿ ಮಾಡಿ ಗುದಕ್ಕೂ ಎಣ್ಣೆ ಸವರಿ ಆ ಎಲೆಯನ್ನಿಟ್ಟು ಒತ್ತಿದರೆ ಗಡ್ಡೆಯು ಸ್ವಸ್ಥಾನವನ್ನು ಸೇರುವುದು.

ಕರಿಮೆಣಸು ಒಂದು ತೊಲೆ, ತತಾಪೆ ಐದು ತೊಲೆ ಸೇರಿಸಿ ವಸ್ತ್ರ ಗಾಳಿತ ಚೂರ್ಣ ಮಾಡಿ ಹೊತ್ತಿಗೆ ಕಾಲು ತೊಲೆ ಪ್ರಕಾರ ದಿನಕ್ಕೆ ಮೂರು ಹೊತ್ತು ಜೇನಿನಲ್ಲಿ ಸೇವಿಸುವುದು. ಒಂದು ವಾರ ಸೇವಿಸುವುದರಿಂದ ಗುಣ ವಾಗುವುದು.

**ರಕ್ತ ಮೂಲಕ್ಕೆ:**

ಎಳ್ಳನ್ನು ಅರೆದು ಒಂದು ತೊಲೆಯನ್ನು ಒಂದು ತೊಲೆ ಬೆಣ್ಣೆಯಲ್ಲಿ ಕಲಸಿ ಸೇವಿಸುವುದು.

ನಾಗಕೇಸರಿ ಮತ್ತು ಕಲ್ಲುಸಕ್ಕರೆ ಸಮಾಂಶ ಚೂರ್ಣ ಮಾಡಿ ಬೆಣ್ಣೆ ಯಲ್ಲಿ ಕಲಸಿ ಸೇವಿಸುವುದು. ಇದರಿಂದ ಗುದ ರಕ್ತಸ್ರಾವವು ಗುಣ ವಾಗುವುದು.

ಒಂದು ತೊಲೆ ಉತ್ತರಣೆಯ ಬೀಜವನ್ನು ಕಲಗಚ್ಚಿನಲ್ಲರೆದು ಸೇವಿ ಸುವುದು.

ಕೆಂಪುತ್ತರಣೆಯೆಲೆ ಮತ್ತು ಶ್ರೀಗಂಧ ಇವುಗಳನ್ನರೆದು ಬೆಣ್ಣೆಯಲ್ಲಿ ಜಾಳಿಸಿ ಸೇವಿಸುವುದು ಮತ್ತು ಉತ್ತರಣೆಯ ಎಲೆಯನ್ನರೆದು ಲೇಪಿಸುವುದು.

ಕರಿಮೆಣಸು ಮತ್ತು ರಾಶ್ಮೆ ಇವು ಒಂದೊಂದು ತೊಲೆಯನ್ನು ಎರಡು ತೊಲೆ ಸುನ್ನಾಮುಕ್ಕಿಯೊಂದಿಗೆ ಸೇರಿಸಿ ವಸ್ತ್ರಗಾಳಿತ ಚೂರ್ಣ ಮಾಡಿ. ಹುಣಸೆ ಹಣ್ಣು ಮತ್ತು ಕೊಂದೆ ಕೋಡಿನ ಗುಳ ಇವುಗಳನ್ನು ಎರಡೆರಡು ತೊಲೆ ಪ್ರಕಾರ ಸೇರಿಸಿ ಅಡಕೆಯ ಗಾತ್ರ ಮಾತ್ರೆ ಮಾಡಿ ರಾತ್ರಿ ಬೆಳಗ್ಗೆ ಒಂದೊಂದು ಮಾತ್ರೆಯಂತೆ ಸೇವಿಸುವುದು.

ಮರದರಸಿನ, ಲವಂಗಪಟ್ಟೆ, ಲಾವಂಚ, ಕಹಿಬೇವಿನ ಕೆತ್ತೆ, ಇವುಗಳನ್ನು ಸಮಾನ ತೂಕ ಸೇರಿಸಿ ಅಷ್ಟಾವಶೇಷ ಕಷಾಯ ಮಾಡಿ ದಿನದಲ್ಲಿ ಎರಡು ಹೊತ್ತಿನ ಪ್ರಕಾರ ಹನ್ನೆರಡು ದಿನ ಸೇವಿಸುವುದರಿಂದ ರಕ್ತಾರ್ಶಸ್ಸು ಗುಣ ವಾಗುವುದು.

ಶ್ರೀಗಂಧ, ರಕ್ತಚಂದನ, ಕಹಿಚುಂಡೆ ಬೇರು, ಉರಿಸಣಿಗೆ ಬೇರು. ಕೊಡಸಿಗೆ ಬೀಜ, ಇವುಗಳ ಅಷ್ಟಾವಶೇಷ ಕಷಾಯ ಚೆನ್ನಾಗಿ ತಣಿಸಿ ಜೇನು ಹಾಕಿ ದಿನದಲ್ಲಿ ಎರಡು ಹೊತ್ತಿನಂತೆ ಹನ್ನೆರಡು ದಿನ ಸೇವಿಸುವುದರಿಂದ ರಕ್ತ ಮೂಲ ಮತ್ತು ರಕ್ತ ಪಿತ್ತವೂ ಗುಣವಾಗುವುದು.

ಬೆಳ್ಳುಳ್ಳಿ. ಅಣಿಲೆಕಾಯಿ ಸಿಪ್ಪೆ, ಸಣ್ಣ ಬದನೆ ಬೇರು. ಮಾಪಿನೆಲೆಯ ತೊಟ್ಟು, ಶುಂಠಿ ಕರಿಮೆಣಸು, ಕಾಡುಕೇನೆ ಇವುಗಳನ್ನು ಎರಡೆರಡು ತೊಲ ತೂಕ ತಗೆದು ಚೂರ್ಣವಾಡಿ ಆರು ಕುಡ್ತೆ ಹುಳಿ ಮಜ್ಜಿಗೆಯಲ್ಲಿ ಕಷಾಯ ವಿರಿಸಿ ಬತ್ತಿಸಿ ಮುಕ್ಕಾಲು ಕುಡ್ತೆ ಮಾಡಿ ಇಳಿಸಿ ಸೇವಿಸುವುದರಿಂದ ಕೂಡಲೇ ರಕ್ತ ಹೋಗುವುದು ನಿಲ್ಲುವುದು.

ಎಳ್ಳು ಮತ್ತು ನೆಲಕುಂಬಳ ಗಡ್ಡೆ ಸಮಾಂಶ ತೆಗೆದು ಚೂರ್ಣ ಮಾಡಿ ಒಂದು ತೊಲೆ ಚೂರ್ಣವನ್ನು ದನದ ನೊರೆ ಹಾಲಿನಲ್ಲಿ ಕದಡಿ ಅರ್ಧ ತೊಲೆ ಜೇನು ಸೇರಿಸಿ ಕದಡಿ ಸೇವಿಸುವುದು. ಹಾಲು ಅನ್ನ ಉಂಡು ಸಾದಾ ಪಥ್ಯ ದಿಂದ ಇರಬೇಕು.

ಒಂದು ತೊಲೆ ಕಹಿಬೇವಿನ ಕಿತ್ತೆಯ ಚೂರ್ಣವನ್ನು ಆಡಿನ ಹಾಲಿ ನಲ್ಲಿ ಕದಡಿ ಸೇವಿಸುವುದು. ಮೂರು ದಿನ ಸಾದಾ ಪಥ್ಯದಲ್ಲಿದ್ದು ಮದ್ದು ಸೇವಿಸಬೇಕು.

ನೀರುಳ್ಳಿ, ಕರಿಮೆಣಸು, ತುಳಸಿಯ ಎಲೆ, ಇವುಗಳನು ಸಮಾಂಶ ಸೇರಿಸಿ ಅರೆದು ನೆಲ್ಲಿಕಾಯಿಯ ಗಾತ್ರದ ಮಾತ್ರೆಗಳನ್ನಾಗಿ ಮಾಡಿ ಪ್ರತಿ ದಿನ ಬೆಳಗ್ಗೆ ಒಂದು ಮಾತ್ರೆ ಪ್ರಕಾರ ಐದು ದಿನ ಸೇವಿಸುವುದರಿಂದ ಪೂರ್ಣ ಗುಣವಾಗುವುದು.

**ದೀರ್ಘಕಾಲದ ರಕ್ತಾರ್ಶಸ್ಸಿಗೆ:**

ಒಂದು ತೊಲೆ ನೀರುಳ್ಳಿ ರಸಕ್ಕೆ ಒಂದು ಚಮಚ ಸಕ್ಕರೆ ಹಾಕಿ ಪ್ರತಿ ದಿನ ಬೆಳಗ್ಗೆ ಸೇವಿಸುವುದು. ಒಂದು ವಾರ ಸೇವನೆಯಿಂದ ಗುಣವಾಗುವುದು.

ಹುರಿದ ಎಳ್ಳು ಮತ್ತು ತಾವರೆ ಕುಸುಮವನ್ನು ಸಮಪ್ರಮಾಣದಲ್ಲಿ ಸೇರಿಸಿ ಚೂರ್ಣ ಮಾಡಿ ಪ್ರತಿದಿನ ಬೆಳಗ್ಗೆ ಅರ್ಧ ತೊಲೆ ಚೂರ್ಣವನ್ನು ಬೆಣ್ಣೆಯಲ್ಲಿ ಕಲಸಿ ಕೆಲವು ದಿಸಗಳ ವರೆಗೆ ಸೇವಿಸುವುದು ಹಿತ.

ಓಮ, ಕೊಡಗಪ್ಪಾಲರಿ, ಹಾಡೆಗಡ್ಡೆ, ಬಿಲ್ವಪತ್ರೆಬೇರು, ಶುಂಠಿ, ರಸಾಂಜನ ಇವುಗಳನ್ನು ವಸ್ತ್ರಗಾಳಿತ ಚೂರ್ಣ ಮಾಡಿ ಇರಿಸಿಕೊಂಡು ಕಾಲು ಕಾಲು ತೊಲೆ ಪ್ರಕಾರ ಹೂಜಿ ನೀರಿನಲ್ಲಿ ಕದಡಿ ದಿನದಲ್ಲಿ ಎರಡು ಹೊತ್ತು ಸೇವಿಸುವುದು. ಇದರಿಂದ ವಾಯು ಯಾ ಹೊಟ್ಟೆನೋವು ಸಹಿತ ವಾದ ಅತಿಯಾದ ರಕ್ತಸ್ರಾವವಾದರೂ ಗುಣವಾಗುವುದು.

ಅಗ್ರುದ ಕಾಯಿಯ ಚೂರ್ಣವನ್ನು ತುಪ್ಪದಲ್ಲಿ ಕಲಸಿ ಗುದದ್ವಾರಕ್ಕೆ ಲೇಪಿಸುವುದು ಹಿತ.

ಒಂದು ಪಾಲು ಕರಿಮೆಣಸು, ಒಂದುವರೆ ಪಾಲು ತತಾಪೆ ಒಟ್ಟು ಸೇರಿಸಿ ವಸ್ತ್ರಗಾಳಿತ ಚೂರ್ಣ ಮಾಡಿ, ಚೂರ್ಣದ ಮೂರು ಪಾಲು ಜೇನು ಹಾಕಿ ಕಲಸಿ ಬಾಟ್ಲಿಯಲ್ಲಿ ಭದ್ರವಾಗಿರಿಸಿಕೊಂಡು ದಿನದಲ್ಲಿ ಮೂರು ಸರ್ತಿ ಒಂದೊಂದು ತೊಲೆಯ ಪ್ರಕಾರ ಸೇವಿಸುವುದು. ಹೀಗೆ ಒಂದು ವಾರ ಸೇವಿಸುವುದರಿಂದ ಅರ್ಶಸ್ಸು, ಗುದಭ್ರಂಶ, ರಕ್ತಸ್ರಾವ ಇತ್ಯಾದಿಗಳೆಲ್ಲ ಗುಣವಾಗುವುವು,

ಕೆಂಪು ಉತ್ತರಣೆ, ತಾವರೆ ಕುಸುಮ, ಶತಾವರಿಗಡ್ಡೆ, ಆಡುಸೋಗೆ ಬೇರು, ಇವುಗಳನ್ನು ಒಂದೊಂದು ತೊಲೆಯಂತೆ ಸೇರಿಸಿ ಜಜ್ಜಿ ಅಷ್ಟಾವಶೇಷ ಕಷಾಯ ಮಾಡಿ ದಿನದಲ್ಲಿ ಎರಡು ಹೊತ್ತು ಪ್ರಕಾರ ಆರು ಯಾ ಹನ್ನೆರಡು ದಿನ ಸೇವಿಸುವುದರಿಂದ ಎಲ್ಲಾ ವಿಧದ ರಕ್ತಾರ್ಶಸ್ಸೂ ಗುಣವಾಗುವುದು.

**ಮಕ್ಕಳ ಅರ್ಶಸ್ಸಿಗೆ:**

ಓಮ, ಶುಂಠಿ, ಹಾಡೆಗಡ್ಡೆ, ದಾಳಿಂಬೆ ಓಡು, ಕೊಡಸಿಗೆ ಬೀಜ, ಇವುಗಳನ್ನು ಸಮಾಂಶ ಸೇರಿಸಿ ಚೂರ್ಣ ಮಾಡಿ ಈ ಚೂರ್ಣವನ್ನು ಮಜ್ಜಿಗೆ ಯಲ್ಲಿ ಅಥವಾ ಬೆಲ್ಲದಲ್ಲಿ ಕಲಸಿ ತಿನ್ನಿಸುವುದು.

**ಮಕ್ಕಳ ರಕ್ತಾರ್ಶಸ್ಸಿಗೆ:**

ಎಳ್ಳನ್ನು ನುಣ್ಣಗೆ ಅರೆದು ಬೆಣ್ಣೆಯಲ್ಲಿ ಜಾಳಿಸಿ ಸೇವಿಸುವುದು. ಕೆಲವು ದಿನಗಳ ವರೆಗೆ ಬಿಡದೆ ಸೇವಿಸುತ್ತಲಿದ್ದರೆ ಗುಣವಾಗುವುವು.

ನಾಗಕೇಸರವನ್ನು ಚೂರ್ಣ ಮಾಡಿ ಸಮಾಂಶ ಸಕ್ಕರೆ ಸೇರಿಸಿ ಬೆಣ್ಣೆ ಯಲ್ಲಿ ಕಲಸಿ ಸೇವಿಸುವುದು.

ಕೊಡಸಿಗೆ ಬೀಜದ ಚೂರ್ಣವನ್ನು ಜೇನಿನಲ್ಲಿ ಕಲಸಿ ಸೇವಿಸುವುದು.

**ಆಷನ ಗಂಡವಾಲೆಗೆ:**

ರಾತ್ರಿ, ಹುಣ್ಣಿರುವ ಸ್ಥಳದಲ್ಲಿ ಬಾಳೆ ಹಣ್ಣು ಇರಿಸಿ ಕೌಪೀನ ಕಟ್ಟಿ ನಿದ್ರಿಸುವುದು. ಬೆಳಗ್ಗೆ ಅದನ್ನು ತೆಗೆದು ತಲೆ ಕೆಳಗೆ ಮಾಡಿ ನಿಂತು ಹುಣ್ಣಿಗೆ ಕಳ್ಳಿ ಹಾಲನ್ನು ಹಚ್ಚುವುದು. ಹೀಗೆ ಮೂರು ದಿನ ಮಾಡಿದರೆ ಪೂರ್ಣವಾಗಿ ಗುಣವಾಗುವುದು.

(ಕಳ್ಳಿ ಹಾಲು ಹುಣ್ಣಿಗೆ ವಿನಹಾ ಬೇರೆಲ್ಲಿಯೂ ತಾಗಬಾರದೆಂಬು ದಕ್ಕಾಗಿ ಈ ಕ್ರಮವನ್ನು ಹೇಳಿದೆ.)



ಗದ್ದೆ ಕರಂಡೆ

# ಅಗ್ನಿದಗ್ಧ ವ್ರಣ ಚಿಕಿತ್ಸೆ

**ಬೆಂಕಿ ತಾಗಿದ ಕೂಡಲೇ ಉರಿಶಮನ ಮಾಡುವುದಕ್ಕೆ:**

ಮುಂಡಿ ಗೆಣಸಿನ ಗಿಡದ ಕೈ (ಎಲೆಯ ತೊಟ್ಟಿನ ಭಾಗ) ತಂದು ಜಜ್ಜಿ ರಸ ತೆಗೆದು ಈ ರಸವನ್ನು ಬೆಂಕಿ ತಾಗಿದ ಭಾಗಕ್ಕೆ ತುರಿಕೆ ಉಂಟಾಗುವ ವರೆಗೆ ಎಡೆಬಿಡದೆ ಧಾರೆ ಹೊಯ್ಯುತ್ತಿದ್ದರೆ ಉರಿ ಶಾಂತವಾಗುವುದಲ್ಲದೆ ವ್ರಣವಾಗದೆ ಸುಲಭವಾಗಿ ಗುಣವಾಗುವುದು.

ದಡಬಡಿಕೆ ಗಿಡದ ಎಲೆಯನ್ನು ನೀರು ಸೇರಿಸದೆ ಜಜ್ಜಿ ರಸ ತೆಗೆದು ಉರಿ ನಿಂದು ತುರಿಕೆ ಪ್ರಾರಂಭಿಸುವ ವರೆಗೂ ಆ ರಸವನ್ನು ಬೆಂಕಿ ತಾಗಿದ ಭಾಗಕ್ಕೆ ಸಂಪೂರ್ಣವಾಗಿ ಬಿಡದೆ ಧಾರೆ ಹೊಯ್ದರೆ ಉರಿ ಶಮನವಾಗಿ ಶೀಘ್ರದಲ್ಲೇ ಗುಣವಾಗುವುದು.

ತೆಂಗಿನ ಕಾಯಿಯ ತನಿ ಹಾಲು ಮತ್ತು ಸುಣ್ಣ ಇವುಗಳನ್ನು ಸೇರಿಸಿ ಚೆನ್ನಾಗಿ ಜಾಳಿಸಿ ಲೇಪಿಸುತ್ತಿರುವುದು. ಇದರಿಂದ ಗುಳ್ಳೆಗಳು ಸಹ ಬಾರದೆ ಬೇಗನೆ ಗುಣವಾಗುವುದು.

ಬೆಂಕಿ ತಾಗಿ ಚರ್ಮ ಸುಲಿದಿರದೆ ಕೆಂಪು ಮಾತ್ರ ಆಗಿದ್ದರೆ ಉಪ್ಪು ಮತ್ತು ದನದ ತುಪ್ಪವನ್ನು ಒಟ್ಟಿಗೆ ಸೇರಿಸಿ ಚೆನ್ನಾಗಿ ಅರೆದು ಲೇಪಿಸುವುದು ಉತ್ತಮ.

ಚೆಂದಳಿಕನ ಮರದ ಮಯಣಕ್ಕೆ ಸಮಾಂಶ ತೆಂಗಿನೆಣ್ಣೆ ಸೇರಿಸಿ ಇವುಗಳಷ್ಟೇ ನೀರು ಸೇರಿಸಿ ಚೆನ್ನಾಗಿ ಅರೆದು ಮುಲಾಮಿನಂತಾದಾಗ ಲೇಪ ಹಾಕುವುದು. ವ್ರಣ ತೊಳೆಯಲು ಅತ್ತಿ, ಇತ್ತಿ, ಗೋಳಿ, ಅಶ್ವತ್ಥ ಈ ನಾಲ್ಕು ಮರಗಳ ಕೆತ್ತೆಯ ಕಷಾಯವನ್ನು ಉಪಯೋಗಿಸಬೇಕು.

ಅಶ್ವತ್ಥ ಮರದ ಕೆತ್ತೆಯನ್ನು ಅರೆದು ಎಳ್ಳೆಣ್ಣೆಯಲ್ಲಿ ಜಾಳಿಸಿ ಲೇಪಿಸುವುದು ಹಿತ.

ಎಳ್ಳನ್ನು ದನದ ಹಾಲಿನಲ್ಲಿ ಅರೆದು ಲೇಪಿಸುವುದು.

ಜೋಳದ ಹಳೆಯ ಕುಂಡಿಗೆ (ಕುಣಿಕೆ)ಯನ್ನು ಹೊತ್ತಿಸಿ ಕರಿಮಾಡಿ ಬೆಣ್ಣೆಯಲ್ಲಿ ಅರೆದು ಲೇಪಿಸುವುದು.

ಎಳ್ಳೆಣ್ಣೆ ಮತ್ತು ಸುಣ್ಣದ ತಿಳಿನೀರು ಇವುಗಳನ್ನು ಸಮಾಂಶ ಸೇರಿಸಿ ಚೆನ್ನಾಗಿ ಜಾಳಿಸಿ ಮೊಸರಿನಂತಾದಾಗ ಧಾರೆ ಹೊಯ್ಯುವುದು. ಹೀಗೆ ಉರಿ ತಣಿಯುವ ತನಕ ಬಿಡದೆ ಧಾರೆ ಹೊಯ್ಯಬೇಕು.

ಹಳೆಯ ಜೇನು ಧಾರೆ ಹೊಯ್ಯುವುದರಿಂದ ಉರಿಶಮನವಾಗಿ ವ್ರಣವು ಸುಲಭವಾಗಿ ಗುಣವಾಗುವುದು.

ತೆಂಗಿನಎಣ್ಣೆ ಮತ್ತು ಸುಣ್ಣದ ತಿಳಿನೀರು ಇವುಗನ್ನು ಸಮಾಂಶ ಸೇರಿಸಿ ಜಾಳಿಸಿ ಧಾರೆ ಹೊಯ್ಯುವುದರಿಂದಲೂ ಉರಿ ಶಾಂತವಾಗುವುದು.

ನೀರಿನಲ್ಲಿರುವ ಹಾವಸೆಯನ್ನು ಚೆನ್ನಾಗಿ ಹಿಂಡಿ ಕೊಡಹಿ ನೀರು ಆರಿಸಿ ಬೆಂದ ಭಾಗವು ಸಂಪೂರ್ಣವಾಗಿ ಮುಚ್ಚುವಂತೆ ಇರಿಸುವುದರಿಂದ ಉರಿಯು ಶಮನವಾಗುವುದಲ್ಲದೆ ಬೆಂಕಿ ತಾಗಿದ ಚಿಹ್ನೆ ಕೂಡಾ ಕಾಣದಂತೆ ವ್ರಣವು ಮಾಯುವುದು.

**ಬೆಂಕಿ ತಾಗಿ ಹುಣ್ಣಾಗಿದ್ದರೆ:**

ಗರಿಕೆಯ ರಸ ನಾಲ್ಕು ಪಾಲು ಮತ್ತು ತೆಂಗಿನ ಎಣ್ಣೆ ಒಂದು ಪಾಲು ಒಟ್ಟು ಸೇರಿಸಿ, ದಾಸವಾಳದ ಮೊಗ್ಗೆಯನ್ನು ಅರೆದು ಸೇರಿಸಿ ಎಣ್ಣೆಯನ್ನು ಚೆನ್ನಾಗಿ ಕಾಯಿಸಿ ಇಳಿಸಿ ಸೋಸಿ ಈ ಎಣ್ಣೆಯನ್ನು ಧಾರೆ ಎರೆಯುವುದರಿಂದ ಬೇಗನೆ ಗುಣವಾಗುವುದು.

ಉಳೆ (ಜಿಂಕೆ—ಕಾಡುಪ್ರಾಣಿ)ಯ ತುಪ್ಪವನ್ನಾಗಲೀ ಅಥವಾ ಅದರ ಚರ್ಮವನ್ನು ಸಣ್ಣದಾಗಿ ಕತ್ತರಿಸಿ ಹಾಕಿ ಕಾಯಿಸಿದ ತೆಂಗಿನ ಎಣ್ಣೆಯನ್ನಾಗಲೀ ಪದೇ ಪದೇ ಹಚ್ಚುವುದರಿಂದ ಮಾಯುವುದು.

ತ್ರಿಫಲೆಗಳನ್ನು ಹುರಿದು ಕರಕು ಮಾಡಿ ಎಳ್ಳೆಣ್ಣೆಯಲ್ಲಿ ಅರೆದು ಅಥವಾ ಎಣ್ಣೆಯಲ್ಲೇ ಹುರಿದು ಕರಿ ಮಾಡಿ ಅರೆದು ಲೇಪಿಸುವುದು.

ಮದ್ದರಸನ ಮರವನ್ನು ಕಲ್ಲಿನಿಂದ ಜಜ್ಜಿ ತೆಗೆದ ತೊಗಟೆಯನ್ನು ನೀರು ಸೇರಿಸದೆ ಅರೆದು ತೆಂಗಿನೆಣ್ಣೆ ಹಾಕಿ ಕಾಯಿಸಿ ಹದಪಾಕದಲ್ಲಿ ಇಳಿಸಿ ಸೋಸಿ ಈ ಎಣ್ಣೆಯನ್ನು ಹಚ್ಚಿದರೆ ಗುಣವಾಗುವುದು.

ಪೊಲಿಬಳ್ಳಿ ಗಿಡ ಸಮೂಲ, ಬೆಳ್ಳಟ್ಟೆ ಗಿಡದ ಬಿಳಿಯ ಎಲೆ ಮತ್ತು ಹೂ, ತಲೆ ಕೂದಲಿನ ಕರಿ, ಒಣ ಕೊಬರಿಯ ಹೋಳು ಇವುಗಳನ್ನು ಸಮಾಂಶ ವಾಗಿ ಸೇರಿಸಿ ತೆಂಗಿನ ಎಣ್ಣೆಯಲ್ಲಿ ಹುರಿದು ಅರೆದು ಈ ಕಲ್ಕದ ಎಂಟು ಪಾಲಷ್ಟು ನೀರುಳ್ಳಿಯ ರಸ, ಗರಿಕೆ ಹುಲ್ಲಿನ ರಸ ಮತ್ತು ತೆಂಗಿನ ಎಣ್ಣೆ ಇವುಗಳನ್ನು ಸೇರಿಸಿ ಹದ ಬೆಂಕಿಯಲ್ಲಿ ಮಳಲುಪಾಕದಲ್ಲಿ ಇಳಿಸಿ ಸೋಸಿ ಈ ಎಣ್ಣೆಯನ್ನು ಪದೇ ಪದೇ ಲೇಪಿಸುತ್ತಿರುವುದರಿಂದ ಗುಣವಾಗುವುದು.

ಗರಿಕೆ ಹುಲ್ಲನ್ನು ತೆಂಗಿನ ಎಣ್ಣೆಯಲ್ಲಿ ಹುರಿದು ಕರಕು ಮಾಡಿ ಅದ ರಲ್ಲೇ ಅರೆದು ಕೊಳಂಬಿನಂತೆ ಮಾಡಿ ಇರಿಸಿಕೊಂಡು ಪದೇ ಪದೇ ಹಚ್ಚು ತ್ತಿರುವುದು.

ಬಿಳಿಸರಳಿ (ಬೊಳ್ಸರೊಳಿ) ಗಿಡದ ಚಿಗುರು ತಂದು ನೀರು ಸೇರಿಸದೆ ಅರೆದು ತೆಂಗಿನೆಣ್ಣೆ ಹಾಕಿ ಕಾಯಿಸಿ ಪಾತ್ರಪಾಕಕ್ಕೆ ಗಂಧಕದ ಚೂರ್ಣ ಕೂದಲಿನ ಕರಿ ಹಾಕಿ ಇರಿಕೊಂಡು ಈ ಎಣ್ಣೆಯನ್ನು ಆರಾರ ಹಚ್ಚುವುದ ರಿಂದ ವ್ರಣವು ಮಾಯುವುದು,

ದಡಬಡಿಕೆ ಗಿಡದ ಸ್ವರಸ ನಾಲ್ಕು ಪಾಲು, ಎಳ್ಳೆಣ್ಣೆ ಒಂದು ಪಾಲು ಹಾಕಿ ಕಾಯಿಸಿ ಮಳಲು ಪಾಕದಲ್ಲಿ ಇಳಿಸಿ ಕರಿಜೀರಿಗೆ ಚೂರ್ಣ ಮೇಲ್ಪುಡಿ ಹಾಕಿ ಈ ಎಣ್ಣೆ ಹಚ್ಚುತ್ತಿರುವುದು.

## ದೀರ್ಘಕಾಲದಿಂದ ಒಣಗದಿರುವ ಬೆಂಕಿ ತಾಗಿದ ವ್ರಣಕ್ಕೆ:

ಅಂಬಟೆಯ ಎಲೆಯನ್ನು ತೆಂಗಿನ ಎಣ್ಣೆಯಲ್ಲಿ ಹುರಿದು ಕರಿಮಾಡಿ ಸಮಾಂಶ ಕೂದಲಿನ ಕರಿಯನ್ನೂ ಸೇರಿಸಿ ನುಣ್ಣಗೆ ಅರೆದು ಪದೇ ಪದೆ, ಲೇಪಿಸುವುದು. ಆರಂಭದಲ್ಲೇ ಈ ಕೊಳಂಬು ಮಾಡಿ ಹಚ್ಚಿದರೆ ಬಿಳಿಕಲೆ ಅಥವಾ ದಡ್ಡು ಸಹಾ ಬಾರದೇ ಸ್ವಚ್ಛವಾಗಿ ಗುಣವಾಗುವುದು.

ಹಾಡೆಗಡ್ಡೆ ಮತ್ತು ಹುಣಸೆಯ ಬೀಜದ ಸಿಪ್ಪೆ ಇವುಗಳನ್ನು ಸಮಾಂಶ ವಾಗಿ ಸೇರಿಸಿ ತೆಂಗಿನ ಎಣ್ಣೆಯಲ್ಲಿ ಹುರಿದು ಕರಿ ಮಾಡಿ ಅವುಗಳಷ್ಟೇ ಕೂದ ಲಿನ ಕರಿ ಮತ್ತು ಸ್ವಲ್ಪ ಗಂಧಕದ ಚೂರ್ಣವನ್ನೂ ಹಾಕಿ ಒಟ್ಟಿಗೆ ಅರೆದು ಮುಲಾಮು ಮಾಡಿ ಲೇಪಿಸುವುದರಿಂದ ವ್ರಣ, ಕಲೆ, ದದ್ದು, ಎಲ್ಲವೂ ಪೂರ್ಣವಾಗಿ ಗುಣವಾಗುವುವು.

**ಬೆಂಕಿ ತಾಗಿದ ಹುಣ್ಣಿನ ಕಲೆ ಬಿಳಿಯದಾದರೆ:**

ಅಂಬಟೆ ಮರದ ಕೆತ್ತೆ ಅಥವಾ ಎಲೆಯನ್ನು ಸಣ್ಣದಾಗಿ ಕತ್ತರಿಸಿ ತುಪ್ಪದಲ್ಲಿ ಹುರಿದು ಕರಕು ಮಾಡಿ ಅರೆದು ಕೊಳಂಬು ಮಾಡಿ ಲೇಪಿಸುವುದು.

**ಸಿಡಿಮದ್ದಿನಿಂದ ಸುಟ್ಟು ಹೋದ ವ್ರಣಕ್ಕೆ:**

ದಡ್ಡಾಲದ ಕೆತ್ತೆಯನ್ನು ಜೀರಿಗೆ ಸೇರಿಸಿ ಅರೆದು, ಆರಿದಂತೆ ಪುನಾ ಪುನಾ ಲೇಪಿಸುತ್ತಿರುವುದರಿಂದ ಶೀಘ್ರವಾಗಿ ಗುಣವಾಗುವುದು. (ಇದು ರಹಸ್ಯಯೋಗವು)

**ಅಗ್ನಿದಗ್ಧ ವ್ರಣಕ್ಕೆ ಅದ್ವಿತೀಯ ಚಿಕಿತ್ಸಾ ವಿಧಾನ ಮತ್ತು ತೈಲ ಯೋಗವು:**

ಬೆಂಕಿ ತಾಗಿದ ಭಾಗವು ದೇಹದ ಎಡಭಾಗವಾಗಿದ್ದರೆ ಅಕ್ಕಿಬಳ್ಳಿಯ ಬಲಭಾಗದ ಎಲೆಗಳನ್ನೂ, ಬಲಭಾಗವಾಗಿದ್ದರೆ ಎಡಭಾಗದ ಎಲೆಗಳನ್ನೂ, ಎರಡೂ ಭಾಗಗಳಿಗೂ ತಾಗಿದರೆ ಎರಡೂ ಭಾಗದ ಎಲೆಗಳನ್ನೂ, ಅವುಗಳ ಬಾಲದಂತಹ ತೊಟ್ಟಿನ ಭಾಗವನ್ನು ಬಿಟ್ಟು ಕಬ್ಬಿಣ ತಾಗಿಸದೆ ಒಂದೊಂದಾಗಿ ಕೈಯಿಂದಲೇ ಕೊಯಿದು ತಂದು ಹಿಸುಕಿ ಒಂದು ಪಾತ್ರೆಯಲ್ಲಿ ಹಾಕಿ ಎಲೆಗಳು ಮುಳುಗಲು ಬೇಕಾಗುವಷ್ಟು ತೆಂಗಿನೆಣ್ಣೆ ಸೇರಿಸಿ ಚೆನ್ನಾಗಿ ಕಾಯಿಸಿ ಎಣ್ಣೆಯ ಮೇಲೆ ಬೆಂಕಿಯ ಕಿರಣ ತಗಲಿದಾಗ ಇಳಿಸಿ ಚೆನ್ನಾಗಿ ಅರೆದು ಕೊಳಂಬಿನಂತೆ ಮಾಡಿ ಇರಿಸಿಕೊಂಡು ವ್ರಣಭಾಗಕ್ಕೆ ಸಂಪೂರ್ಣ ಗಾಳಿ ತಗಲಲು ಎಡೆಯಿಲ್ಲದಂತೆ ಈ ಕೊಳಂಬನ್ನು ಪದೇ ಪದೇ ಹಚ್ಚುತ್ತಿರುವುದು. ದಿನದಲ್ಲಿ ಎರಡು ಬಾರಿ ವ್ರಣವನ್ನು ಸ್ವಚ್ಛವಾದ ಹಸಿನೀರಿನಿಂದ ಶುದ್ಧವಾಗಿ ತೊಳೆದು, ಮೆತ್ತನೆಯ ಹಾಗೂ ಸ್ವಚ್ಛವಾದ ಬಟ್ಟೆಯ ತುಂಡನ್ನು ಒದ್ದೆ ಮಾಡಿ ಚೆನ್ನಾಗಿ ಹಿಂಡಿ ವ್ರಣದ ಮೇಲೆ ಒತ್ತಿ ನೀರಿನ ತೇವವನ್ನು ಪೂರ್ಣವಾಗಿ ಆರಿಸಿ ತೆಗೆದು ಪುನಃ ಕೊಳಂಬನ್ನು ಲೇಪಿಸುವುದು.

**ಸೂಚನೆ:**—ಬಹಳ ಕಠಿಣವಾಗಿ ಬೆಂದಿದ್ದರೆ ಮುಂಡಿ ಗೆಣಸಿನ ಗಿಡದ ಎಲೆಯನ್ನು ಹಾಸಿ ಬೆಂಕಿ ತಾಗಿದ ಭಾಗವನ್ನು ಅದರ ಮೇಲಿರಿಸಿ ಮೇಲಿನ ಕೊಳಂಬನ್ನು ಆರಲು ಬಿಡದೆ ಹಚ್ಚುತ್ತಿದ್ದರೆ ಶೀಘ್ರವಾಗಿ ಹಾಗೂ ಸುಲಭವಾಗಿ ಗುಣವಾಗುವುದು. ಹೊಟ್ಟೆ ಉರಿ ಬರುವುದಿದ್ದರೆ ಕುಂಬಳ ಕಾಯಿ

ಯಾನು ಜಜ್ಜಿ ರಸ ತೆಗೆದು ಒಂದು ಯಾ ಎರಡು ಕಂಚ್ಚೆ ರಸಕ್ಕೆ ಸಕ್ಕರೆ ಹಾಕಿ ಕದಡಿ ಸೇವಿಸುವುದು. ವ್ರಣಕ್ಕೆ ಬಿಸಿನೀರಾಗಲೀ ಕಷಾಯವಾಗಲೀ ತಾಗಿಸಲೇ ಬಾರದು. ಸಂಜೀಪ ಪದಾರ್ಥಗಳನ್ನು ತಿನ್ನಬಾರದು ಇದರಿಂದ ಕಟ್ಟು, ಹುರಿ, ಬಿಳಿಕಲೆ. ಊಸ ಇತ್ಯಾದಿ ಯಾವ ಕೊರತೆಯೂ ಬಾರದೆ, ವ್ರಣವು ಗುಣವಾಗುವುದು. ಇದು ಉಪದೇಶ ಲಬ್ಧ ಯೋಗವು.

ವಿ. ಸೂ:—ಬೆಂಕಿತಾಗಿದ ಕೂಡಲೇ ನೀರು ತಾಗಿಸಬಾರದು. ತೊಳೆಯಲು ಹೇಳಿರುವ ಕಷಾಯದಲ್ಲಿಯೇ ವ್ರಣವನ್ನು ಸ್ವಚ್ಛವಾಗಿ ತೊಳೆದುಕೊಳ್ಳಬೇಕು. (ಯೋಗದಲ್ಲಿ ಹಸಿನೀರು ಹೇಳಿದ್ದರೆ ಅದನ್ನೇ ಉಪಯೋಗಿಸಬೇಕು) ವ್ರಣವಾಯಲು ಆರಂಭವಾಯಿತೆಂದು ಎಣ್ಣೆ ಹಚ್ಚುವುದನ್ನು ಕಡಿಮೆ ಮಾಡಬಾರದು. ತೊಳೆಯುವಾಗ ಹುಣ್ಣಿನ ಸಿಪ್ಪೆಯಾಗಲೀ ಕೀವಾಗಲೀ ಉಳಿಯದಂತೆ ಸ್ವಚ್ಛವಾಗಿ ತೊಳೆದು ತೇವವನ್ನೂ ಒಣಗಿಸಬೇಕು. ವ್ರಣವು ಪೂರ್ತಿಯಾಗಿ ಗುಣವಾಗದೇ ಬಿಸಿಲಿಗೆ ಹೋಗಬಾರದು. ವ್ರಣದಲ್ಲಿ ಸದಾ ಎಣ್ಣೆಪಸೆ ಇರುವಂತೆ ಜಾಗರೂಕತೆ ವಹಿಸಬೇಕು. ಮತ್ತು ವ್ರಣದಲ್ಲಿ ಕೀವು, ಹೊಟ್ಟು ನಿಲ್ಲದಂತೆ ಸದಾ ಸ್ವಚ್ಛಪಡಿಸಬೇಕು. ವ್ರಣ ತೊಳೆಯಲು ಪ್ರತ್ಯೇಕ ದ್ರವ ಹೇಳದಿದ್ದಲ್ಲಿ ಕೊಜಂಬೆ ಸೊಪ್ಪಿನ ಕಷಾಯದಲ್ಲಿ ತೊಳೆಯುವುದು ಉತ್ತಮ.

**ಅಗ್ನಿಸ್ಥಂಭನ:**

ಕೆಂಪು ಅಗಸೆಯ ಮರದ ಬೇರನ್ನು ಮನುಷ್ಯನ ಮೂತ್ರದಲ್ಲಿ ಅರೆದು ಕೈಗೆ ಲೇಪಿಸಿದರೆ ಕೈಯಲ್ಲಿ ಬೆಂಕಿ ಹಿಡಿದರೂ ಸುಡುವುದಿಲ್ಲ.

ಅಂಕೋಲೆ ಬೇರು ಮತ್ತು ಭಜೆ ಇವುಗಳನ್ನು ಸಮಾಂಶ ಸೇರಿಸಿ ನೀರಿನಲ್ಲಿ ಅರೆದು ಲೇಪಿಸುವುದರಿಂದಲೂ ಅಗ್ನಿಸ್ಥಂಭನವಾಗುವುದು.

# ಆಗಂತುಕ ವ್ರಣ ಚಿಕಿತ್ಸೆ

## ಗಾಯಗಳಿಂದ ರಕ್ತ ಸುರಿಯುವುದನ್ನು ನಿಲ್ಲಿಸಲಿಕ್ಕೆ:

ತುಳಸಿಯ ಎಲೆಯ ರಸವನ್ನು ಗಾಯಕ್ಕೆ ಧಾರೆ ಹೊಯ್ಯುವುದು.

ಕೆಂಪುತ್ತುರಣಿಯ ಎಲೆಯ ರಸವನ್ನು ಧಾರೆ ಎರೆಯುವುದೂ ಹಿತ.

ಮಾವಿನ ಮಿಡಿಯ ತೊಟ್ಟು ಮುರಿಯುವಾಗ ಒಸರುವ ಸೊನೆ (ಮಯಣ)ಯನ್ನು ಭದ್ರವಾಗಿ ತೆಗೆದಿರಿಸಿದ್ದು ಗಾಯವಾದ ಕೂಡಲೇ ಇದರಲ್ಲಿ ಹತ್ತಿಯನ್ನು ನೆನೆಸಿ ಗಾಯದ ಮೇಲಿರಿಸಿ ಬಿಗಿಯಾಗಿ ಬಟ್ಟೆ ಕಟ್ಟುವುದು, ಇದರಿಂದ ರಕ್ತ ಸುರಿಯುವುದು ನಿಲ್ಲುವುದಲ್ಲದೆ ಗಾಯವೂ ಸುಲಭವಾಗಿ ಗುಣವಾಗವುದು.

ಗಡಿಮದ್ದು ಗಿಡದ ಎಲೆಯನ್ನು ಒಂದು ಕಡಲೆಯ ಕಾಳಿನಷ್ಟು ಒದ್ದೆ ಸುಣ್ಣವನ್ನು ಸೇರಿಸಿ ಅರೆದು ಗಾಯದ ಮೇಲಿರಿಸಿ ಬಟ್ಟೆ ಕಟ್ಟುವುದು. ಇದರಿಂದ ಗಾಯವು ಶೀಘ್ರವಾಗಿ ಮಾಂಸ ಬೆಳೆದು ಗುಣವಾಗುವುದು.

ಗೋವಾಳ್ಕುಂಡ(ಬೇಲಿ ಔಡಲ) ಗಿಡದ ರಸ (ಹಾಲು—ಮಯಣ) ವನ್ನು ಗಾಯಕ್ಕೆ ಧಾರೆ ಎರೆಯುವುದು. ಇದರಿಂದ ರಕ್ತದ ಒಸರುವಿಕೆ ಚಿಮ್ಮುವಿಕೆಗಳು ನಿಂತು ಸುಖವಾದೀತು.

## ಗಾಯಗಳನ್ನು ಮಾಯಿಸಲಿಕ್ಕೆ:

ಮದ್‌ವಾಳ್ ಕಾರೆಯ ಎಲೆಗಳನ್ನು ಹುರಿದು ಕರಿ ಮಾಡಿ ಗಾಯಕ್ಕೆ ಹಾಕುವುದು. ಅಥವಾ ಅದರದೇ ಚಿಗುರನ್ನು ಒಂದು ಚಿಟಿಕೆ ಜೀರಿಗೆ ಸೇರಿಸಿ ಅರೆದು ತೆಂಗಿನ ಎಣ್ಣೆ ಹಾಕಿ ಕಾಯಿಸಿ ಈ ಎಣ್ಣೆ ಹಚ್ಚುವುದು.

ಬಿಳಿ ತಾರ್ತವಲು ಗಿಡವನ್ನು ನೀರು ಸೇರಿಸದೆ ಅರೆದು, ಗಾಯದೊಳಗೆ ಅದರದೇ ರಸವನ್ನು ತುಂಬಿ ಮೇಲೆ ಅರೆದ ಮದ್ದನ್ನು ಇರಿಸಿ ಕಟ್ಟುವುದು. ಹೀಗೆ ಮೂರು ದಿನ ಯಾ ದಿನ ಮದ್ದು ತಂದು ಅರೆದು ಇರಿಸಿ

ಕಟ್ಟುವುದು. ಗಾಯಕ್ಕೆ ನೀರು ತಾಗಿಸಬಾರದು. ಇದರಿಂದ ಗಾಯವು ಹಳ ಬೇಗನೇ ಆಶ್ಚರ್ಯಕರವಾಗಿ ಗುಣವಾಗುವುದು.

ಹರಳಗಿಡವನ್ನು ಸಮೂಲವಾಗಿ ಜಜ್ಜಿ ತೆಗೆದ ರಸ ಮತ್ತು ಎಳ್ಳೆಣ್ಣೆ ಇವುಗಳನ್ನು ಸಮಾಂಶವಾಗಿ ಸೇರಿಸಿ ಈಶ್ವರ ಬಳ್ಳಿಯ ಬೇರನ್ನು ಅರೆದ ಕಲ್ಕ ಸೇರಿಸಿ ಎಣ್ಣೆ ಕಾಯಿಸಿ ಸೋಸಿ ಇರಿಸಿಕೊಂಡು ಈ ಎಣ್ಣೆಯನ್ನು ಹಚ್ಚುವುದು.

ಮೇಲೆ ಹೇಳಿದ ಗಡಿಮದ್ದು ಗಿಡದ ಪ್ರಯೋಗವು ರಕ್ತವನ್ನು ನಿಲ್ಲಿಸುವುದು. ಮಾತ್ರವಲ್ಲದೆ ಗಾಯವನ್ನೂ ಗುಣಪಡಿಸುವುದು. ಒಸಕೆ, ಕೊಡಲಿ ಮೊದಲಾದವುಗಳಿಂದಾದ ಗಾಯಗಳಲ್ಲೂ ಇದು ಶೀಘ್ರ ಗುಣಕಾರಿ. ಇದೇ ಗಿಡದ ಎಲೆಗಳನ್ನು ಒಂದು ಚಿಟಿಕೆ ಉಪ್ಪು ಸೇರಿಸಿ ಅರೆದು ತೆಂಗಿನೆಣ್ಣೆ ಹಾಕಿ ಕರಕಾಗುವಂತೆ ಕಾಯಿಸಿ ಅರೆದು ಕೊಳಂಬು ಮಾಡಿ ಈ ಕೊಳಂಬು ಲೇಪಿಸುತ್ತಿದ್ದರೆ ಗಡಿಗಾಯಗಳು ಸುಲಭವಾಗಿ ಗುಣವಾಗುವುವು. (ಕಬ್ಬಿಣ, ಉಕ್ಕು ತಾಗಿದ ನಂಜು ಪರಿಹಾರಕ್ಕೆ ಇದು ವಿಶೇಷ.)

ನೀರುಳ್ಳಿಯನ್ನು ಸಣ್ಣದಾಗಿ ಕತ್ತರಿಸಿ ತೆಂಗಿನೆಣ್ಣೆ ಸೇರಿಸಿ ನೀರುಳ್ಳಿಯ ಪೋಳು ಕೆಂಪಾಗುವ ವರೆಗೆ ಕಾಯಿಸಿ ಈ ಎಣ್ಣೆಯನ್ನು ಹಚ್ಚುವುದು.

ಈಂದಿನ ಮರದ ಕೆತ್ತೆಯನ್ನು ಕಲ್ಲಿನಿಂದ ಜಜ್ಜಿ ಎಬ್ಬಿಸಿ ತಂದು ತೆಂಗಿನ ಎಣ್ಣೆಯಲ್ಲಿ ಹುರಿದು ಕರಕಾಗುವಂತೆ ಕಾಯಿಸಿ ಅದರಲ್ಲೇ ಅರೆದು ಕೊಳಂಬು ಮಾಡಿ ಇರಿಸಿಕೊಂಡು ಹುಣ್ಣಿನಿಂದ ಎಣ್ಣೆ ಆರಲು ಬಿಡದೆ ಹಚ್ಚುತ್ತಿರುವುದು.

ತೆಂಗಿನಕಾಯಿಯ ನೀರನ್ನು ಕುದಿಸಿ ಬತ್ತಿಸಿ ಕುಳದಂತೆ ಮಾಡಿ ಇರಿಸಿಕೊಂಡು ಗಾಯ ಮೊದಲಾದವುಗಳಿಗೆ ಹಾಕಿದರೆ ಶೀಘ್ರವಾಗಿ ಗುಣವಾಗುವುದು.

ಗಾಯ ತೊಳೆಯಲು ಬೆಳ್ಳುಳ್ಳಿಯನ್ನು ಜಜ್ಜಿ ಕಿವಿಚಿದ ನೀರನ್ನು ಉಪಯೋಗಿಸುವುದು ಉತ್ತಮ. ತಾಗಿದ ಕೂಡಲೇ ಇದರ ಧಾರೆಯಿಂದ ರಕ್ತ ಕಟ್ಟುವುದು.

**ಗಡಿ ಹುಣ್ಣುಗಳಿಗೆ:**

ಕಯ್ಯೊಳು ಗಿಡದ ಚಿಗುರಿನ ಸ್ವರಸ ಮತ್ತು ತೆಂಗಿನೆಣ್ಣೆ ಸಮಾಂಶ ಸೇರಿಸಿ ಹಸಿ ಅರಸಿನ ಅರೆದು ಕಲ್ಕ ಹಾಕಿ ಎಣ್ಣೆ ಕಾಯಿಸಿ ಲೇಪಿಸುವುದು.

ಕರಿ ತುಳಸಿ ಎಲೆಯನ್ನು ಜೇನಿನಲ್ಲಿ ಅರೆದು ಲೇಪಿಸುವುದು.

ಜೇಷ್ಠಮಧುವನ್ನು ಗಂಧದಂತೆ ತೇದು ತುಪ್ಪದಲ್ಲಿ ಕಾಯಿಸಿ ಈ ತುಪ್ಪ ಲೇಪಿಸುವುದು. ಇದು ಜಜ್ಜು ಗಾಯಗಳಿಗೂ ಉತ್ತಮ.

**ಜಜ್ಜಿ ಪೆಟ್ಟಾಗಿ ರಕ್ತ ಹಾಳಾದರೆ:**

ಮೈತ್ರ ಬಳ್ಳಿ, ಕಾಳಮೆಣಸು, ಉಪ್ಪು, ಹಳೆಯ ಹುಣಸೆ ಹಣ್ಣು ಕಂಚು ಹುಳಿ ಸಿಪ್ಪೆ ಇವುಗಳನ್ನು ಸಮಾಂಶ ಸೇರಿಸಿ ಅರೆದು ಕುದಿಸಿ ಬಿಸಿ ಬಿಸಿ ಯಾಗಿ ಲೇಪಿಸುವುದು. ಇದರಿಂದ ಜಜ್ಜಿ ಹೋಗಿ ಆದ ನೋವು ಬಾವು ಇತ್ಯಾದಿಗಳು ಗುಣವಾಗುವುವು. ಒಳಗಿನ ರಕ್ತ ಶುದ್ಧಿಯಾದೀತು.

ಹರಳೆಣ್ಣೆಯನ್ನು ಹಚ್ಚಿ ತಿಕ್ಕಿದರೂ ಗುಣವಾದೀತು.

**ವಿಷಕ್ರಿಮಿ ತಾಗಿದ ವ್ರಣಕ್ಕೆ:**

ಕರಿಜೀರಿಗೆಯನ್ನು ಅರೆದು ತೆಂಗಿನ ಎಣ್ಣೆಯಲ್ಲಿ ಹಾಕಿ ಕಾಯಿಸಿ ಈ ಎಣ್ಣೆಯನ್ನು ಆಗಾಗ ಹಚ್ಚುವುದು.

ಪೊಂಗಾರದ ಅರಳು ಮಾಡಿ ಜೇನಿನಲ್ಲಿ ಅರೆದು ಲೇಪಿಸುವುದು.

**ವಿಷಕ್ರಿಮಿ ತಾಗಿದ ವ್ರಣ ಯಾವುದರಿಂದಲೂ ಗುಣವಾಗದಿದ್ದರೆ:**

ಮೈಲ್‌ತುತ್ತನ್ನು ಭಸ್ಮ ಮಾಡಿ, ಒಂದು ಅಕ್ಕಿಯ ಕಾಳಿನಷ್ಟು ಭಸ್ಮ ವನ್ನು ಜೇನಿನಲ್ಲಿ ಅರೆದು ಲೇಪಿಸುವುದರಿಂದ ಎಲ್ಲಾ ವಿಧ ವ್ರಣವೂ ಗುಣ ವಾಗುವುದು. (ಇದು ವಿಷವಾದುದರಿಂದ ಯಾವ ರೀತಿಯಿಂದಲಾದರೂ ಸೇವನೆಯಾಗದಂತೆ ಎಚ್ಚರವಿರಲಿ.)

ಅತ್ತಿ ಕೆತ್ತೆಯನ್ನು ತುಪ್ಪದಲ್ಲಿ ಅರೆದು ಲೇಪಿಸುವುದು ಎಲ್ಲಾ ವ್ರಣ ಗಳಿಗೂ ಪರಿಹಾರ.

**ಜಜ್ಜು ಗಾಯವಾಗದೆ ರಕ್ತ ಕನಿದರೆ:**

ನಮ್ಮ ಆರೋಗ್ಯ ಸಾಧನ ಪುಸ್ತಕದ ನಂ. ೧೪೧ನೇ ವಂಶತ್ವಗಾದಿ ಕಷಾಯ ಸೇವಿಸಿರಿ. ರಕ್ತ ಹೆಪ್ಪುಗಟ್ಟಿರುವುದು ಪೂರ್ತಿ ಹೋದೀತು.

# ಚರ್ಮರೋಗ ಚಿಕಿತ್ಸೆ

**ಲೂತಿ ಹುಣ್ಣಿಗೆ:**

ಪಾಜಳೆ ಕೆತ್ತೆಯನ್ನು ತೆಂಗಿನಕಾಯಿ ಹಾಲಿನಲ್ಲಿ ಅರೆದು ನೆಲ್ಲಿಕಾಯಿಯಷ್ಟು ಪ್ರತಿದಿನ ಬೆಳಗ್ಗೆ ಸೇವಿಸುವುದು. ಮತ್ತು ಅದರದೇ ಕೆತ್ತೆಯನ್ನು ತೆಂಗಿನಕಾಯಿ ಹಾಲಿನಲ್ಲಿ ಚೆನ್ನಾಗಿ ಅರೆದು ಬಿಸಿಲಿನಲ್ಲಿ ಇರಿಸಿ ತೆಗೆದ ಬಿಸಿ ಎಣ್ಣೆಯನ್ನು ಲೇಪಿಸುವುದರಿಂದ ಶೀಘ್ರ ಗುಣವಾಗುವುದು.

ಉರಿಸಣಿಗೆಯ ಎಲೆಯನ್ನು ಕರಕು ಮಾಡಿ ಬೆಣ್ಣೆಯಲ್ಲಿ ಯಾ ಎಣ್ಣೆಯಲ್ಲಿ ಅರೆದು ಲೇಪಿಸುವುದು.—ಅಥವಾ

ಉತ್ತರಣೆಯ ಎಲೆಯನ್ನು ಕರಕು ಮಾಡಿ ಬೆಣ್ಣೆಯಲ್ಲಿ ಅಥವಾ ಎಣ್ಣೆಯಲ್ಲಿ ಅರೆದು ಲೇಪಿಸುವುದು.

ಕರಿನುಕ್ಕಿಯ ರಸ, ತೆಂಗಿನಕಾಯಿಯ ತನಿಹಾಲು ಇವುಗಳನ್ನು ಸಮಾಂಶವಾಗಿ ಸೇರಿಸಿ ಅರ್ಧ ಕುಡ್ತೆ ಪ್ರಕಾರ ಪ್ರತಿದಿನ ಬೆಳಗ್ಗೆ ಸೇವಿಸುವುದು ಮತ್ತು ಅಂಗೈ ಅಂಗಾಲುಗಳಿಗೆ ನೆಲಕ್ಕಂಚಿ ಗಿಡವನ್ನು ಸಮೂಲವಾಗಿ ಅರೆದು ಲೇಪಿಸುವುದು. ಅನಂತರ ಸಾಸಿವೆಯ ಎಣ್ಣೆಯನ್ನು ಹಚ್ಚಿ ಬಿಸಿ ನೀರಿನಿಂದ ಸ್ನಾನ ಮಾಡುವುದು. (೧ ವಾರ)

ಮಾವಿನ ಪಪ್ಪು ಹಾಗೂ ಅಣಲೆಕಾಯಿ ಇವುಗಳನ್ನು ಸಮಾಂಶ ಸೇರಿಸಿ ನೊರೆ ಹಾಲಿನಲ್ಲಿ ಅರೆದು ಆರಿದಂತೆ ಲೇಪಿಸುತ್ತಿರುವುದು.

ಕಸ ಕಸೆಯ ಬೀಜವನ್ನು ನೊರೆ ಹಾಲಿನಲ್ಲಿ ಅರೆದು ಲೇಪಿಸಿದರೆ ಎಲ್ಲಾ ತರದ ತ್ವಗ್ರೋಗವೂ ಗುಣವಾಗುವುದು,

ನೆಗ್ಗಿಲಮುಳ್ಳು, ಲೂತಿಕಾಯಿ, ಪಾರೆಮುಳು, ಒಣಗಿದ ಶುಂಠಿ ಇವುಗಳ ಅಷ್ಟಾವಶೇಷ ಕಷಾಯ ಮಾಡಿ ಸೋಸಿ ಚೆನ್ನಾಗಿ ತಣಿಸಿ ಜೇನು ಮೇಲ್ಪೊಡಿ ಹಾಕಿ ದಿನದಲ್ಲಿ ಎರಡು ಹೊತ್ತು ಸೇವಿಸುವುದು.

ಅಶ್ವತ್ಥ ಮರದ ಕೆತ್ತೆಯನ್ನು ಯಾ ಅರಸಿನದ ಗಡ್ಡೆಯನ್ನು ಭಸ್ಮ ಮಾಡಿ ಭಸ್ಮದಷ್ಟೇ ಸುಣ್ಣ ಸೇರಿಸಿ ದನದ ತುಪ್ಪ ಹಾಕಿ ಚೆನ್ನಾಗಿ ಅರೆದು

ಮುಲಾಮಿನಂತೆ ಆದಾಗ ಬಾಟ್ಲಿಯಲ್ಲಿ ಹಾಕಿ ಭದ್ರವಾಗಿ ಮುಚ್ಚಿ ಇರಿಸಿ ಕೊಳ್ಳುವುದು. ಇದನ್ನು ಲೇಪಿಸುವುದರಿಂದ ಗುದದ ಸಮೀಪದಲ್ಲಿ ಬರುವ ಬಾವು (ಆಸನಗ್ರಂಥಿ) ಮೂಲಕುರು, ಕಟಿವ್ರಣ, ದುಷ್ಟವ್ರಣ, ಗಜಕರ್ಣ, ದದ್ದು ಇತ್ಯಾದಿ ಗುಣವಾಗುವುವು.

**ದದ್ದು ನಿರ್ಮೂಲನಕ್ಕೆ:**

ಕರಿಮುಂಡಿ ಗಿಡದ ಎಲೆಯ ದಂಡಿನ ಹೊರ ನಾರು ತೆಗೆದು ದಂಡನ್ನು ಕತ್ತರಿಸಿ ಹೋಳುಗಳನ್ನಾಗಿ ಮಾಡಿ, ಹೋಳಿನ ಆರು ಪಾಲು ಅಕ್ಕಿ ಸೇರಿಸಿ ಅರೆದು ಒಂದು ರಾತ್ರಿ ಇರಿಸಿದ್ದು ಮರುದಿನದ ಬೆಳಗ್ಗೆ ದೋಸೆಮಾಡಿ ಎರಡು ಯಾ ಮೂರು ದೋಸೆ ತಿನ್ನುವುದು. (ಮೂರು ವಾ ಆರುದಿನ)

(ತುರಿಸಿದರೆ ಇಂದುಪ್ಪು ಮತ್ತು ಮಜ್ಜಿಗೆ ಪ್ರತಿವಿಧಿ)

ಪಾಲಾಷ ಬೀಜದ ಪಪ್ಪು ಇಪ್ಪೆ ಹಣ್ಣಿನ ರಸದಲ್ಲಿ ತೇದು ಹಚ್ಚುವುದು.

ಪಾಜಳೆ ಮಯಣ ಯಾ ಪಪ್ಪಾಯಿ ಮಯಣ ಇಲ್ಲವೆ ಹಾಡೆ ಹಣ್ಣಿನ ರಸ, ಇವುಗಳಲ್ಲಿ ಯಾವುದಾದರೊಂದನ್ನು ಲೇಪಿಸುವುದು.

ಕಹಿಬೇವಿನ ಸೊಪ್ಪನ್ನು ನೆಲ್ಲಿಚಟ್ಟಿನೊಂದಿಗೆ ವಸ್ತ್ರಗಾಳಿತ ಚೂರ್ಣ ಮಾಡಿ ತುಪ್ಪದಲ್ಲಿ ಜಾಳಿಸಿ ದಿನದಲ್ಲಿ ಎರಡು ಹೊತ್ತು ಪ್ರಕಾರ ಹನ್ನೆರಡರಿಂದ ನಲುವತ್ತೆಂಟು ದಿನ ವರೆಗೆ ಸೇವಿಸುವುದು.

(ಪಥ್ಯ—ಸಪ್ಪೆ ಆಹಾರ ಮತ್ತು ಹಾಲು, ಅನ್ನ ಸೇವನೆ. ಇದರಿಂದ ಎಲ್ಲಾ ವಿಧ ತ್ವಗ್ರೋಗವೂ ಗುಣವಾಗುವುದು.

ಬಿದಿರನ್ನು ಭಸ್ಮಮಾಡಿ ಎಣ್ಣೆಯಲ್ಲಿ ಕಲಸಿ ಲೇಪಿಸುವುದು.

ಹರಳ ಬೀಜದ ಪುಪ್ಪು ನಾಲ್ಕು ಪಾಲು ಮತ್ತು ಮೈಲ್‌ತುತ್ತು ಒಂದು ಪಾಲು ಸೇರಿಸಿ ನುಣ್ಣಗೆ ಅರೆದು ಕಲಾಯಿಯಿಲ್ಲದ ತಾಮ್ರದ ಪಾತ್ರೆಯಲ್ಲಿ ಹಾಕಿ ಚೆನ್ನಾಗಿ ಜಾಳಿಸಿ ಲೇಪಿಸಿದರೆ ಗಜಚರ್ಮವೆಂಬ ದದ್ದು ಗುಣ ವಾಗುವುದು.

**ದದ್ದು ಮತ್ತು ಗಂದೆಗಳಿಗೆ:**

ಗರಿಕೆ ಹುಲ್ಲು, ಚಗಚೆಬೀಜ, ಅಣಲೆಕಾಯಿ, ಕರಿತುಳಸಿಯ ಎಲೆ, ಇಂದುಪ್ಪು ಇವುಗಳನ್ನು ಸಮಾಂಶ ಸೇರಿಸಿ ಮಜ್ಜಿಗೆಯಲ್ಲಿ ಅರೆದು ಲೇಪಿಸಿದರೆ ತುರಿಗಜ್ಜು, ದದ್ದು, ಸಿಬ್ಬು ಇತ್ಯಾದಿಗಳು ಗುಣವಾಗುವವು

**ದಡ್ಡು ಬೆಳೆದರೆ:**

ಗಟ್ಟದ ಗೇರಿನ ಸೊನೆ (ಮಯಣ)ಯನ್ನು ದಡ್ಡಿನ ಮೇಲೆ ಕೆಲವು ದಿನ ತಾಗಿಸುತ್ತಿರುವುದು. ಅಥವಾ—

ಹತ್ತಿ ಬೀಜದ ಬೊಂಡನ್ನು ಅರೆದು ಲೇಪಿಸುವುದು.

ರಕ್ತಬೋಳವನ್ನು ಬೆಳ್ಳುಳ್ಳಿಯ ರಸದಲ್ಲಿ ಅರೆದು ಲೇಪಿಸುವುದರಿಂದ ಆನೆದಡ್ಡು ನಿವಾರಣೆಯಾಗುವುದು.

**ಮಡೆಪ್ಪುಳಿ ಹುಣ್ಣು (ಕೆಂಪು ದದ್ದು) ಗುಣವಾಗಲಿಕ್ಕೆ:**

ನೆರುಗಲದ ಬೇರನ್ನು ತೇದು ಒಂದು ತೊಲೆಯನ್ನು ತುಪ್ಪದಲ್ಲಿ ಕಲಸಿ ಸೇವಿಸುವುದು ಮತ್ತು ಅದೇ ಮದ್ದನ್ನು ಲೇಪಿಸುವುದು. ಒಂದು ವಾರ ಕಡು ಪಥ್ಯದಿಂದಿದ್ದು ಈ ಚಿಕಿತ್ಸೆ ಮಾಡಿಕೊಂಡರೆ ಶೀಘ್ರ ಗುಣವಾದೀತು.

ಕಪಿಬೇವಿನ ಸೊಪ್ಪಿನ ಚೂರ್ಣವನ್ನು ತುಪ್ಪದಲ್ಲಿ ಕಲಸಿ ಸೇವಿಸುವುದು. (ಒಂದು ವಾರ)

**ತುರಿಕೆಯಿದ್ದ ದದ್ದು ಹುಣ್ಣುಗಳಿಗೆ:**

ನೀರು ಕೂವೆ ಗಡ್ಡೆಯ ಕಷಾಯದಲ್ಲಿ ಹುಣ್ಣನ್ನು ತೊಳೆಯುವುದು.

ಬೆಲ್ಲವನ್ನು ಕಬ್ಬಿಣದ ಸೌಟಿನಲ್ಲಿರಿಸಿ ಕರಕು ಮಾಡಿ ಬೆಣ್ಣೆಯಲ್ಲಿ ಅರೆದು ಲೇಪಿಸಿದರೆ ನಾರು ಹುಣ್ಣು ಗುಣವಾಗುವುದು.

**ಒಣ ದದ್ದುಗಳಿಗೆ**

ಅಶ್ವಗಂಧಿ, ಕಡಿರಬೇರು, ಶತಾವರಿ, ಬುಗುಡಿಗಡ್ಡೆ. ಹರಳಬೇರು ಇವುಗಳನ್ನು ನೊರೆಹಾಲಿನಲ್ಲಿ ಅರೆದು ಎಣ್ಣೆ ಹಾಕಿ ಕಾಯಿಸಿ ಈ ಎಣ್ಣೆಯನ್ನು ಲೇಪಿಸುವುದು.

**ಕಾಲಿನಲ್ಲಿ ಬರುವ ದದ್ದು ಹುಣ್ಣುಗಳಿಗೆ:**

ಕಡು ಹಾಕುವ ಕಾರೆ ಬೇರನ್ನು ಕಬ್ಬಿಣ ತಾಗಿಸದೆ ಕಿತ್ತು ತಂದು ಮೂರು ದಿನ ಹೊಗೆಯ ಮೇಲೆ ಇರಿಸಿಯೇ ಒಣಗಿಸಿ ಬೆಳಗ್ಗೆ ನೊರೆಹಾಲಿನಲ್ಲಿ ತೇದು ಕಾಲು ತೊಲೆಯಷ್ಟನ್ನು ಒಂದು ಕುಡ್ತೆ ನೊರೆಹಾಲಿನಲ್ಲಿ ಕದಡಿ ಸೇವಿಸುವುದು. (ಹನ್ನೆರಡು ದಿನ). ಆ ಮೇಲೆ ಚಿಟಿಕಿ ಗಡ್ಡೆಯನ್ನು ಹಾಕಿ ಕಾಯಿಸಿದ ಎಣ್ಣೆಯನ್ನು ಹಚ್ಚುವುದು.

**ದದ್ದು, ತುರಿ, ಗಜಕರ್ಣ, ಗಜ್ಜು ಇತ್ಯಾದಿಗಳಿಗೆ:**

ಆಲದ ಹಣ್ಣು, ವೀಳ್ಯದೆಲೆ, ಅದ್ರಾಳ, ಭಜೆ, ಕಂಕುಷ್ಠ, ಅರಸಿನ ಇವುಗಳನ್ನು ಸಮಾಂಶ ಸೇರಿಸಿ ಅರೆದು ಎಳ್ಳೆಣ್ಣೆ ಹಾಕಿ ಕಾಯಿಸಿ ಮಳಲು ಪಾಕದಲ್ಲಿ ಇಳಿಸಿ ಇರಿಸಿಕೊಂಡು ಈ ಎಣ್ಣೆಯನ್ನು ಹಚ್ಚುವುದು.

**ಕೃಮಿಯಿಂದ ಉಂಟಾಗುವ ಹುಣ್ಣುಗಳಿಗೆ (ಹುಳಕಡ್ಡಿ ಹುಣ್ಣಿಗೆ)**

ಹೊಂಗಾರೆ ಚಿಗುರನ್ನು ನೀರಿನಲ್ಲಿ ಅರೆದು ಮೂರು ದಿನ ಲೇಪಿಸುವುದರಿಂದ ಗುಣವಾದೀತು.

**ಮಕ್ಕಳ ದದ್ದು, ತುರಿಕೆ, ಹುಣ್ಣು ಇತ್ಯಾದಿಗಳಿಗೆ:**

ಪುಷ್ಪಾಶ್ವತ್ಥ ಮರದ ಕೆತ್ತೆಯನ್ನು ಅದರ ಎಲೆಯ ರಸದಲ್ಲೇ ಅರೆದು ತೆಂಗಿನೆಣ್ಣೆ ಸೇರಿಸಿ ಕಾಯಿಸಿ ಈ ಎಣ್ಣೆಯನ್ನು ಲೇಪಿಸುವುದು.

**ಹುಳಕಡ್ಡಿ ಹುಣ್ಣಿಗೆ:**

ನೀರುಕೂವೆಗಡ್ಡೆಯ ರಸವನ್ನು ಕೊಬರಿಯೆಣ್ಣೆ ಹಾಕಿ ಕಾಯಿಸಿ ಹಚ್ಚುವುದು. ಯಾ ಈ ಗಡ್ಡೆ ಎಣ್ಣೆ ಹಾಕಿ ಕಾಯಿಸಿ ಕರಕಾದಾಗ ಅರೆದು ಹಚ್ಚುವುದು.

ಗರಗದ ರಸ ನಾಲ್ಕು ಪಾಲು ಕುಳುವಲೆಣ್ಣೆ ಒಂದು ಪಾಲು ಸೇರಿಸಿ ಕಾಯಿಸಿ ಹದಪಾಕದಲ್ಲಿ ಇಳಿಸಿ ಹಚ್ಚಿದರೆ ಹುಳಕಡ್ಡಿ ಮೊದಲಾದ ತುರಿಕೆ ಹುಣ್ಣುಗಳು ಗುಣವಾಗುವುವು.

**ಎಲ್ಲಾ ತರದ ಹುಳುಕಡ್ಡಿ ವ್ರಣಗಳಿಗೆ:**

ಪರ್ಪಟದ ಹುಲ್ಲು ಮತ್ತು ಉಮ್ಮತ್ತದ ಎಲೆ ಇವುಗಳನ್ನು ಸಮಾಂಶವಾಗಿ ಸೇರಿಸಿ ಒಂದು ಕಲ್ಲು ಉಪ್ಪು ಸೇರಿಸಿ ಅರೆದು ಎಳ್ಳೆಣ್ಣೆ ಹಾಕಿ ಕಾಯಿಸಿ ಹದಪಾಕದಲ್ಲಿಳಿಸಿ ಸೋಸಿ ಇರಿಸಿಕೊಂಡು ಈ ಎಣ್ಣೆಯನ್ನು ಹಚ್ಚುವುದರಿಂದ ಎಲ್ಲಾ ತರದ ದದ್ದು ವ್ರಣ ಇತ್ಯಾದಿಗಳು ಗುಣವಾಗುವುವು.

**ಹುಳಕಡ್ಡಿ ವ್ರಣಕ್ಕೆ ತೈಲ:**

ನಿಂಬೆಹುಳಿಯ ರಸ, ಪಂಚಬಳ್ಳಿ ವೀಳ್ಯದೆಲೆಯ ರಸ, ಕೊಬರಿ ಎಣ್ಣೆ, ಇವುಗಳನ್ನು ಒಂದೊಂದು ಕುಡ್ತೆ ಪ್ರಕಾರ ಸೇರಿಸಿ ಒಂದೂವರೆ ತೊಲೆ ಏಲಕ್ಕಿಯನ್ನು ಅರೆದು ಕಲ್ಕ ಸೇರಿಸಿ ಕಾಯಿಸಿ ಮಳಲು ಪಾಕದಲ್ಲಿ ಇಳಿಸಿ ಪಾತ್ರ ಪಾಕಕ್ಕೆ ಕರಿ ಜೀರಿಗೆ ಚೂರ್ಣವನ್ನು ಹಾಕಿ ಸೋಸಿ ಇರಿಸಿಕೊಂಡು ಈ ತೈಲವನ್ನು ಆಗಾಗ ಹಚ್ಚುವುದು. ಇದನ್ನು ಒಂದು ಯಾ ಎರಡು ವಾರ ಹಚ್ಚುವುದರಿಂದ ಹುಳಕಡ್ಡಿ ವ್ರಣ ಪೂರ್ಣವಾಗಿ ಗುಣವಾಗುವುದು. ಈ ಎಣ್ಣೆಯು ಕೈಗಳಿಗೆ ಬರುವ "ಡೆಂಜಿ ಬಾಪು'' ಎನ್ನುವ ಕಠಿಣವಾದ ಬಾವಿಗೂ ಸಹ ಉತ್ತಮ ನಿವಾರಕವು.

**ಹುಳಕಡ್ಡಿ ಹುಣ್ಣಿನ ಹುಳ ತೆಗೆಯುವ ವಿಧಾನವು:**

ವ್ರಣವನ್ನು ಬಿಸಿನೀರಿನಿಂದ ಸ್ವಚ್ಛವಾಗಿ ತೊಳೆದು ಒರಸಿ ಎಳ್ಳೆಣ್ಣೆಯನ್ನು ಹಚ್ಚಿ ಮಧ್ಯಾಹ್ನದ ಬಿಸಿಲು ವ್ರಣಕ್ಕೆ ಚೆನ್ನಾಗಿ ತಾಗುವಂತೆ ಒಂದುವರೆ ಘಂಟೆ ಕಾಲ ನಿಂತು ಆ ಮೇಲೆ ವ್ರಣದ ಮೇಲೆ ಒಂದಾಂಗಲ ದಪ್ಪವಾಗಿ ರಸಬಾಳೆ ಹಣ್ಣನ್ನು ಮೆತ್ತಿ ಸುಗಿ ಭತ್ತದ ರಾಶಿಯ ಮಧ್ಯದಲ್ಲಿ ಒಂದುವರೆ ಘಂಟೆ ಕಾಲ ವ್ರಣವನ್ನು ಮುಚ್ಚಿ ಇರಿಸಿದ್ದು ಅನಂತರ ತೆಗೆದು ನೋಡಿದರೆ ಬಾಳೆಹಣ್ಣಿನಲ್ಲಿ ಹುಳಗಳು ಕಾಣಸಿಗುವುವು.

**ಮಕ್ಕಳ ಹುಳಕಡ್ಡಿ ಹುಣ್ಣಿಗೆ:**

ಕಾವಿ, ಜೇನು ಮಯಣ, ಇವುಗಳನ್ನು ತೆಂಗಿನೆಣ್ಣೆಯಲ್ಲಿ ಕುದಿಸಿ ಅರೆದು ಲೇಪಿಸುವುದು.

**ಉದರ್ದಕ್ಕೆ(ಶೀತಪಿತ್ಥಕ್ಕೆ):**

ಕರಿಮುಂಡಿ ಗೆಣಸಿನ ಗಿಡದ ದಡಿ(ದಂಡು = ಕೈ)ಯನ್ನು ಹಾಕಿ ಮದ್ದಿನ ಗಂಜಿ ಮಾಡಿ ಉಣ್ಣುವುದು. ಮೂರು ದಿನ ಉಣ್ಣುವುದರಿಂದ ಜ್ವರವೂ ಕುರವೂ ಸಹ ಗುಣವಾಗುವುದು.

ಬಿಲ್ವಪತ್ರೆಯ ರಸ ಎರಡು ಕಡ್ತೆಗೆ ಅಷ್ಟೇ ತೆಂಗಸೆಣ್ಣೆ ಸೇರಿಸಿ ಹುಣಸೆ ಮರದ ಬೇರಿನ ಕೆತ್ತೆ ಆರು ತೊಲೆಯನ್ನು ನಿಂಬೆಹುಳಿಯ ರಸದಲ್ಲಿ ಅರೆದು ಕಲ್ಕಹಾಕಿ ಮಳಲು ಪಾಕವಾಗಿ ಕಾಯಿಸಿ ಇರಿಸಿಕೊಂಡು, ಬಿಲ್ವಪತ್ರೆಯ ಎಲೆ ಮತ್ತು ಕೆತ್ತೆ ಹಾಕಿ ತಯಾರಿಸಿದ ಕಷಾಯದಲ್ಲಿ ವ್ರಣವನ್ನು ತೊಳೆದು ಒರಸಿ ಈ ಎಣ್ಣೆಯನ್ನು ಹಚ್ಚುವುದು, ಸಾರು, ಅನ್ನ, ಸಪ್ಪೆಯಾಹಾರ ಸೇವನೆ ಹಿತ.

ಓಮದ ಅಷ್ಟಾವಶೇಷ ಕಷಾಯ ಮಾಡಿ ಬೆಲ್ಲ ಹಾಕಿ ಕಡು ಪಥ್ಯ ದೊಂದಿಗೆ ಒಂದು ವಾರ ಸೇವಿಸುವುದರಿಂದ ಶೀತಪಿತ್ತವು ಗುಣವಾಗುವುದು.

**ರಕ್ತದ ಯಾ ಪಿತ್ತದ ಗಂದೆಗಳಿಗೆ:**

ಅತ್ತಿ, ಇತ್ತಿ, ಗೋಳಿ, ಅಶ್ವತ್ಥ, ಈ ಮರಗಳ ಕೆತ್ತೆಗಳನ್ನು ಸಮಾಂಶ ಸೇರಿಸಿ ಎರಡು ತೊಲೆಯನ್ನು ಜಜ್ಜಿ ಹಾಲು ಕಷಾಯ ಮಾಡಿ ಒಂದುಚಮಚ ಸಕ್ಕರೆ ಹಾಕಿ ಬೆಳಗ್ಗೆ ಒಂದು ಹೊತ್ತಿನ ಪ್ರಕಾರ ಆರುದಿನ ಸೇವಿಸುವುದರಿಂದ ರಕ್ತ ಹಾಗೂ ಪಿತ್ತದ ಗಂದೆಗಳು ಗುಣವಾಗುವುವು.

**ಮೂತ್ರದೋಶದಿಂದ ಬರುವ ಗಂದೆಗಳಿಗೆ:**

ನಾಯಿಸೊಣಗಿನ ಬೇರನ್ನು ಸೀಯಾಳದ ನೀರಿನಲ್ಲಿ ಕಿವಿಚಿ ಸೋಸಿ ಬೆಳಗ್ಗೆ ಸೇವಿಸುವುದು. ಆರು ದಿನ ಸೇವನೆಯಿಂದ ಗುಣವಾಗುವುದು.

**ಕೆಂಪು ದಡಿಕೆಗೆ:**

ಸಮುದ್ರನಾಲಿಗೆಯಿಂದ ದಡಿಕೆಗಳನ್ನು ಚೆನ್ನಾಗಿ ತಿಕ್ಕಿ ಒರಸಿ ಸಮುದ್ರ ನಾಲಿಗೆಯನ್ನೇ ಅರೆದು ಲೇಪಿಸುವುದು.

**ವಿಸರ್ಪಕ್ಕೆ:**

ಅಡಕೆಯನ್ನು ನೀರಿನಲ್ಲಿ ತೇದು ಸರ್ವಾಂಗಕ್ಕೆ ಲೇಪಿಸುವುದು.

ಕೊಡಗಪ್ಪಾಲೆ ಬೇರಿನ ಕೆತ್ತೆ, ಕುಕ್ಕೋಷ್ಠ, ಅಗಲೆಕಾಯಿ; ಇವುಗಳನ್ನು ಒಂದಾಗಿ ಯಾ ಬೇರೆ ಬೇರೆಯಾಗಿ ಮಜ್ಜಿಗೆಯಲ್ಲಿ ಅರೆದು ಲೇಪಿಸುವುದು.

ಕಿಸ್ಸಾರ ಹೂ' ಪುಳಿಯಾರಿಲೆ, ಭದ್ರಮುಷ್ಟಿಗಡ್ಡೆ, ಅಗ್ರದಕಾಯಿ, ಕೊತ್ತಂಬರಿ, ಇವುಗಳನ್ನು ಮಜ್ಜಿಗೆಯಲ್ಲಿ ಬೇಯಿಸಿ ಅರೆದು ಸೇವಿಸುವುದರಿಂದ ಎಲ್ಲಾ ವಿಧ ವಿಸರ್ಪವೂ ಗುಣವಾಗುವುದು.

ಬಂದನಾರು ಗಿಡದ ಚಿಗುರು ಮತ್ತು ತೆಗ್ಗಾಮೆ ಬೇರು ಇವುಗಳನ್ನು ಮಜ್ಜಿಗೆಯಲ್ಲರೆದು ಕುದಿಸಿ ಅಗ್ರದ ಕಾಯಿಯ ಚೂರ್ಣವನ್ನು ಹಾಕಿ ಸೇವಿಸುವುದರಿಂದ ಗುಣವಾದೀತು.

ಗರಿಕೆ ಹುಲ್ಲನ್ನು ಕಲಗಚ್ಚಿನಲ್ಲಿ ಅರೆದು ಲೇಪಿಸುವುದೂ ಹಿತ.

**ಸರ್ಪ ಸುತ್ತಿಗೆ:**

ನೀಲಿಸೊಪ್ಪು ಮತ್ತು ಈಶ್ವರಬಳ್ಳಿ ಬೇರು ಇವುಗಳನ್ನು ನಿಂಬೆಹುಳಿಯ ರಸದಲ್ಲಿ ಅರೆದು ಸೇವನೆ ಹಾಗೂ ಲೇಪ ಎರಡನ್ನೂ ಮಾಡುವುದು.

ಚೆರುತೇಕಿನ ಬೇರು, ಏಕನಾಯಕನ ಬೇರು, ಕಿಸ್ಕಾರದ ಬೇರು, ಇವುಗಳನ್ನು ಸಮಾಂಶ ಸೇರಿಸಿ ನಿಂಬೆಯ ಹಣ್ಣಿನ ರಸದಲ್ಲಿ ತೇದು ಪಾನ ಹಾಗೂ ಲೇಪ ಎರಡೂ ಮಾಡಿಕೊಳ್ಳುವುದರಿಂದ ಗುಣವಾಗುವುದು.

ಒಳ್ಳೆಕ್ಕೊಡಿ ಗಿಡದ ಚಿಗುರು ತಂದು ನೊರೆಹಾಲಿನಲ್ಲಿ ಅರೆದು ಲೇಪ ಮತ್ತು ಅದಕ್ಕೆ ಒಂದು ಚಿಟಿಕೆ ಜೀರಿಗೆ ಸೇರಿಸಿ ನೊರೆಹಾಲಿನಲ್ಲಿ ಅರೆದರೆ ಸೇವನೆ.

**ವಿಸರ್ಪ, ರಕ್ತದೋಷ ಮೊದಲಾದವುಗಳಿಗೆ:**

ಅತ್ತಿ, ಇತ್ತಿ, ಗೋಳಿ, ಅಶ್ವತ್ಥ, ಈ ನಾಲ್ಕು ಮರಗಳ ಕೆತ್ತೆಯ ಹಾಲು ಕಷಾಯವನ್ನು ದಿನದಲ್ಲೊಂದು ಬಾರಿ ಸೇವಿಸುವುದು. ಮತ್ತು—

ಕಿಸ್ಕಾರ ಹೂವನ್ನೂ ಜೀರಿಗೆಯನ್ನೂ ತೆಂಗಿನ ಕಾಯಿಯ ತನಿಹಾಲಿನಲ್ಲಿ ಅರೆದು ಲೇಪಿಸುವುದು. ಆ ಮೇಲೆ ಮೇಲಿನ ನಾಲ್ಕು ಮರದ ಕೆತ್ತೆಗಳನ್ನು ಹಾಕಿ ತಯಾರಿಸಿದ ಕಷಾಯದಲ್ಲಿ ಸ್ನಾನಮಾಡುವುದು. ಹೀಗೆ ಹನ್ನೆರಡು ದಿನ ಚಿಕಿತ್ಸೆ ಮಾಡಿಕೊಳ್ಳುವುದರಿಂದ ವಿಸರ್ಪಾದಿ ರಕ್ತ ದೋಷಗಳು ಪೂರ್ಣ ಗುಣವಾಗುವವು.

**ಅಗ್ನಿ ವಿಸರ್ಪಕ್ಕೆ:**

ಮುಡಿವಾಳದ ಬೇರು, ಗೋಳಿಸರ, ಸಾಂಬ್ರಾಣಿ ಸೊಪ್ಪು, ಪಲ್ಲಿ ಸೊಪ್ಪು, ತ್ರಿಫಲ, ವಾಯುವಿಳಂಗ (ವಿಶಾಲರಿ) ಇವುಗಳನ್ನು ಸಮಾಂಶ ಸೇರಿಸಿ ವಸ್ತ್ರಗಾಳಿತ ಚೂರ್ಣಮಾಡಿ ಇರಿಸಿಕೊಂಡು ಪ್ರತಿ ದಿನ ಬೆಳಗ್ಗೆ ಅರ್ಧ ತೊಲೆ ಚೂರ್ಣಕ್ಕೆ ಅಷ್ಟೇ ಸಕ್ಕರೆ ಸೇರಿಸಿ ಅರ್ಧ ತೊಲೆ ದನದ ತುಪ್ಪ ದಲ್ಲಿ ಕಲಸಿ ಸೇವಿಸುವುದು, (ಐದು ದಿನ). ಇದರಿಂದ ಅಗ್ನಿ ವಿಸರ್ಪ, ಅರಣೆ ವಿಸರ್ಪ, ಆನೆ ವಿಸರ್ಪ, ಇವುಗಳಲ್ಲದೆ ಕಂದಡಿ ವಿಸರ್ಪವೂ ಕೂಡ ಗುಣ ವಾಗುವುದು.

ನೀಲಿಸೊಪ್ಪು ಮತ್ತು ಹಸಿ ಅರಸಿನ ಗಡ್ಡೆ ಇವುಗಳನ್ನು ಮಜ್ಜಿಗೆಯಲ್ಲಿ ಅರೆದು ಸೇವಿಸುವುದು ಮತ್ತು ಬಿಳಿ ಗುರುಗುಂಜಿಯ ಬೇರನ್ನು ನಿಂಬೆಯ ರಸ ದಲ್ಲಿ ಅರೆದು ಲೇಪಿಸುವುದು.

**ಮೂಢ ವಿಸರ್ಪಕ್ಕೆ:**

ರಸಬಾಳೆಯ ಹಣ್ಣನ್ನು ಬೇಯಿಸಿ ರಸ ತೆಗೆದು ಆ ರಸದಲ್ಲಿ ಅಶ್ವತ್ಥದ ಕೆತ್ತೆಯನ್ನು ತೇದು ಕುಡಿಸುವುದು. (ಮೂರು ವಾ ಆರು ದಿನ.)

**ಸಿಡುಬು, ನೀರು ಕೋಟ್ಲೆ, ಕೋರಗಳಿಗೆ:**

ಇವುಗಳ ಪ್ರಾರಂಭದಲ್ಲಿ ಜ್ವರ ಬರಲು ಆರಂಭವಾಗುತ್ತಲೇ ಒಂದು ವೀಸತೂಕ ಕಸ್ತೂರಿಯನ್ನು ನೈಕದಳೀ ಬಾಳೆ ಹಣ್ಣಿನಲ್ಲಿ ಇರಿಸಿ ತಿನ್ನು ವುದು. ಅಥವಾ ಬೂದಿ ಬಾಳೆಯ ಗಡ್ಡೆಯ ರಸದಲ್ಲಿ ಅರೆದು ಸೇರಿಸುವುದು.

**ಗಜಕರ್ಣಕ್ಕೆ:**

ಗೇರುಬೀಜದ ಓಡನ್ನು ಕಾಯಿಸುವಾಗ ಬರುವ ಎಣ್ಣೆಗೆ ಅದರ ಕಾಲಂಶದಷ್ಟು ತೆಂಗಿನೆಣ್ಣೆ ಸೇರಿಸಿ ಲೇಪಿಸುವುದು.

ಕೊಂದೆ ಚಿಗುರು, ಎಕ್ಕೆ ಹಾಲು, ನಿಂಬೆ ಹುಳಿಯ ರಸ ಇವು ಮೂರನ್ನು ಒಟ್ಟಿಗೆ ಚೆನ್ನಾಗಿ ಅರೆದು ಲೇಪಿಸುವುದು.

ಗೋಪಾಲ್ಕುಂಡ (ಬೇಲಿ ಔಡಲ)ದ ಹಸಿ ಮಯಣವನ್ನು ಆಗಾಗ ಲೇಪಿಸುತ್ತಿರುವುದು. ಒಂದು ವಾರ ಬಿಡದೆ ಲೇಪಿಸುವುದರಿಂದ ಗುಣ ವಾಗುವುದು.

ತೆಂಗಿನ ಗೆರಟೆಯನ್ನು ಸುಟ್ಟು ತೆಗೆದ ಎಣ್ಣೆಯನ್ನು ದದ್ದುವಿರುವ ಭಾಗಕ್ಕೆ ಚೆನ್ನಾಗಿ ಸವರುವುದು. ಹೀಗೆ ಒಂದೆರಡು ಸಲ ಸವರಿದರೆ ಗುಣ ವಾಗುವುದು.

ನೆಲಕಡಲೆಯ ಬೀಜವನ್ನು ಹುಳಿ ಮಜ್ಜಿಗೆಯಲ್ಲಿ ಅರೆದು ಲೇಪಿಸುವುದು

**ಸಿಬ್ಬಕ್ಕೆ:**

ಬಿದಿರುಪ್ಪು (ವಂಶಲೋಚನ) ಕದರಿದ ನೀರಿನಲ್ಲಿ ಮೈಲ್‌ತುತ್ತನ್ನು ಅರೆದು ಲೇಪಿಸುವುದು.

ಕೊಂದೆಯ ಸೊಪ್ಪನ್ನು ಮಜ್ಜಿಗೆಯಲ್ಲಿ ಅರೆದು ಲೇಪಿಸುವುದು ಅಥವಾ

ಕೊಂದೆಯ ಚಿಗುರು, ಎಳ್ಳು ಮತ್ತು ಅರಸಿನ ಇವುಗಳನ್ನು ನೀರಿನಲ್ಲಿ ಅರೆದು ಲೇಪಿಸುವುದು. ಅಥವಾ

ಕೊಂದೆಯ ಚಿಗುರು, ಮತ್ತು ಪಟಿಕಾರ ಇವುಗಳನ್ನು ನಿಂಬೆ ಹಣ್ಣಿನ ರಸದಲ್ಲಿ ಅರೆದು ಲೇಪಿಸುವುದು.

ಅರಸಿನ ಮತ್ತು ಪುಜಿಂಗರಿ ಇವುಗಳನ್ನು ಎಣ್ಣೆಯಲ್ಲರೆದು ಕಬ್ಬಿಣದ ಪಾತ್ರೆಯಲ್ಲಿ ಹಾಕಿ ಚೆನ್ನಾಗಿ ತಿಕ್ಕಿ ಲೇಪಿಸಿದರೆ ಸಿಬ್ಬ ಮಾಯುವುದು.

ಕಾಡು ಬಾದಾಮು ಬೀಜದನ್ನು ಮೊಸರಿನಲ್ಲಿ ಅರೆದು ಲೇಪಿಸುವುದು.

ಬಾಳೆಯ ಎಲೆಯನ್ನು ಕ್ಷಾರಮಾಡಿ ಟಂಕಣಕಾರದರಳಿನ ಚೂರ್ಣ ವನ್ನು ಸೇರಿಸಿ ಎಳ್ಳೆಣ್ಣೆಯಲ್ಲಿ ಕಲಸಿ ಮೂರು ದಿನ ಭದ್ರವಾಗಿರಿಸಿ ಬಳಿಕ ತೆಗೆದು ಲೇಪಿಸುತ್ತಿದ್ದರೆ ಕೆಲವೇ ದಿನಗಳಲ್ಲಿ ಗುಣವಾಗುವುದು.

ಮುಲ್ಲಂಗಿಯ ಗಡ್ಡೆಯನ್ನು ಭಸ್ಮ ಮಾಡಿ ಭಸ್ಮದಷ್ಟೇ ಗಂಧಕ ಸೇರಿಸಿ ಹಸಿಶುಂಠಿಯ ರಸದಲ್ಲರೆದು ಲೇಪಿಸುವುದು.

ಬೆಳುಗಾರದ ಅರಳನ್ನು ಗಂಧಕದೊಡನೆ ನಿಂಬೆಹುಳಿಯ ರಸದಲ್ಲಿ ಅರೆದು ಲೇಪಿಸುವುದು.

ತ್ರಿಫಲೆಗಳು ಒಂದು ಪಾಲು, ಮನಶ್ಶಿಲಾ ಮೂರು ಪಾಲು, ಅರಸಿನ ಗಡ್ಡೆ ಒಂಬತ್ತು ಪಾಲು ಇವುಗಳೆನ್ನು ನಿಂಬೆ ಹಣ್ಣಿನ ರಸದಲ್ಲಿ ಅರೆದು ಲೇಪಿ ಸಿ ತಿಕ್ಕಿದರೆ ಕೆಲವೇ ಧಿನಗಳಲ್ಲಿ ಗುಣವಾಗುವುದು.

ಯವಕ್ಷಾರ ಮತ್ತು ಗಂಧಕ ಇವುಗಳನ್ನು ನೀರಿನಲ್ಲಿ ಅರೆದು ಲೇಪಿಸುವುದು.

ಸಮೂಲ ಹಾಗಲ ಬಳ್ಳಿಯೊಂದಿಗೆ ಲವಂಗಪಟ್ಟೆ ಯಾ ಇಜಿನಂ ಕೆತ್ತೆ, ಹಿಪ್ಪಲಿ, ಬೆಳ್ಳಿಗೆ ಅಕ್ಕಿ ಇವುಗಳನ್ನು ಸಮಾಂಶವಾಗಿ ಸೇರಿಸಿ ಚೂರ್ಣಮಾಡಿ ಶುಂಠಿವಲೆಣ್ಣೆಯಲ್ಲಿ ಅರೆದು ಲೇಪಿಸುವುದು,

ಆನೆ ತಗತ್ತೆಯ ಸೊಪ್ಪನ್ನು ನೀರಿನಲ್ಲಾಗಲಿ ನಿಂಬೆಹುಳಿಯ ರಸದಲ್ಲಾಗಲಿ ಅರೆದು ಕೊಬರಿಯ ಎಣ್ಣೆಯಲ್ಲಿ ಕಲಸಿ ಲೇಪಿಸುವುದು. ಇದರಿಂದ ತುರಿಸುವ ಸಿಬ್ಬವೂ ಕೂಡಲೆ ಗುಣವಾಗುವುದು,

**ತುರಿಸುವ ಸಿಬ್ಬಕ್ಕೆ:**

ಕುಂಬಳ ಬಳ್ಳಿಯನ್ನು ಭಸ್ಮಮಾಡಿ ಗೋಮೂತ್ರದಲ್ಲಿ ಅರೆದು ಲೇಪಿಸುವುದು, ಇದು ಸೀಳುಗಾಲಿಗೂ ಉತ್ತಮವಾದ ಯೋಗವು.

ಶ್ರೀಗಂಧ ಯಾ ಗಂಧಕದೊಂದಿಗೆ ಭಜೆಯನ್ನು ಮಜ್ಜಿಗೆಯಲ್ಲರೆದು ಲೇಪಿಸುವುದು.

ಪಾಲಾಷದ ಬೀಜವನ್ನು ನಿಂಬೆ ಹುಳಿಯ ರಸದಲ್ಲಿ ಅರೆದು ಲೇಪಿಸುವುದು. ಉರಿದಾಗ ತುಪ್ಪ ಹಚ್ಚಿಕೊಳ್ಳುವುದು. ಮತ್ತು ಪುನಃ ಮದ್ದು ಲೇಪಿಸುವುದು, ಕಡು ಪಥ್ಯದಿಂದಿದ್ದು ಈ ಮದ್ದು ಮಾಡಿಕೊಂಡರೆ ಎಲ್ಲಾ ವಿಧ ಸಿಬ್ಬ ಮತ್ತು ಗಜಕರ್ಣವೂ ಸಹ ಗುಣವಾಗುವುದು.

**ದಪ್ಪವಾದ ಸಿಬ್ಬಗಳಿಗೆ:**

ಚಗಚೆ ಬೀಜ, ಕಾಕೋರ್ಗಿಲರಿ (ಬಾವಂಚಿ ಬೀಜ) ನೆಲ್ಲಿಚಟ್ಟು, ಅರಸಿನ, ಗಂಧಕ ಇವುಗಳನ್ನು ಸಮಾಂಶ ಸೇರಿಸಿ ದನದ ಮಜ್ಜಿಗೆಯಲ್ಲಿ ಅರೆದು ಲೇಪಿಸುವುದು.

**ಚರ್ಮದೂಷಿಕಾ ವ್ರಣಕ್ಕೆ:**

ಕಿಸ್ಕಾರ ಬೇರಿನ ಕೆತ್ತೆಯನ್ನು ತೆಂಗಿನಕಾಯಿಯ ತನಿಹಾಲಿನಲ್ಲಿ ಅರೆದು ಅಗ್ರುದ ಕಾಯಿಯ ಚೂರ್ಣವನ್ನು ಸೇರಿಸಿ ಜಾಳಿಸಿ ಲೇಪಿಸಿದರೆ ಚರ್ಮದಲ್ಲಿ ಹರಡುವ ಹುಣ್ಣು ಗುಣವಾಗುವುದು,

ಕಯುವು ಗಿಡದ ಕೆತ್ತೆಯನ್ನು ತೆಂಗಿನಕಾಯಿಯ ಹಾಲಿನಲ್ಲಿ ಅರೆದು ಸ್ವಲ್ಪ ಕರಿಜೀರಿಗೆಯ ಚೂರ್ಣವನ್ನು ಸೇರಿಸಿ ಕಲಸಿ ಲೇಪಿಸುವುದು.

ಬಿದಿರನ್ನು ಭಸ್ಮಮಾಡಿ ಸಾಸಿವೆಯೆಣ್ಣೆಯಲ್ಲಿ ಕವಡಿ ಲೇಪಿಸುವುದು.

ಐತ್ತಬಳ್ಳಿ ಬೇರಿನ ಸಿಪ್ಪೆ, ಎಕ್ಕೆ ಬೇರಿನ ಕೆತ್ತೆ, ಕೊಂದೆ ಬೇರಿನ ಕೆತ್ತೆ, ಅರಸಿನ ಗಡ್ಡೆ, ಅತ್ತಿ, ಇತ್ತಿ, ಗೋಳಿ ಮತ್ತು ಅಶ್ವತ್ಥ ಮರಗಳ ಕೆತ್ತೆ ಇವುಗಳ ಕಷಾಯಮಾಡಿ ಅವುಗಳನ್ನೇ ಕಲ್ಕ ಹಾಕಿ ಎಣ್ಣೆ ಕಾಯಿಸಿ ಹಚ್ಚುವುದು.

**ಚರ್ಮ ವ್ಯಾಧಿಗೆ:**

ಕೊರುಂಗು ಮರದ ಬೀಜವನ್ನು ಅರೆದು ಲೇಪಿಸುವುದು.

ಎಕ್ಕೆ ಎಲೆಯ ರಸ ಎರಡು ಪಾಲು, ಸಾಸಿವೆಯ ಎಣ್ಣೆ ಒಂದು ಪಾಲು ಒಟ್ಟು ಸೇರಿಸಿ ಎಣ್ಣೆಯ ಎಂಟನೆಯ ಒಂದು ಪಾಲು ಅರಸಿನವನ್ನು ಅರೆದು ಕಲ್ಕ ಸೇರಿಸಿ ಚೆನ್ನಾಗಿ ಕಾಯಿಸಿ ಲೇಪಿಸುವುದು.

ಇಂದುಪ್ಪು ಮತ್ತು ಪುಜಿಂಗರಿಯನ್ನು ಒಟ್ಟಿಗೆ ಅರೆದು ತೂತು ಮಾಡಿದ ಕಳ್ಳಿ ದಂಡಿನೊಳಗೆ ತುಂಬಿಸಿ ಅದನ್ನು ಅಂತರ್ಧೂಮ ಭಸ್ಮಮಾಡಿ ಈ ಭಸ್ಮವನ್ನು ಎಣ್ಣೆಯಲ್ಲಿ ಕಲಸಿ ಲೇಪಿಸುವುದು.

ಪುಜಿಂಗರಿ, ಕೊಡಗಪ್ಪಾಲರಿ, ಅರಸಿನ, ರಾಗಿ, ಕಂಕುಷ್ಠ, ಇವುಗಳನ್ನು ಸಮಾಂಶ ಸೇರಿಸಿ ಮಜ್ಜಿಗೆಯಲ್ಲರೆದು ದರಿದಂತೆ ಪುನಃ ಪುನಃ ಲೇಪಿಸುತ್ತಿರುವುದರಿಂದ ಕುಷ್ಠ, ಸಿಧ್ಮ, ಪಾಮಾ, ಕಜ್ಜಿ ಇತ್ಯಾದಿಗಳು ಗುಣವಾಗುವುವು.

ಚಗಚೆಯ ಬೀಜವನ್ನು ಹುರಿದು ಕರುಕುಮಾಡಿ ಮಜ್ಜಿಗೆಯಲ್ಲಿ ಅರೆದು ಲೇಪಿಸಿದರೆ ತುರಿಗಜ್ಜು, ಸಿಬ್ಬ ಇತ್ಯಾದಿಗಳು ಗುಣವಾಗುವುವು.

ಕಲ್ಲುಶುಂಠಿ ಗಡ್ಡೆಯನ್ನು ಹುಳಿ ಮಜ್ಜಿಗೆಯಲ್ಲಾಗಲೀ ಉಪ್ಪು ನೀರಿನಲ್ಲಾಗಲೀ ಅರೆದು ಲೇಪಿಸುವುದರಿಂದ ತುರಿಗಜ್ಜು, ಸಿಬ್ಬ, ದಡ್ಡು ಇತ್ಯಾದಿಗಳು ಮಾಯುವುವು. ಸೇವಿಸುವುದೂ ಉತ್ತಮ.

ಕಾಡು ಬೆರಣಿಯನ್ನು ಬೂದಿಮಾಡಿ ಉಪ್ಪು ಹಾಕಿದ ಗೋಮೂತ್ರದಲ್ಲಿ ಈ ಬೂದಿಯನ್ನು ಕದಡಿ ಮೂರುದಿನ ಭದ್ರವಾಗಿ ಇರಿಸಿ ಆ ಮೇಲೆ ಲೇಪಿಸುವುದು.

ಉತ್ತರಣೆ ಗಿಡದ ಬೂದಿ ಮೂರು ಭಾಗ, ಬೇಯಿಸಿದ ಸುಣ್ಣ ಒಂದು ಭಾಗ ಸೇರಿಸಿ ಹರಳೆಣ್ಣೆಯಲ್ಲಿ ಅರೆದು ಲೇಪಿಸುವುದು.

ನವಸಾಗರವನ್ನು ಬೆಳ್ಳುಳ್ಳಿಯ ರಸದಲ್ಲಿ ಅರೆದು ಲೇಪಿಸುವುದು.

ನಾಲ್ಕು ಪಾಲು ಗರಿಕೆ ಹುಲ್ಲಿನ ರಸಕ್ಕೆ ಒಂದು ಪಾಲು ತೆಂಗಿನ ಎಣ್ಣೆ ಹಾಕಿ ಕಾಯಿಸಿ ಈ ಎಣ್ಣೆ ಹಚ್ಚುವುದು.

ಮೈಲ್ ತುತ್ತನ್ನು ಭಸ್ಮಮಾಡಿ ಸಮಾಂಶ ಗೋಪೀಚಂದನ ಸೇರಿಸಿ ನಿಂಬೆ ಹುಳಿಯ ರಸದಲ್ಲಿ ಅರೆದು ಲೇಪಿಸುವುದು. (ಒಂದು ವಾರ)

**ಚರ್ಮದಲ್ಲಿ ಬರುವ ಕಪ್ಪು ಬಣ್ಣದ ಚುಕ್ಕೆ ಹುಣ್ಣು (ತಿಲಕಾಲಕ)ಗಳಿಗೆ**

ಗೇರೆ ಕೆತ್ತೆಯ ಮದ್ದಿನ ಗಂಜಿಮಾಡಿ ತೆಂಗಿನಕಾಯಿಯ ಹಾಲು ಹಾಕಿ ಉಣ್ಣುವುದು. ಸಪ್ಪೆಯಾಗಿ ಆರು ದಿನ ಉಂಡರೆ ಚರ್ಮವ್ಯಾಧಿಗಳು ಮಾತ್ರವಲ್ಲದೆ ಮಯಿಟ್ಟುದೋಷವೂ ಸಹ ಗುಣವಾಗುವುದು. 12 ದಿನ ಮುಂದುವರಿಸಲೂ ಬಹುದು.

**ಮೈ ಅತ್ಯಂತ ಬೆವರಿ ವಾಸನೆ ಬರುವುದಿದ್ದರೆ:**

ಮೀಯುವಾಗ ಅಣಲೆಕಾಯಿಯ ಚೂರ್ಣದಿಂದ ಮೈ ತಿಕ್ಕಿ ತೊಳೆಯುವುದು. ಮತ್ತು ಅಣಲೆಕಾಯಿಯ ಚೂರ್ಣವನ್ನೇ ವೀಳ್ಯದೆಲೆಯ ರಸದಲ್ಲಿ ಸೇವಿಸುವುದು. (ಮೂರು ದಿನ)

ದಾಳಿಂಬೆ ಗಿಡದ ಬೇರು, ಹುಣಿಸೆಯ ಬೀಜ, ಶಂಖ ಇವುಗಳನ್ನು ಚೂರ್ಣಮಾಡಿ ಈ ಚೂರ್ಣದಿಂದ ಮೈ ತಿಕ್ಕಿ ಮೀಯುವುದು.

# ದುಷ್ಟ ವ್ರಣ ಚಿಕಿತ್ಸೆ.

## ದುಷ್ಟ ವ್ರಣಕ್ಕೆ:

ಸಮುದ್ರ ನಾಲಿಗೆ ಮತ್ತು ಮೃದಾರಶೃಂಗಿ ಇವುಗಳ ಚೂರ್ಣವನ್ನು ಜೇನಿನಲ್ಲಿ ಕಲಸಿ ಲೇಪಿಸುವುದು. (ಇದು ವಿಷ, ಜಾಗ್ರತೆಬೇಕು)

ನಾಲ್ಕು ಪಾಲು ಗರಿಕೆ ಹುಲ್ಲಿನ ರಸ, ಒಂದು ಪಾಲು ಎಣ್ಣೆ, ಎರಡು ಪಾಲು ನೆಲಮುಚ್ಚಿರು ಗಿಡದ ರಸ ಇವುಗಳನ್ನು ಸೇರಿಸಿ ಕಾಯಿಸಿ ಸೋಸಿ ಈ ಎಣ್ಣೆ ಲೇಪಿಸುವುದು. ಇದರಿಂದ ಗಜಕರ್ಣ, ದದ್ದು, ನಾರುಹುಣ್ಣು ಇತ್ಯಾದಿಗಳೂ ಗುಣವಾಗುವುವು.

ಬಲೀಂದ್ರ ಪಾಲೆಯ ಹಾಲನ್ನು ಲೇಪಿಸುವುದು,

ಉಮ್ಮತ್ತದ ಕಾಯಿಯೊಳಗೆ ಗಂಧಕವನ್ನು ತುಂಬಿಸಿ ಪುಟಪಾಕದಲ್ಲಿ ಬೇಯಿಸಿ ತೆಗೆದು ಎಳ್ಳೆಣ್ಣೆ ಹಾಕಿ ಅರೆದು ಲೇಪಿಸುವುದು.

ಕೆಂಪು ಕಣಗಿಲದ ಬಡಗು ಹರಿದ ಬೇರು, ಕಹಿ ಹೀರೆ ಬೀಜ, ಅರಸಿನ, ಗೇರು, ಹರಳು, ವುಗಳನ್ನು ಎಣ್ಣೆಯಲ್ಲರೆದು ಹಚ್ಚುವುದು, (ಸೇವನೆಗೆ ಆಗ ಬಾರದು).

ದಡ್ಡಾಲದ ಎಲೆಯನ್ನು ಉಪ್ಪು ಸೇರಿಸಿ ಅರೆದು ದಪ್ಪ ಮೆತ್ತಿ ಕಟ್ಟುವುದು.

ಕಡುಕಾರೆ ಬೇರು, ಕಂಚುಕಾರೆ ಬೇರು; ಸಮುದ್ರ ಮಾಪಲಕಾಯಿ ಇವುಗಳಲ್ಲಿ ಯಾವುದಾದರೊಂದನ್ನು ಉಪ್ಪು ನೀರಿನಲ್ಲಿ ಅರೆದು ಲೇಪಿಸುವುದು.

ಶುಲುವಳದ ಎಣ್ಣೆ ಮತ್ತು ಹೊನ್ನೆಯೆಣ್ಣೆ ಸಮಾಂಶ ಸೇರಿಸಿ ಸ್ವಲ್ಪ ಗಂಧದಎಣ್ಣೆ ಮತ್ತುಬೋರಿಕ್ ಪೌಡರ್ ಸೇರಿಸಿ ಅರೆದು ಲೇಪಿಸಿದರೆ ಎಲ್ಲಾ ತರದ ವ್ರಣವೂ ಗುಣವಾಗುವುದು.

## ಅಸಾಧ್ಯವಾದ ದುಷ್ಟ ವ್ರಣಕ್ಕೆ

ಜೇಪಾಳದ ಬೇರನ್ನು ನಿಂಬೆಹುಳಿಯ ರಸವಲ್ಲಿ ಅರೆದು ಹಚ್ಚಿದರೆ ವ್ರಣವು ಬೇಗನೇ ಶುದ್ಧಿಯಾದೀತು,

**ಕೀವು ಸೋರುವ ಹುಣ್ಣಿಗೆ:**

ಬಲೀಂದ್ರ ಪಾಲೆಯ ಬೇರನ್ನು ಕಲಗಚ್ಚಿನಲ್ಲಿ ಅರೆದು ಸೇವಿಸುವುದು. ಮತ್ತು ಅದನ್ನೇ ವ್ರಣಕ್ಕೆ ಲೇಪಿಸುವುದು. (ಮೂರು ದಿನ)

**ಏನಾದರೂ ತಾಗಿ ವ್ರಣವಾಗಿ ಗುಣವಾಗದೇ ಇದ್ದರೆ:**

ಉರ್ಕಿ ಗಿಡದ ಬೇರಿನ ಕಷಾಯ ಮಾಡಿ ಧಾರೆಯೆರೆಯುವುದರಿಂದ ಬೇಗನೇ ಗುಣವಾಗುವುದು.

**ಕೀವು ಸೋರುವ ಹುಣ್ಣಿಗೆ (ಕೀವು ಬಹಳವಾಗಿ ತುಂಬಿದ್ದರೆ):**

ನಾಚಿಕೆ ಮುಳ್ಳಿನ ಎಲೆ ಮತ್ತು ಬೇರನ್ನು ಒಟ್ಟಿಗೆ ನುಣ್ಣಗೆ ಅರೆದು ಲೇಪಿಸಿದರೆ ವ್ರಣ ಶುದ್ಧಿಯಾಗುವುದು.

ಪತ್ರಜೀವ (ದಡಬಡಿಕೆ) ಗಿಡದ ಎಲೆಗಳನ್ನು ಅರೆದು ದಪ್ಪವಾಗಿ ಮೆತ್ತಿ ಕಪ್ಪಾದಂತೆ ಲೇಪವನ್ನು ಬದಲಾಯಿಸುತ್ತಿದ್ದು ರಾತ್ರಿ ಹಗಲು ಎಡೆಬಿಡದೆ ಲೇಪಹಾಕುವುದು. ಇದರಿಂದ ಎಲ್ಲಾ ವಿಧ ವ್ರಣಗಳೂ ಶುದ್ಧವಾಗುವು ದಲ್ಲದೆ ಅರ್ಬುದ (ಕ್ಯಾನ್ಸರ್) ಕೂಡಾ ಗುಣವಾಗುವುದು.

**ಅರಗು ಹುಣ್ಣಿಗೆ:**

ಸಾಸಿವೆಯನ್ನು ನುಣ್ಣಗೆ ಅರೆದು ಓಡಿನಲ್ಲಿ ಹಾಕಿ ಬೆಂಬೂದಿಯಲ್ಲಿಟ್ಟು ಕಳ್ಳಿಕೋಲಿನಿಂದ ತೊಳಸುತ್ತಾ ಕುದಿಸಿ ಇಳಿಸಿ ಲೇಪಿಸುವುದು.

**ಕಠಿಣವಾದ ಹುಣ್ಣುಗಳಿಗೆ:**

ಸಾಸಿವೆಯನ್ನು ಅರೆದು ಕಳ್ಳಿದಂಡಿನೊಳಗೆ ತುಂಬಿಸಿ ಪುಟಪಾಕದಲ್ಲಿ ಬೇಯಿಸಿ ತೆಗೆದು ಲೇಪಿಸುವುದು.

**ವಿಷವ್ರಣ, ದುಷ್ಟವ್ರಣ ಇತ್ಯಾದಿಗಳಿಗೆ:**

ಮಂಡೆಳಿಪ್ಪಾಲೆ ಮರದ ಕೆತ್ತೆ ಎರಡು ತೊಲೆ ಹಾಕಿ ಮದ್ದಿನ ಗಂಜಿ ಮಾಡಿ ದಿನದಲ್ಲಿ ಒಂದು ಹೊತ್ತು ಉಣ್ಣುವುದು. (ಇದನ್ನು ಹುಣ್ಣು ಗುಣ ವಾಗುವ ವರೆಗೆ ಅಥವಾ ರೋಗಿಗೆ ಗಂಜಿಯ ಕಹಿಯು ಅನುಭವವಾಗುವ ತನಕ ಉಣ್ಣಬೇಕು).

**ದುಷ್ಟ ವ್ರಣಗಳಲ್ಲಿ ಉರಿದಾಹಗಳಿದ್ದರೆ:**

ಕಾರಸ್ಕರದ ಬೇರನ್ನು ತೇದು ಸಮಾಂಶ ಬೆಣ್ಣೆಯಲ್ಲಿ ಜಾಳಿಸಿ ಲೇಪಿಸುವುದು. ಅಥವಾ ಈ ಬೇರಿನ ಕಷಾಯಕ್ಕೆ ಸ್ವಲ್ಪ ಹಾಲು ಸೇರಿಸಿ ಧಾರೆ ಎರೆಯುವುದು, (ಇದು ವಿಷ)

**ವ್ರಣವು ತುಂಬಿ ಬಾರದಿದ್ದರೆ**

ಶರಪುಂಖದ ಬೇರನ್ನು ಅರೆದು ಜೇನಿನಲ್ಲಿ ಜಾಳಿಸಿ ಲೇಪಿದರೆ ದುರ್ಮಾಂಸವು ಹೋಗಿ ವ್ರಣವು ಬೇಗನೇ ಮಾಯುವುದು.

**ಹುಣ್ಣು ಹುಳಕ್ಕೆ:**

ಕಹಿಸೊರೆಯ ರಸವನ್ನು ಹಚ್ಚಿದರೆ ಕೂಡಲೇ ಹುಳವು ಬಿದ್ದು ಹೋಗುವುದು,

**ಹುರುಕು ಹುಣ್ಣುಗಳಿಗೆ:**

ಹುಳಿ ಮಾವಿನ ಮರದ ಕೆತ್ತೆಯನ್ನು ಆಡಿನ ಹಾಲಿನಲ್ಲಿ ಕಿವಿಚಿ ಸೋಸಿ ಸೇವಿಸುವುದು ಮತ್ತು ಇದೇ ಕೆತ್ತೆಯನ್ನು ಮಜ್ಜಿಗೆಯಲ್ಲರೆದು ಲೇಪಿಸುವುದು ಸಪ್ಪೆ ಅಹಾರ ಸೇವನೆಯೊಂದಿಗೆ ಈ ಚಿಕಿತ್ಸೆ ಮಾಡಿಕೊಂಡರೆ ಶೀಘ್ರವಾಗಿ ಗುಣವಾಗುವುದು. (ಇದು ಪರೆಂಗಿ ಹುಣ್ಣಿಗೂ ಹಿತ),

**ದೀರ್ಘಕಾಲದ ವ್ರಣಕ್ಕೆ:**

ಸಮುದ್ರ ಮಾಪಲ ಕಾಯಿಯನ್ನು ಗೋಮೂತ್ರದಲ್ಲರೆದು ಲೇಪಿಸುವುದು. ಇದರಿಂದ ಗಂಡಮಾಲೆ, ಅಪಚಿ, ಅರ್ಬುದ, ದದ್ದು ಇತ್ಯಾದಿಗಳು ಗುಣವಾಗುವುವು.

**ರೂಪಾಯಿ ಹುಣ್ಣಿಗೆ:**

ನೆರುಗಲದ ಬೇರನ್ನು ತೇದು ದನದ ತುಪ್ಪ ಹಾಕಿ ಜಾಳಿಸಿ ಪದೇ ಪದೇ ಲೇಪಿಸುವುದು. ಇದರಿಂದ ರೂಪಾಯಿ ಹುಣ್ಣು ಸಂಪೂರ್ಣವಾಗಿ ಗುಣವಾಗುವುದು.

ಪಾಜಳೆಯ ಕೆತ್ತೆಯನ್ನು ತೇದು ಲೇಪಿಸುವುದು,

ವ್ರಣವು ಸ್ತಬ್ಧವಾಗಿ ತುರಿಕೆಯಿದ್ದರೆ ಇದರ ಕೆತ್ತೆಯನ್ನು ಉಪ್ಪು ನೀರಿನಲ್ಲಿ ತೇದು ಹಚ್ಚುವುದು. ಉರಿ, ಬೆಂಕಿ ಇದ್ದು ಮೆತ್ತಗಾಗಿದ್ದರೆ ಕಲಗಚ್ಚಿನಲ್ಲಿ ತೇದು ಹಚ್ಚುವುದು. ಸೋರಿ ವ್ರಣವಾಗಿದ್ದರೆ ನಿಂಬೆಹುಳಿಯ ರಸವಲ್ಲಿ ಅರೆದು ಲೇಪಿಸುವುದು. ಇದರಿಂದ ದುಷ್ಟವ್ರಣ, ವಿಷವ್ರಣ, ಮೇಹ ವ್ರಣ ಇತ್ಯಾದಿಗಳು ಗುಣವಾಗುವುದಲ್ಲದೆ ಇದು ಮಂಡೆಲಿ ವಿಷಕ್ಕೆ ಪ್ರಸಿದ್ಧ ವಾದ ಔಷಧಿಯು.

**ಮಂಡೆ ಹುಣ್ಣಿಗೆ:**

ಆಡಿನ ಹಿಕ್ಕೆಯನ್ನು ಭಸ್ಮಮಾಡಿ ಗಂಜಿ ತಿಳಿಯಲ್ಲಿ ಅರೆದು ಲೇಪಿಸು ವುದು. ತಲೆಯ ಹುಣ್ಣು ಗುಣ.

**ಎಲ್ಲಾ ತರದ ವ್ರಣಗಳಿಗೆ:**

ಜಾಜಿ ಮಲ್ಲಿಗೆ ಸೊಪ್ಪು, ಮದ್ರಂಗಿ ಸೊಪ್ಪು ಇವುಗಳನ್ನು ಅರೆದು ದಪ್ಪವಾಗಿ ಲೇಪಿಸುವುದು. ಒಣಗಲು ಬಿಡದೆ ಪುನಃ ಪುನಃ ಲೇಪಿಸುತ್ತಿರ ಬೇಕು ಮತ್ತು ಇವುಗಳ ಸೊಪ್ಪಿನ ಕಷಾಯದಲ್ಲೇ ಮೊಯಬೇಕು.

ಶ್ರೀಗಂಧವನ್ನು ತೇದು ಒಂದು ತೊಲೆಯಷ್ಟನ್ನು ಕಾಯಿಸಿದ ದನದ ಹಾಲಿನಲ್ಲಿ ಕದಡಿ ಪ್ರತಿದಿನ ಬೆಳಗ್ಗೆ ಸೇವಿಸುವುದು. ಸದಾ ಪಥ್ಯದಿಂದಿದ್ದು ನಲುವತ್ತೆಂಟು ದಿನ ಸೇವಿಸಿದರೆ ಎಲ್ಲಾ ವಿ ವ್ರಣಗಳು ಗುಣವಾಗುವವು

ಅತ್ತಿ, ಇತ್ತಿ, ಗೋಳಿ, ಅಶ್ವತ್ಥ ಈ ನಾಲ್ಕು ಮರಗಳ ಕೆತ್ತೆಯ ಕಷಾಯಮಾಡಿ ಜ್ಯೇಷ್ಠಮಧುವನ್ನರೆದು ಕಲ್ಕ ಹಾಕಿ ತುಪ್ಪ ಕಾಯಿಸಿ ಹಚ್ಚು ವುದು. ಇದರಿಂದ ನಾನಾ ತರದ ವ್ರಣಗಳು ಗುಣವಾಗುವವು.

**ಕುರಗಳಿಗೆ:**

ಜ್ಯೇಷ್ಠಮಧುವನ್ನು ಹಸುವಿನ ನೊರೆಹಾಲಿನಲ್ಲಿ ಅರೆದು ಆರಿದಂತೆ ಲೇಪಿಸುತ್ತಿರುವುದರಿಂದ ಬೇಗನೇ ಗುಣವಾಗುವುದು. ಸೋರಿದ ನಂತರ ಜ್ಯೇಷ್ಠಮಧುವನ್ನೇ ಅರೆದು ಹಾಕಿ ತುಪ್ಪ ಕಾಯಿಸಿ ಲೇಪಿಸುವುದು.

ಬೆಳ್ಳುಳ್ಳಿಯನ್ನು ಸುಟ್ಟು ಅರಸಿನದೊಡನೆ ಅರೆದು ಬೆಣ್ಣೆಯಲ್ಲಿ ಕಲಸಿ ಲೇಪಿಸುವುದು.

ಚಾ ಸೊಪ್ಪಿನ ಕಷಾಯ ತಯಾರಿಸಿ (ಕಣ್ಣ ಚಾ) ಅರ್ಧ ಕುಡ್ತೆ ಪ್ರಕಾರ ಪ್ರತಿದಿನ ಬೆಳಗ್ಗೆ ಸೇವಿಸುವುದು. ಹೀಗೆ ಮೂರು ದಿನ ಸೇವಿಸುವುದರಿಂದ ಶೋಧನೆಯು ಸರಿಯಾಗಿ ಜೀರ್ಣಶಕ್ತಿ ಬಂದು ಆರೋಗ್ಯ ಲಭಿಸುವುದು.

**ಎಲ್ಲಾ ತರದ ಕುರು, ಪಿಟಕ ಇತ್ಯಾದಿಗಳಿಗೆ:**

ಎರಪ್ಪೆ ಮರದ ಕೆತ್ತೆಯು ಮದ್ದಿನ ಗಂಜಿಗೆ ತೆಂಗಿನ ಕಾಯಿಯ ತನಿ ಹಾಲು ಹಾಕಿ ಉಣ್ಣುವುದು. ಮೂರು ದಿನ ಉಣ್ಣುವುದರಿಂದ ಎಲ್ಲಾ ತರದ ಕುರು, ಪಿಟಕ, ಹುಣ್ಣು, ಗಜ್ಜಿ ಇತ್ಯಾದಿಗಳು ನಿಶ್ಶೇಷವಾಗಿ ಗುಣವಾಗುವುವು.

**ಹೊಟ್ಟೆಯಲ್ಲಿ ಕುರವೆದ್ದರೆ:**

ಕೆಂಪು ಎಲಗದ ಕೆತ್ತೆಯನ್ನು ಕಲಗಚ್ಚಿನಲ್ಲರೆದು ಆರಿದಂತೆ ಲೇಪಿಸುವುರಿಂದ ಬೇಗನೆ ಗುಣವಾಗುವುದು.

**ಬೆನ್ನು ಕುರಕ್ಕ (ಬೆನ್ನು ಫಣಿ):**

ಸೆಗಣಿಯಿಂದ ಕುರದ ಸುತ್ತಲೂ ಕಟ್ಟೆ ಕಟ್ಟಿ ಒಳಗೆ ಬೆಲ್ಲದ ಹುಡಿಯನ್ನು ಹಾಕಿ ಕಳಲೆಯ ಮತ್ತು ಕುರಟಿಗೆಯೆಲೆಯ ರಸವನ್ನು ಹಾಕಿದರೆ ಕೃಮಿಗಳು ಸತ್ತು ಹುಣ್ಣು ಗುಣವಾಗುವುದು.

**ನಾಡೀ ಹುಣ್ಣಿಗೆ (ನಾರು ಹುಣ್ಣಿಗೆ):**

ಸೀಗೇ ಕಾಯಿಯ ನೀರಿನಿಂದ ಹುಣ್ಣನ್ನು ತೊಳೆದು ಅರಿದಾಳ ಮತ್ತು ಸುಣ್ಣವನ್ನು ಒಟ್ಟಿಗೆ ಸೇರಿಸಿ ನೀರಿನಲ್ಲಿ ಅರೆದು ಲೇಪಿಸುವುದು.

ಕರವೀರದ ಎಲೆಯ ಭಸ್ಮವನ್ನು ನಿಂಬೆಹುಳಿಯ ರಸದಲ್ಲರೆದು ಲೇಪಿಸುವುದು.

ನಾಲ್ಕು ಭಾಗ ಹರಳ ಪಪ್ಪು, ಒಂದು ಭಾಗ ಮೈಲ್‌ತುತ್ತು, ಇವುಗಳನ್ನು ತಾಮ್ರದ ಪಾತ್ರೆಯಲ್ಲಿ ಹಾಕಿ ಮೊಸರ ನೀರಿನಲ್ಲಿ ಅರೆದು ಮರ್ದಿಸಿ ಪ್ರತಿದಿನವೂ ಹಚ್ಚುವುದರಿಂದ ಗುಣವಾಗುವುದು.

**ಪಿತ್ತದಿಂದ ಬಂದ ಗಂದೆಗಳಿಗೆ (ದಡಿಕೆಗಳಿಗೆ):**

ಸೈಂಧವ ಲವಣವನ್ನು ಆಕಳ ತುಪ್ಪದಲ್ಲರೆದು ಸೇವಿಸುವುದು ಮತ್ತು ಲೇಪಿಸುವುದು.

ಅಣಲೆ ಕಾಯಿಯನ್ನು ಗೋಮೂತ್ರದಲ್ಲಿ ನನೆಯಿಸಿ ಕೊಬರಿ ಹೋಳು ಸೇರಿಸಿ ಅರೆದು ಲೇಪಿಸುವುದು.

ಉತ್ತರಣೆಯ ಬೇರು ಯಾ ನಸುಗುನ್ನಿ (ನಾಯಿಸೋಣಂಗು) ಯ ಬೇರು ನಾಲ್ಕು ತೊಲೆಯಷ್ಟನ್ನು ಜಜ್ಜಿ ಸೀಯಾಳದೊಳಗೆ ತುಂಬಿಸಿ ಒಂದು ರಾತ್ರೆ ಮುಚ್ಚಿ ಇರಿಸಿ ಮರುದಿನ ಬೆಳಗ್ಗೆ ಸೋಸಿ ಸೇವಿಸುವುದು. (ಆರು ದಿನ). ಇದರಿಂದ ಮೂತ್ರದೋಷ, ರಕ್ತ ದೋಷ, ವಿಸರ್ಪ, ಗಂದೆಗಳು ಸಹಿತ ಗುಣವಾಗುವುವು.

**ತುರಿಕಜ್ಜುಗಳಿಗೆ:**

ಬಿಲ್ವಪತ್ರೆ ಕಾಯಿ, ಅರಸಿನ, ಕಲ್ಲುಪ್ಪು (ಸೈಂಧವ), ಅಟ್ಟದ ಕರಿ, (ಇಲ್ಲಣ = ಪುಜಂಗರಿ) ಇವುಗಳನ್ನು ಗೋಮೂತ್ರದಲ್ಲರೆದು ಎಣ್ಣೆ ಸೇರಿಸಿ ಕಾಯಿಸಿ ಹಚ್ಚುವುದು.

ಮೈತ್ತಬಳ್ಳಿಯ ಬೂದಿಯನ್ನು ತುಪ್ಪದಲ್ಲಿ ಅರೆದು ಮುಲಾಮಿನಂತೆ ಆಗಾಗ ತೆಗೆದು ಲೇಪಿಸುವುದು.

ಪಲ್ಲೆಕಾಯಿ, ಗಜಿಗೆ ತಿರುಳು, ಚಿತ್ರಟೆಕಾಯಿ, ಉಮ್ಮತ್ತದ ರಸ ಇವುಗಳನ್ನು ಹುಳಿ ಮಜ್ಜಿಗೆ ಸೇರಿಸಿ ಅರೆದ ಜೇನಿನಲ್ಲಿ ಜಾಳಿಸಿ ಕಜ್ಜಿಗೆ ಲೇಪಿಸುವುದು.

ಅರಸಿನ, ಕರಿಮೆಣಸು, ಇವೆರಡನ್ನೂ ಸಮಾಂಶ ಸೇರಿಸಿ ಚೂರ್ಣಮಾಡಿ ಎಣ್ಣೆ ಹಾಕಿ ಕಾಯಿಸಿ ಈ ಎಣ್ಣೆ ಲೇಪಿಸಿದರೆ ಗುಣವಾಗುವುದು.

ಗರಿಕೆಹುಲ್ಲು ಮತ್ತು ಸಮೂಲವಾದ ನೆಲಮುಚ್ಚಿರು ಗಿಡ ಇವುಗಳನ್ನು ಅರೆದು ರಸ ತೆಗೆದು ರಸದ ಅರ್ಧಾಂಶದಷ್ಟು ಎಣ್ಣೆ ಸೇರಿಸಿ ಕಾಯಿಸಿ ಹದವಾದ ಪಾಕದಲ್ಲಿಳಿಸಿ ಸೋಸಿ ಲೇಪಿಸಿದರೆ ಎಲ್ಲಾ ತರದ ತುರಿಸುವ ವ್ರಣವೂ ಗುಣವಾಗುವುದು.

ಇಂದುಪ್ಪು ಮತ್ತು ಕರಿಮೆಣಸು ಇವುಗಳನ್ನು ಚೂರ್ಣಮಾಡಿ ಎಮ್ಮೆಯ ಬೆಣ್ಣೆಯಲ್ಲಿ ಜಾಳಿಸಿ ಲೇಪಿಸುವುದು.

**ಅಸಹ್ಯವಾದ ತುರಿಕಜ್ಜುಗಳಿಗೆ:**

ಕಲ್ಮದ, ಮೃದಾರಶೃಂಗಿ (ಕಂಕುಷ್ಠ) ಇವುಗಳನ್ನರೆದು ಎಣ್ಣೆ ಹಾಕಿ ಕಾಯಿಸಿ ಈ ಎಣ್ಣೆಯನ್ನು ಹಚ್ಚುವುದರಿಂದ ಮೈಮೇಲಿನ ಹುಣ್ಣುಗಳು

ಗುಣವಾಗುವುವು. (ಮೃದಾರಶೃಂಗಿಯು ವಿಷವಾದುದರಿಂದ ಸೇವನೆಯಾಗ ದಂತೆ ಜಾಗರೂಕತೆಯಿಂದ ಉಪಯೋಗಿಸಬೇಕು.)

**ತುರಿಕಜ್ಜು ಮತ್ತು ದದ್ದುಗಳಿಗೆ:**

ಪಂಚಬಳ್ಳಿ ಎಲೆ ಒಂದು ಕಟ್ಟು ಮತ್ತು ಒಂದು ತೊಲೆ ಚೂರಿ ಗಂಧಕ, ಎರಡಾಣೆ ತೂಕ ಪಾದರಸ ಇವುಗಳನ್ನು ಸಣ್ಣಗೆ ಅರೆದು ಕೊಬರಿ ಯೆಣ್ಣೆಯಲ್ಲಿ ಕಲಸಿ ಹಚ್ಚಿದರೆ ವಾಸಿಯಾಗುವುದು. (ಮೂರು ದಿನ)

ಚಗಟೆ ಬೀಜವನ್ನು ದನದ ಮಜ್ಜಿಗೆಯಲ್ಲಿ ಒಂದು ರಾತ್ರಿ ನೆನೆ ಹಾಕಿ ಮರುದಿನ ಬೆಳಗ್ಗೆ ಅರಸಿನ, ಕರಿಜೀರಿಗೆ, ಇವುಗಳನ್ನರೆದು ಕಲ್ಕ ಸೇರಿಸಿ ಕಲ್ಕದ ಎಂಟು ಪಾಲು ಎಣ್ಣೆ ಹಾಕಿ ಕಾಯಿಸಿ ಹದಪಾಕದಲ್ಲಿಳಿಸಿ ಸೋಸಿ ಇರಿಸಿಕೊಂಡು ಈ ಎಣ್ಣೆ ಹಚ್ಚುವುದು.

**ಎಲ್ಲಾ ತರದ ಗಜ್ಜುಗಳಿಗೆ:**

ಅತ್ತಿ ಕೆತ್ತೆ, ಬೇಂಗವ ಕೆತ್ತೆ, ಬುಗರಿ ಕೆತ್ತೆ ಇವುಗಳ ಮದ್ದಿನ ಗಂಜಿ ಮಾಡಿ ಉಣ್ಣುವುದು. (ಏಳು ದಿನ,)

**ಮಕ್ಕಳ ಕುರ ಮತ್ತು ಕಜ್ಜುಗಳಿಗೆ:**

ಬಂದನಾರು ಗಿಡದ ತೊಗಟೆಯನ್ನು ಅಷ್ಟಾವಶೇಷ ಕಷಾಯ ಮಾಡಿ ಕುಡಿಸುವುದು. ಒಂದರಿಂದ ಎರಡು ವರ್ಷ ಪ್ರಾಯದ ಮಕ್ಕಳಿಗೆ ಪಾದಾವ ಶೇಷ ಕಷಾಯವೂ ಹಿತ.

**ಮಕ್ಕಳ ಕೆಂಪು ಕಜ್ಜುಗಳಿಗೆ (ಕೆಂಪಿನ ರೋಗ):**

ಕಾಚಿ ತಿರುಳನ್ನು ಹಾಗಲ ಸೊಪ್ಪಿನ ರಸದಲ್ಲಿ ಅರೆದು ಹಚ್ಚುವುದು.

ಕಿಸ್ಕಾರ ಬೇರಿನ ಸಿಪ್ಪೆಯನ್ನು ತೆಂಗಿನ ಕಾಯಿಯ ಹಾಲಿನಲ್ಲಿ ಅರೆದು ಕಲಾಯಿ ಇಲ್ಲದ ತಾಮ್ರದ ಪಾತ್ರೆಯಲ್ಲಿ ಹಾಕಿ ಬಿಸಿಲಿನಲ್ಲಿರಿಸಿ ಅದರ ಮೇಲೆ ನೆಗೆದು ಬಂದ ಎಣ್ಣೆಯನ್ನು ಲೇಪಿಸುವುದು.

ಶ್ರೀಗಂಧ, ರಕ್ತಚಂದನ, ಗರಿಕೆಹುಲ್ಲು, ಅಣಲೆಕಾಯಿ, ಕವರೆಲೆ ಇವುಗಳನ್ನು ಕೆಂದಾಳಿ ಸೀಯಾಳದ ಸಿಪ್ಪೆಯ ರಸದಲ್ಲಿ ಅರೆದು ಲೇಪಿಸುವುದು. ಮತ್ತು—

ಶತಾವರಿ ಗಡ್ಡೆ, ಗರಿಕೆಹುಲ್ಲು, ವಾಯುವಿಳಂಗದ ಬೇರು, ಇವುಗಳನ್ನು ಒಂದೊಂದು ತೊಲೆ ಪ್ರಕಾರ ಹಾಕಿ ಮದ್ದಿನ ಗಂಜಿ ಮಾಡಿ ಉಣ್ಣುವುದು.

ಬಿಳಿ ದಾಸವಾಳದ ಬೇರು, ವಾಯುವಿಳಂಗದ ಬೇರು, ಕಿಸ್ಕಾರದ ಬೇರು ತೆಂಗಿನ ಮರದ ಬೇರಿನ ಎಳೆತುದಿ, ಒಳ್ಳೆಕೊಡಿಯ ಚಿಗುರು, ಕಿರುತಾಳಿ ಸೊಪ್ಪು, ಕರಿಉರಗೆ ನೈಕುಳೊವು, ಪಲ್ಲಿಸಪ್ಪು, ಕೆಂಪು ಐತ್ತಬಳ್ಳಿ ಬೇರು. ಇವುಗಳನ್ನು ಸಮಾಂಶ ಸೇರಿಸಿ ದನದ ಹಾಲಿನಲ್ಲಿ ಅಥವಾ ಕೆಂದಾಳಿ ಸೀಯಾಳದ ಸಿಪ್ಪೆಯ ರಸದಲ್ಲಿ ಅರೆದು ಆರಿದಂತೆ ಲೇಪಿಸುವುದು. ಮತ್ತು

ಐತ್ತಬಳ್ಳಿ, ಗೋಳಿತ್ತಟ್ಟೆ (ಬಂದನಾರು), ಕಿಸ್ಕಾರ ಬೇರು, ಕೆಂದಾಳಿ ಸೀಯಾಳದ ಸಿಪ್ಪೆ ಇವುಗಳ ಕಷಾಯದಲ್ಲಿ ಮೀಯಿಸುವುದು.

**ಕೆಂಪು ರೋಗಕ್ಕೆ:**

ಪಾರೆಮುಳ್ಳು (ಸಮೂಲ), ಪುರುಷರತ್ನ ಯಾ ಓರಿಲೆ ತಾವರೆ (ಸಮೂಲ), ಶತಾವರಿ ಸೊಪ್ಪು, ಇವುಗಳನ್ನು ಸಮಾಂಶವಾಗಿ ಸೇರಿಸಿ ಕೆಂದಾಳೀ ಸೀಯಾಳದ ಸಿಪ್ಪೆಯ ರಸದಲ್ಲಿ ಅರೆದು ಒಂದು ತೊಲೆಯಷ್ಟು ಬೆಳಗ್ಗೆ ಸೇವಿಸುವುದು. (ಐದು ದಿನ) ಇದರಿಂದ ಎಲ್ಲಾ ತರದ ಕೆಂಪು ರೋಗವೂ ಗುಣವಾಗುವುದು.

**ಮಕ್ಕಳ ಕಜ್ಜುಗಳಿಗೆ:**

ತೊಂಡೆ ಸೊಪ್ಪಿನ ರಸದಲ್ಲಿ ಶ್ರೀಗಂಧವನ್ನರೆದು ಲೇಪಿಸುವುದು ವಾ ಕಾಚೀ ತಿರುಳನ್ನರೆದು ಲೇಪ.

**ಹೊಯಿಗೆಯಂತೆ ಸಣ್ಣ ಸಣ್ಣದಾಗಿ ದಪ್ಪವಾಗಿ ಬಹಳ ತುರಿಕೆ ಯಿರುವ ಗಜ್ಜುಗಳಿಗೆ:**

ಮದ್ರಂಗಿ, ಜಾಜಿಮಲ್ಲಿಗೆ, ಕಾಡುಮಲ್ಲಿಗೆ ಇವುಗಳ ಸೊಪ್ಪು ಮತ್ತು ಕಂಕುಷ್ಠ ಇವುಗಳನ್ನು ಸಮಾಂಶ ಸೇರಿಸಿ ತೆಂಗಿನ ಎಣ್ಣೆಯಲ್ಲಿ ಅರೆದು ಕುತ್ತಿಗೆಯಿಂದ ಕೆಳಗೆ ಮೈ ಸರ್ವಾಂಗ ಲೇಪಿಸುವುದು. ಮತ್ತು—

ಕುಕ್ಕುಸನ ಸೊಪ್ಪು (ಎಂಜಿರು ಸೊಪ್ಪು). ಕಿಸ್ಕಾರ ಬೇರು, ಕುಂಟಾಂಗಿಲ ಮರದ ಕೆತ್ತೆ ಇವುಗಳನ್ನು ಹಾಕಿ ತಯಾರಿಸಿದ ಕಷಾಯದಲ್ಲಿ ಹದ ಬಿಸಿ

ಯಿರುವಾಗ ಸ್ನಾನ ಮಾಡಿಸುವುದು. ಲೇಪ ಹಾಕಿದ ಮದ್ದು ಒಂದು ಜಾವ ವರೆಗೆ ಮೈಯಲ್ಲಿರಬೇಕು. ಹೀಗೆ ಮೂರು ಯಾ ಆರುದಿನ ಚಿಕಿತ್ಸೆ ಮಾಡು ವುದರಿಂದ ಮಕ್ಕಳ ಗಜ್ಜು ಸಂಪೂರ್ಣ ಗುಣವಾಗುವುದು.

**ಮಕ್ಕಳ ಹುಣ್ಣು ಗಜ್ಜುಗಳಿಗೆ:**

ಹುಳಿ ಮಾವಿನ ಮರದ ಕೆತ್ತೆಯನ್ನು ಚೂರ್ಣ ಮಾಡಿ ಮಜ್ಜಿಗೆ ಹಾಕಿ ಕಲಸಿ ಕಲಾಯಿ ಇಲ್ಲದ ತಾಮ್ರದ ತಟ್ಟೆಯಲ್ಲಿ ಹಾಕಿ ಒಂದು ದಿನವಿರಿಸಿ ತೆಗೆದು ಬೆಳಗ್ಗೆ ಮೈಗೆ ಸರ್ವಾಂಗ ಹಚ್ಚುವುದು, ಆರಿದಂತೆ ಪುನಃ ಹಚ್ಚು ತ್ತಿರಬೇಕು. ಒಂದು ಜಾವ ಬಿಟ್ಟು ಮೀಯಿಸುವುದು.

**ಮಕ್ಕಳ ಹುಣ್ಣು ಗಜ್ಜುಗಳ ಕಲೆಗಳಿಗೆ:**

ಕವಡೆಯನ್ನು ಚೂರ್ಣಮಾಡಿ ತೆಂಗಿನ ಕಾಯಿಯ ತನಿ ಹಾಲಿನಲ್ಲಿ ಅರೆದು ಎರಟಿ ಮಧುರದ ಚೂರ್ಣವನ್ನು ಸೇರಿಸಿ ಕಲಾಯಿಯಿಲ್ಲದ ತಾಮ್ರದ ತಟ್ಟೆಯಲ್ಲಿ ಹಾಕಿ ಬಿಸಿಲಿನಲ್ಲಿರಿಸಿ ಮೇಲೆ ನೆಗೆದು ಬರುವ ಎಣ್ಣೆಯನ್ನು ತೆಗೆದು ಹಚ್ಚುವುದರಿಂದ ವ್ರಣಕಲೆ, ಬಿಳಿಕಲೆ ಇತ್ಯಾದಿಗಳು ಗುಣವಾಗುವುವು.

**ಮಕ್ಕಳ ತುರಿಗಜ್ಜಿ ಇತ್ಯಾದಿಗಳಿಗೆ:**

ಕಿಸ್ಕಾರ ಬೇರಿನ ಸಿಪ್ಪೆಯನ್ನು ಜಜ್ಜಿ ತೆಂಗಿನೆಣ್ಣೆಯಲ್ಲಿ ಹಾಕಿ ಮೂರು ದಿನ ಮುಚ್ಚಿ ಭದ್ರವಾಗಿರಿಸಿ ಆ ಎಣ್ಣೆಯನ್ನು ಹಚ್ಚುವುದರಿಂದ ತುರಿಗಜ್ಜಿ, ಶೀತ, ಕೆಂಪು, ಬಿರುಕು, ಹುಣ್ಣು, ಕ್ಷೀಣ ಇತ್ಯಾದಿಗಳು ಗುಣವಾಗುವುವು.

ಹಾಡೆಗಡ್ಡೆಯನ್ನು ಜಜ್ಜಿ ತೆಂಗಿನೆಣ್ಣೆ ಸೇರಿಸಿ ತಾಮ್ರದ ಪಾತ್ರೆಯಲ್ಲಿ ರಿಸಿ ಮೂರು ದಿನ ಆ ಎಣ್ಣೆಯನ್ನು ಲೇಪಿಸುವುದರಿಂದ ಅನೇಕ ವಿಧದ ಮಕ್ಕಳ ಹುಣ್ಣು ಗಜ್ಜು ಗುಣವಾಗುವುದು.

ಕಡಿರಬೇರಿನ ಸಿಪೆ, ಭಜೆ, ಇವುಗಳನ್ನು ಜಜ್ಜಿ ಹಾಕಿ ಕಾಯಿಸಿದ ಎಣ್ಣೆ ಲೇಪಿಸುವುದು. ಮತ್ತು—

ಭದ್ರಮುಷ್ಟಿಗಡ್ಡೆ ಮತ್ತು ಭಜೆ ಹಾಕಿ ತಯಾರಿಸಿದ ಶೀತ ಕಷಾಯ ದಲ್ಲಿ ಮೀಯಿಸುವುದು.

**ಮಕ್ಕಳ ನಂಜು ಹುಣ್ಣುಗಳಿಗೆ:**

ನೆಲಪ್ಪರಂಡೆಯು ಗಿಡದ ಸ್ವರಸಕ್ಕೆ ಸಮಾಂಶ ತೆಂಗಿನೆಣ್ಣೆ ಸೇರಿಸಿ ಈಶ್ವರ ಬಳ್ಳಿಯು ಎಲೆಯನ್ನರೆದು ಕಲ್ಕ ಸೇರಿಸಿ ಎಣ್ಣೆ ಕಾಯಿಸಿ ಹದಪಾಕ ದಲ್ಲಿಳಿಸಿ ಇರಿಸಿಕೊಂಡು ಈ ಎಣ್ಣೆಯನ್ನು ಹಚ್ಚುವುದರಿಂದ ಗುಣವಾಗುವುದು.

**ಮಕ್ಕಳ ಮೈಮೇಲೆ ಬೆಂಕಿ ಗುಳ್ಳೆಯಂತೆ ಎದ್ದು ಕೀವಾಗುವ ಹುಣ್ಣುಗಳಿಗೆ:**

ಸಂಬಾರಬೇವಿನ ಎಲೆ, ಕರಿಹುರುಳಿ, ಬೀಜದ್ರಾಕ್ಷಿ, ಇವುಗಳನ್ನು ಪ್ರತ್ಯೇಕ ಪ್ರತ್ಯೇಕ ಮುಕ್ಕಾಲು ತೊಲೆ ಪ್ರಕಾರ ಸೇರಿಸಿ ಜಜ್ಜಿ ನಾಲ್ಕು ಕುಡ್ತೆ ನೀರಿನಲ್ಲಿ ಕಷಾಯವಿರಿಸಿ ಬತ್ತಿಸಿ ಅರ್ಧ ಕುಡ್ತೆ ಮಾಡಿ ರಾತ್ರಿ ಮತ್ತು ಬೆಳಗ್ಗೆ ಕಾಲು ಕಾಲು ಕುಡ್ತೆ ಕಷಾಯ ಸೇರಿಸುವುದು. ಮತ್ತು—

ಹೊಗೆಕರಿ (ಇಲ್ಲಣ), ಅರಸಿನ, ಚೆಂಗಲಕೋಷ್ಠ, ಕೊಡಗಪ್ಪಾಲರಿ. ಸಾಸಿವೆ, ಇವುಗಳನ್ನು ಮಜ್ಜಿಗೆಯಲ್ಲಿ ಅರೆದು ಲೇಪಿಸುವುದು. (ಹನ್ನೆರಡು ದಿನ). ಇದರಿಂದ ವಿವಿಧ ತದ್ದು, ತುರಿಗಜ್ಜಿ, ಇತ್ಯಾದಿ ಗುಣವಾಗುವುದು.

ಎಮ್ಮೆಯ ಸೆಗಣಿಯನ್ನು ನೀರಿನಲ್ಲಿ ಕದಡಿ ವ್ರಣಭಾಗವನ್ನು ಅದರಲ್ಲಿ ಒಂದೂವರೆ ಘಂಟೆ ಸಮಯ ಮುಳುಗಿಸಿಟ್ಟು ಆ ಮೇಲೆ ತೆಗೆದು ತೊಳೆಯುವುದು.

ಹಾಗಲ ಸೊಪ್ಪಿನ ಸ್ವರಸ ಒಂದು ಔನ್ಸು, ಒಂದು ಚಿಟಿಕೆ ಅರಸಿನ ಗಡ್ಡೆಯ ಚೂರ್ಣವನ್ನು ಹಾಕಿ ಕದಡಿ ಕುಡಿಸುವುದು. (ಮೂರು ದಿನ) ಇದರಿಂದ ಅನೇಕ ವಿಧ ವ್ರಣಗಳು ಮಾಯುವುವು.

**ಮಕ್ಕಳಿಗೆ ಗುದ ವ್ರಣವಾದರೆ:**

ಜೀರಿಗೆಯನ್ನು ಹರಳೆಣ್ಣೆಯಲ್ಲಿ ಹುರಿದು ಅರೆದು ಲೇಪಿಸುವುದು.

# ಬಾವುಗಳಿಗೆ

**ವಿದ್ರಧಿಗೆ:**

ಜೂರಿ ಮುಳ್ಳಿನ ಎಲೆಯನ್ನು ಅರೆದು ಲೇಪಿಸುವುದು.

ಹಾಡೆಗಡ್ಡೆಯನ್ನು ವಸ್ತ್ರಗಾಳಿತ ಚೂರ್ಣಮಾಡಿ ಪ್ರತಿದಿನ ಬೆಳಿಗ್ಗೆ ಒಂದು ತೊಲೆ ಚೂರ್ಣವನ್ನು ಕಲಗಚ್ಚಿನಲ್ಲಿ ಅಥವಾ ಧಾನ್ಯಾಮ್ಲದಲ್ಲಿ ಕದಡಿ ಸೇವಿಸುವುದು ಮತ್ತು ಇದೇ ಮದ್ದನ್ನು ಲೇಪಕ್ಕೂ ಉಪಯೋಗಿಸುವುದು. ಹೀಗೆ ಒಂದು ತಿಂಗಳು ಬಿಡದೆ ಚಿಕಿತ್ಸೆ ನಡೆಸಿದರೆ ಇದರಿಂದ ಅಸಾಧ್ಯ ವಿದ್ರಧಿ. ಬೆರಳುಕುರು, ಅರ್ಬುದವು ಸಹ ಗುಣವಾಗುವುದು.

**ಬಾವುಗಳಿಗೆ:**

ಹುಳಿ ಮಜ್ಜಿಗೆ, ಹುಣಸೆ ಹುಳಿ, ಇವುಗಳನ್ನು ಸಮಾಂಶ ಸೇರಿಸಿ ಚೆನ್ನಾಗಿ ಜಾಳಿಸಿ ಪದೇ ಪದೇ ಲೇಪಿಸುವುದು. ಇದರಿಂದ ಕುರ, ಪಿಟಕ, ಗ್ರಂಥಿ ಮೊದಲಾದವುಗಳು ಶೀಘ್ರವಾಗಿ ಗುಣವಾಗುವುದು.

**ದೊಡ್ಡ ಬಾಪಿನ ಲೇಪಕ್ಕೆ:**

ಕಲ್ಮರ, ಕಾಟು ಕೊಡಂಚಿ, ಕಡುಕಾರೆಕಾಯಿ, ಹಾಲುಬಳ್ಳಿಸೊಪ್ಪು. ಸೀಗೆಕಾಯಿ, ಉಮ್ಮತ್ತದ ಕಾಯಿ, ಹೆದ್ದುಂಬೆ ಬೇರು, ಕಾಳಮೆಣಸು, ಉಪ್ಪು ಇವುಗಳನ್ನು ಕಂಚುಹುಳಿಯ ರಸದಲ್ಲಿ ಅರೆದು ಕುದಿಸಿ ಲೇಪಿಸಿದರೆ ಆರಿ ಹೋಗುವುದು. ಮತ್ತು—

ಬಯಲುಮುಳ್ಳುಗಿಡದ ಕ್ಷಾರವನ್ನು ತಂಗಳ ತೆಳಿಯಲ್ಲಿ ಸೇವಿಸುವುದು.

**ಕಲ್ಲು ಬಾವು:**

ಶುಳುವಲ ಮರದ ಸೊಪ್ಪನ್ನು ದೊಡ್ಡಿ ಹುಳಿಯ ರಸದಲ್ಲಿ ಅರೆದು ಆರಿದಂತೆ ಆಗಾಗ ಲೇಪಿಸುತ್ತಿದ್ದರೆ ಬಾವು ಸಣ್ಣದಾಗಿ ಸೋರಿ ಹೋಗುವುದು.

**ಬೆಂಕಿ ಬರುವ ಎಲ್ಲಾ ಬಾವುಗಳಿಗೆ:**

ಲಕ್ಕಿ ಬಳ್ಳಿಯನ್ನು ಬೆಳ್ತಿಗೆಯಕ್ಕಿ ಸೇರಿಸಿ ಅಕ್ಕಚ್ಚು ನೀರಿನಲ್ಲಿ ಅರೆದು ದಪ್ಪವಾಗಿ ಲೇಪಿಸುವುದು. ಆರಿದಂತೆ ಪುನಃ ಪುನಃ ಹಚ್ಚುತ್ತಿರಬೇಕು. ಇದರಿಂದ ಕೈತ್ರಟ್ಟಿನ ಬಾವು ಸಹ ಗುಣವಾಗುವುದು.

**ಏಡಿ ಬಾವಾದರೆ (ಡೆಂಜಿ ಬಾವು):**

ಇಟ್ಟೋವು (ಇಬ್ಬನೆ) ಗಿಡದ ಚಿಗುರನ್ನು ಜೀರಿಗೆ ಸೇರಿಸಿ ಅರೆದುಕಲ್ಕ ಹಾಕಿ, ಕಲ್ಕದ ಎಂಟು ಪಾಲು ತೆಂಗಿನೆಣ್ಣೆ ಹಾಕಿ ಕಾಯಿಸಿ ಪದಪಾಕದಲ್ಲಿ ಇಳಿಸಿ ಸೋಸಿ ಈ ಎಣ್ಣೆಯನ್ನು ಧಾರೆಯೆರೆಯುವುದು ಮತ್ತು ಹಚ್ಚುವುದು. ಇದರಿಂದ ಏಡಿ ಬಾವು ಸುಲಭವಾಗಿ ಶೀಘ್ರದಲ್ಲೇ ಗುಣವಾಗುವುದು.

**ತೈಲಯೋಗ:**

ನಿಂಬೆ ಹುಳಿಯ ರಸ, ಪಂಚಬಳ್ಳಿ ವೀಳ್ಯದೆಳೆಯ ರಸ, ತೆಂಗಿನೆಣ್ಣೆ ಇವುಗಳನ್ನು ಒಂದೊಂದು ಕುಡ್ತೆ ಪ್ರಕಾರ ಸೇರಿಸಿ ಒಂದು ಏಡಿ ಬೆನ್ನಿನ ಓಡು ಮತ್ತು ಒಂದು ತಾರ ತೂಕ ಅರಸಿನವನ್ನರೆದು ಕಲ್ಕಹಾಕಿ ಕಾಯಿಸಿದ ಎಣ್ಣೆಯನ್ನು ಅಭಿಷೇಕಿಸುವುದರಿಂದ ಏಡಿ ಬಾವು ಗುಣವಾಗುವುದು. ಕಲ್ಕ ಹಾಕಲು ಏಡಿ ಬೆನ್ನಿನ ಓಡು ಸಿಗದಿದ್ದರೆ ಒಂದೂವರೆ ತೊಲೆ ಏಲಕ್ಕಿಯನ್ನರೆದು ಸೇರಿಸಿ ಮಳಲು ಪಾಕವಾಗಿ ಕಾಯಿಸಿ ಒಂದು ತಾರ ತೂಕ ಕರಿಜೀರಿಗೆಯ ಚೂರ್ಣವನ್ನು ಪಾತ್ರೆಪಾಕಕ್ಕೆ ಹಾಕಿ ಈ ತೈಲವನ್ನು ಅಭಿಷೇಕಿಸುವುದು ಮತ್ತು ಹಚ್ಚುವುದರಿಂದಲೂ ಏಡಿಬಾವು ಶೀಘ್ರವಾಗಿ ಗುಣವಾಗುವುದು.

**ಏಡಿ ಬಾವು ಸೋರಿ ಹುಣ್ಣಾಗಿದ್ದರೆ:**

ಇಟ್ಟೋವು ಚಿಗುರು ಜೀರಿಗೆ ಸೇರಿಸಿ ಅರೆದು ತೆಂಗಿನೆಣ್ಣೆ ಸೇರಿಸಿ ಕಾಯಿಸಿ ಕರಿಜೀರಿಗೆ ಚೂರ್ಣವನ್ನು ಹಾಕಿ ಈ ಎಣ್ಣೆ ಧಾರೆ ಮತ್ತು ಲೇಪನಗಳನ್ನು ಮಾಡುವುದರಿಂದ ಏಡಿ ಬಾವು ಹುಣ್ಣು ಗುಣವಾಗುವುದು.

**ಮೈಯಲ್ಲಿ ಬಾವು ಎದ್ದರೆ:**

ಕಹಿಬೇವಿನ ಕೆತ್ತೆಯನ್ನು ಅರೆದು ಲೇಪಿಸುವುದು. ಕಷಾಯಮಾಡಿ ಸೇವಿಸುವುದು.

**ಗಳಲೆಯೆದ್ದರೆ:**

ಸೋಮವಾರದ ಬೇರನ್ನು ಸುಣ್ಣದ ನೀರಿನಲ್ಲಿ ತೇದು ಲೇಪಿಸುವುದು.

ಕಂಕುಷ್ಠ, ಇಂದುಪ್ಪು ಇವುಗಳನ್ನು ಸಮಾಂಶ ಸೇರಿಸಿ ಅರೆದು ಲೇಪಿಸಿದರೆ ಆರಿ ಹೋಗುವುದು.

ಬೆಲ್ಲ ಮತ್ತು ಸುಣ್ಣ ಸಮಾಂಶ ಸೇರಿಸಿ ಜಾಳಿಸಿ ಲೇಪಿಸಿದರೆ ಕೂಡಲೇ ಅರಿಹೋಗುವುದು. ಜೇನು ಮತ್ತು ಸುಣ್ಣವೂ ಲೇಪಕ್ಕೆ ಹಿತ.

**ಭಗಂದರಕ್ಕೆ:**

ನಾಗದಂತಿಯ ಬೇರು, ಅರಸಿನ ಮತ್ತು ನೆಲ್ಲಿಚಟ್ಟು ಇವುಗಳನ್ನು ಕಾದಾರಿದ ನೀರಿನಲ್ಲಿ ಅರೆದು ಲೇಪಿಸುವುದು.

ಕಾಕತೊಂಡೆ ಬೇರನ್ನು ಮತ್ತು ವಿಷಮುಂಗ್ಲಿ ಗಡ್ಡೆಯನ್ನು ಸಮಾಂಶ ಸೇರಿಸಿ ನಿಂಬೆಹುಳಿಯ ರಸದಲ್ಲಿ ಅರೆದು ಲೇಪಿಸುವುದು.

ಬೇರ (ಜೇಪಾಳ) ದ ಬೇರನ್ನು ಹಸಿಯರಸಿನದ ರಸದಲ್ಲಿ ಅರೆದುಹಚ್ಚಿದರೆ ವ್ರಣವು ಸೋರಿ ಶುದ್ಧವಾಗುವುದು.

ಗರಗದ ರಸ, ಸೈಂಧವ ಲವಣ, ಸಾಸಿವೆ, ಕೈಬೇವಿನ ಕೆತ್ತೆ, ಛಜಿ ಇವುಗಳನ್ನರೆದು ಅರಿದಂತೆ ಪದೇ ಪದೇ ಲೇಪಿಸುತ್ತಿರುವುದು.

(ವಿ. ಸೂ. ಮೇಲಿನ ಲೇಪ ನಡೆಸುತ್ತಿರುವಾಗಲೇ ತ್ರಿಫಲಾ ಖದಿರ ಕಷಾಯವನ್ನು ಸೇವಿಸಿಕೊಳ್ಳುವುದು ಉತ್ತಮ ಫಲ.)

**ಕೌಳು ಕುರುವಿಗೆ:**

ರಾವು ಬೀಜದ ಮರದ ಚಿಗುರನ್ನು ಎಮ್ಮೆ ಮಜ್ಜಿಗೆಯಲ್ಲಿ ಅರೆದು ಪದೇ ಪದೇ ಲೇಪಿಸುವುದು.

**ಬೀಗಿದ್ದ ಬಾವು ಹಣ್ಣಾಗಲಿಕ್ಕೆ:**

ಅರಸಿನದ ಹುಡಿಯನ್ನೂ ಖೊಬರಿ ಹಿಂಡಿಯನ್ನೂ ನೀರಿನಲ್ಲಿ ಅರೆದು ಕುದಿಸಿ ರಾತ್ರಿ ದಪ್ಪವಾಗಿ ಲೇಪಿಸಿ ಬಟ್ಟೆ ಕಟ್ಟಿದರೆ ಬಾವು ಹಣ್ಣಾಗುವುದು.

**ಎಲ್ಲಾ ಬಾವುಗಳು ಸೋರಿದ ನಂತರ ಗುಣಪಡಿಸಲಿಕ್ಕಿರುವ ಸಿದ್ಧೌಷಧ:**

ಅತ್ತಿ ಕೆತ್ತೆಯನ್ನು ದನದ ತುಪ್ಪದಲ್ಲಿ ಹುರಿದು ನುಣ್ಣಗೆ ಅರೆದು ಆಗಾಗ ಲೇಪಿಸಿದರೆ ವ್ರಣವು ಆಶ್ಚರ್ಯಕರವಾಗಿ ಗುಣವಾಗುವುದು.

**ಬಾವು ಭಯಂಕರ ರೀತಿಯಲ್ಲಿ ಸೋರಲು ತಯಾರಾಗಿದ್ದರೆ:**

ಜಾದ್ರಿ ಕಾಯಿಯನ್ನು ಅಥವಾ ಹಳೆಯ ಅಡಕೆಯನ್ನು ಮೊಲೆಹಾಲಿನಿಂದ ತೇದು ಬಾವಿನ ಮುಖವನ್ನು ಬಿಟ್ಟು ಸುತ್ತಲೂ ಲೇಪಿಸಿದರೆ ಸಣ್ಣದಾಗಿ ಸೋರಿ ಪೂರ್ಣ ಗುಣವಾಗುವುದು.

**ಕೆಂಬಾವುಗಳಿಗೆ:**

ಗರಿಕೆ ಹುಲ್ಲಿನ ರಸಕ್ಕೆ ಸಮಾಂಶ ನೊರೆಹಾಲು ಸೇರಿಸಿ ಅರ್ಧ ಕುಡ್ತೆ ಪ್ರಕಾರ ಪ್ರತಿದಿನ ಬೆಳಗ್ಗೆ ಸೇವಿಸುವುದು.

ಬಿಳಿ ಗುರುಗುಂಜಿ ಬೇರು, ಬಿಳಿ ಕಿಸ್ಕಾರದ ಬೇರು, ಬಿಳಿ ದಾಸವಾಳದ ಬೇರು, ತೆಂಗಿನ ಎಳೆ ಹಿಂಗಾರ, ಅಡಕೆಯ ಎಳೆ ಹಿಂಗಾರ ಇವುಗಳನ್ನು ಸಮಾಂಶ ಸೇರಿಸಿ ಹಾಲಿನಲ್ಲಿ ಅರೆದು ಸೇವಿಸುವುದು. ಅಥವಾ ಇವುಗಳಿಗೆ ಶ್ರೀಗಂಧ ಮತ್ತು ಚಂದನವನ್ನೂ ಕೂಡಿಸಿ ಅರೆದು ಲೇಪಿಸುವುದು.

ನೆಲನೆಡಿಲಿನ ಗಡ್ಡೆಯನ್ನು ಹಾಲಿನಲ್ಲಿ ತೇದು ಲೇಪಸುವುವರಿಂದ ಬಾವು ಅರಿಹೋಗುವುದು. ಇಲ್ಲವೆ ಸಣ್ಣದಾಗಿ ಸೋರಿ ಹೋಗುವುದು.

**ಮೊಳೆ (ಗಂಟು = ಗ್ರಂಥಿ) ಗಳಿಗೆ:**

ದಾರಳೆಯ ಬೀಜವನ್ನು ದಾರಳೆ ಸೊಪ್ಪಿನ ರಸದಲ್ಲಿ ಅರೆದು ಲೇಪಿಸುವುದು.

ಕಾಸರ್ಕದ ಚಿಗುರು ತಂದು ಸ್ವಚ್ಛಪಡಿಸಿ ಮುಮ್ಮೆರಿಹಾಕಿ ಬೇಯಿಸಿ ಜೀರಿಗೆ ಸೇರಿಸಿ ಅರೆದು ಬೆಣ್ಣೆಯಲ್ಲಿ ಜಾಳಿಸಿ ಅಥವಾ ನೊರೆಹಾಲಿನಲ್ಲಿ ಅರೆದು ಲೇಪಿಸಿದರ ಮೊಳೆ, ಕುರ ಇತ್ಯಾದಿಗಳು ಕರಗಿಹೋಗಿ ಗುಣವಾಗುವುವು.

ಕಹಿಬೇವಿನ ಸೊಪ್ಪು ಮತ್ತು ಅಶ್ವತ್ಥದ ಸೊಪ್ಪು ಸಮಾಂಶ ಸೇರಿಸಿ ನುಣ್ಣಗೆ ಅರೆದು ಪ್ರತಿದಿನ ಲೇಪಿಸುವುದರಿಂದ ಮೊಳೆಗಳು ಬಿದ್ದು ಹೋಗುವುವು.

ತುಂಬೆ ಸೊಪ್ಪನ್ನು ಹರಳೆಣ್ಣೆಯಲ್ಲಿ ಅರೆದು ಲೇಪಿಸಿದರೆ ಗುಣ ವಾಗುವುದು.

ಇಂದುಪ್ಪು ಮತ್ತು ದನದ ತುಪ್ಪ ಸಮಾಂಶ ಸೇರಿಸಿ ಅರೆದು ಒಂದು ತೊಲೆಯಷ್ಟು ಬೆಳಗ್ಗೆ ಸೇವಿಸುವುದು. ಮತ್ತು ಅದನ್ನೇ ಮೊಳೆಗೆ ಲೇಪಿಸು ವುದು. ನಾಲ್ಕು ಮರಗಳ ಕೆತ್ತೆಯ ಕಷಾಯದಲ್ಲಿ ತೊಳೆಯುವುದು. ಇದು ತುರಿಕೆಯಿರುವ ಪಿತ್ತದ ಗಂದೆಗಳಿಗೂ ಉತ್ತಮ ಗುಣಕಾರಿಯಾಗಿದೆ. (ಒಂದು ವಾರ)

**ಕುಪ್ಪಿಚೂರು, ಮುಳ್ಳು ಮೊದಲಾದವುಗಳ ಅವಶೇಷವು ಒಳಗಿದ್ದು ಬೆಳೆದ ಗ್ರಂಥಿಗೆ:**

ಗ್ರಂಥಿಯನ್ನು ಕೊಯಿದು ಅವಶೇಷವನ್ನು ತೆಗೆದು ಗಾಯಕ್ಕೆ ದನದ ತುಪ್ಪ ಯಾ ಗೇರು ಬೀಜದ ಸೊನೆಯನ್ನು ಬಿಸಿಮಾಡಿ ಎರೆದರೆ ಗುಣ ವಾಗುವುದು.

ಕಾರಸ್ಕರ ಕೋಲಿನ ತುದಿಯನ್ನು ಉರಿಸಿ ಆ ಬೆಂಕಿಯಿಂದ ಗಾಯ ವನ್ನು ಸುಟ್ಟು ಕರಟಿಸಿದರೆ ಸುಲಭವಾಗಿ ಗುಣವಾಗುವುದು.

ಉಪ್ಪು ಮತ್ತು ಜೇನು ಮಯಣವನ್ನು ಗಾಯದಲ್ಲಿ ತುಂಬಿಸಿ ಮಯಣ ಕರಗುವಂತೆ ಉರಿಯುವ ಬತ್ತಿಯನ್ನು ಅದರ ಮೇಲಿರಿಸಿ ತೆಗೆಯುವುದು. ಈ ತರದ ಅಗ್ನಿ ಚಿಕಿತ್ಸೆಯಿಂದಲೇ ಈ ಗಾಯವು ಗುಣವಾಗುವುದು.)

**ಕಫ ಗ್ರಂಥಿಗಳಿಗೆ:**

ನೆಲಮುಂಚ್ಚಿರು ಗಿಡದ ಗಡ್ಡೆಯನ್ನು ಪುಟಪಾಕದಿಂದ ಬೇಯಿಸಿ ಸ್ವಲ್ಪ ಉಪ್ಪು ಸೇರಿಸಿ ನುಣ್ಣಗೆ ಅರೆದು ಲೇಪಿಸುವುದು.

**ಎಲುಬಿನಲ್ಲಿ ಬಾವು ಆದರೆ:**

ಬಸಳೆಯ ಸೊಪ್ಪನ್ನು ಹಾಲಿನಲ್ಲಿ ಅರೆದು ಲೇಪಿಸುವುದು.

ಬಾಳೆಹಣ್ಣನ್ನು ಬೆಣ್ಣೆಯೊಂದಿಗೆ ಅರೆದು ಲೇಪಿಸುವುದು.

**ಮಕ್ಕಳ ತೊಡೆಯ ಸಂದು ಬಾತರೆ:**

ಇಲಿಕಿವಿ ಗಿಡ ಮತ್ತು ಈಶ್ವರಬಳ್ಳಿ ಬೇರು ಇವುಗಳನ್ನು ಸಮಾಂಶ ಸೇರಿಸಿ ಹರಳ ಗಿಡದ ಬೇರಿನ ಸಿಪ್ಪೆಯ ರಸದಲ್ಲಿ ಅರೆದು ಲೇಪಿಸುವುದು. (ಐದು ದಿನ )

**ಮಕ್ಕಳ ಕೆಂಪು ಬಾವುಗಳಿಗೆ:**

ಅತ್ತಿ, ಇತ್ತಿ, ಗೋಳಿ, ಅಶ್ವತ್ಥ ಇವುಗಳ ಕೆತ್ತೆ, ಮತ್ತು ಶ್ರೀಗಂಧ ರಕ್ತಚಂದನ ಇವುಗಳನ್ನು ಸಮಾಂಶ ಸೇರಿಸಿ ಅರೆದು ನಾಲ್ಕು ತೊಲೆಯಷ್ಟನ್ನು ಕೆಂದಾಳಿ ಸೀಯಾಳದ ಒಳಗೆ ತುಂಬಿಸಿ ಬಂದು ಮಾಡಿ ಸೀಯಾಳಕ್ಕೆ ಮಣ್ಣು ಮೆತ್ತಿ ಬೂದಿ ಬೆಂಕಿಯಲ್ಲಿ ಹುಗಿದು ಬೇಯುವಾಗ ತೆಗೆದು ಅದರ ನೀರನ್ನು ಸೋಸಿ ಸೇವಿಸುವುದು ಮತ್ತು ಮದ್ದನ್ನು ಲೇಪಿಸುವುದು. ಇದರಿಂದ ಕೆಂಪು ಹುಣ್ಣು ಮತ್ತು ಬಾವುಗಳು ಸಂಪೂರ್ಣವಾಗಿ ಗುಣವಾಗುವುವು.

ನುಗ್ಗೆಯ ಎಲೆಯ ಸ್ವರಸವನ್ನು ಕುಡಿಸುವುದು.

**ಮಕ್ಕಳ ಮೈ ಬಾತರೆ:**

ಹುಣಸೆಯ ಮರದ ಎಲೆಯನ್ನು ಜಜ್ಜಿ ಗೋಮೂತ್ರ ಹಾಕಿ ಕುದಿಸಿ ಮೈ ಸರ್ವಾಂಗ ಲೇಪಿಸುವುದು.

**ಮಕ್ಕಳ ಎಲ್ಲಾ ತರದ ಬಾವು ಹುಣ್ಣುಗಳಿಗೆ:**

ನುಗ್ಗೆ ಮರದ ಬಡಗು ಭಾಗದ ಕೆತ್ತೆಯನ್ನು ನೀರಿನಲ್ಲಿ ತೇದು ಹಚ್ಚುವುದು. ಇದು ಆಬಾಲವೃದ್ಧರ ಎಲ್ಲಾ ವಿಧ ಸಂಜು ಹುಣ್ಣುಗಳಿಗೂ ಸಹ ಗುಣಕಾರಿಯಾಗಿದೆ.



ಧತ್ತೂರಿ ಎಲೆಮತ್ತು ಹೂ

# ಅಜ್ಜಿ ಮದ್ದು ಉಪಯೋಗಿಸುವ ರೀತಿ

'ಅಜ್ಜಿಮದ್ದು' ಪುಸ್ತಕವನ್ನುಪಯೋಗಿಸುವವರು ಆದಿಯಿಂದ ಅಂತ್ಯದ ವರೆಗೆ ಮೊದಲಾಗಿ ಒಮ್ಮೆ ಓದಬೇಕು, ಕೊನೆಯ ಭಾಗದಲ್ಲಿರುವ ಔಷಧ ಕಾರ್ಯಾನುಕೂಲತೆಗಳನ್ನೆಲ್ಲಾ ಮತ್ತೊಮ್ಮೆ ಓದಿ ಮನದಟ್ಟು ಮಾಡಿಕೊಳ್ಳಬೇಕು. ತೂಕ ಅಳತೆಗಳ ಕೋಷ್ಟಕವನ್ನು ಗಮನಿಸಿ, ತಮ್ಮ ಬಳಕೆಯ ಮಾನಗಳೊಂದಿಗೆ ಪರಿವರ್ತಿಸಲು ಅಭ್ಯಾಸ ಮಾಡಬೇಕು. ಮೂಲಿಕಾ ನಾಮಾವಳಿಯನ್ನು ಪುನಃ ಪುನಃ ನೆನಪಿಸಿಕೊಳ್ಳಬೇಕು. ಈಗಾಗಲೇ ತಿಳಿದಿರುವ ಗಿಡಮೂಲಿಕೆಗಳನ್ನು ಯಾವ ರೋಗಕ್ಕಾಗುವುದೆಂದು ಅರಿತುಕೊಳ್ಳಬೇಕು. ತಿಳಿಯದಿರುವವುಗಳ ಇತರ ಹೆಸರುಗಳನ್ನು ನೋಡಿ ಮತ್ತೆ ನೆರೆಯವರಲ್ಲಿ ತಿಳಿದವರಲ್ಲಿ ವಿಚಾರಿಸಿ ಪರಿಚಯಿಸಿಕೊಳ್ಳಬೇಕು. ಇಷ್ಟರ ಮೇಲೂ ಸಂದಿಗ್ಧ ಉಳಿಯುವ ಸಂಭವವಿಲ್ಲದಿಲ್ಲ ಅಲ್ಲದೆ ಎಷ್ಟೋ ಮೂಲಿಕೆಗಳು ಎಲ್ಲ ಕಡೆಗಳಲ್ಲಿ ಎಲ್ಲಾ ಕಾಲದಲ್ಲಿ ದೊರೆಯುವುದಿಲ್ಲ. ಸಿಗುವ ಕಾಲದಲ್ಲಿ ಸಿಗುವ ಎಡೆಗಳಿಂದ ಸಸ್ಯಗಳನ್ನು ಸಂಗ್ರಹಿಸಿಟ್ಟುಕೊಳ್ಳಬಹುದು. ಅಲ್ಲದೆ ಒಂದೇ ರೋಗಕ್ಕೆ ಉಪಯುಕ್ತವಾಗುವ ಹಲವು ಮದ್ದುಗಳನ್ನು ಹೇಳಿರುವುದರಿಂದ ಈ ಪೈಕಿ ಯಾವುದಾದರೊಂದು ಸಕಾಲಕ್ಕೆ ಒದಗಿ ಬಂದೀತು. ಮೂಲಿಕೆ ಮತ್ತು ಪಥ್ಯ ವಿಚಾರದಲ್ಲಿ ನೀಡಿರುವ ಎಚ್ಚರಿಕೆಗಳನ್ನೆಲ್ಲಾ ಗಮನಿಸಿ ಅನುಸರಿಸುವುದೂ ಅಗತ್ಯ.

'ಅಜ್ಜಿಮದ್ದು' ಅವಸರದಲ್ಲಿ ತೆರೆದು ನೋಡಿ ದಿಢೀರನೆ ಚಿಕಿತ್ಸೆ ಮಾಡಿಕೊಳ್ಳುವುದಕ್ಕಲ್ಲ ದಿನನಿತ್ಯ ಓದಿ ಮನದಟ್ಟು ಮಾಡಿಕೊಳ್ಳಬೇಕಾದ ಆಯುರ್ವೇದ-ಪುರಾಣ. ಬಾರಿ ಬಾರಿಗೂ ಓದಿದವರನ್ನು ಹೆಚ್ಚು ಹೆಚ್ಚು 'ಆರೋಗ್ಯಸಾಧಕ'ರನ್ನಾಗಿಸಬಲ್ಲ ಆರೋಗ್ಯದಾನ ಮಂಜರಿ. ಓದಿದವರಿಗೂ ಕೇಳಿದವರಿಗೂ ಆರೋಗ್ಯಭಾಗ್ಯ ನಿಶ್ಚಯ.

# ಅಜ್ಜಿ ಮದ್ದು

## ೨

ಆಯುರ್ವೇದ ಪ್ರಕಾಶನ

ಪಾಣಾಜೆ–575 259 ದ. ಕ.

# ನಮ್ಮ ಪ್ರಕಟನೆಗಳು

ಆರೋಗ್ಯ ಸಾಧನ — ಪ್ರತಿಗಳು ಮುಗಿದಿವೆ.
(ಕಷಾಯ ಯೋಗಗಳು)

ಆರೋಗ್ಯ ಜೀವನ — „ „
(ಕಷಾಯ ಯೋಗ ಮತ್ತು ಗಣಗಳು)

ಮಧು ದೀಪಿಕಾ — „ „
(ಜೇನಿನ ಕುರಿತಾದ ಸಂಶೋಧನಾತ್ಮಕ ಕೃತಿ)

ಆರೋಗ್ಯದಾನ ಕೈಪಿಡಿ — ಅಚ್ಚಿನಲ್ಲಿದೆ

ಗರ್ಭಿಣಿ ಬಾಣಂತಿ ಮತ್ತು
ಬಾಲೋಪಗರಣೀಯ — ಬೆಲೆ ರೂ. 10-00

# ಕಷಾಯ ಮೊದಲಾದ
# ಔಷಧಗಳ ತಯಾರಿಕೆಯ ಕ್ರಮ

ಸೇವನಾ ಕಷಾಯಗಳು ಪ್ರಧಾನವಾಗಿ ಸ್ವರಸ, ಕಲ್ಕ, ಕ್ವಾಥ, ಹಿಮ, ಫಾಂಟ ಎಂದು ಐದು ವಿಧಗಳಾಗಿವೆ. ಇವುಗಳನ್ನು ಪಂಚ ಕಷಾಯಗಳೆಂದು ಹೇಳುವುದು ರೂಢಿಯಾಗಿದೆ. ಇವು ಉತ್ತರೋತ್ತರ ಲಘು ಗುಣವುಳ್ಳವುಗಳು. ಹೇಗೆಂದರೆ ಸ್ವರಸದಿಂದ ಕಲ್ಕ, ಕಲ್ಕದಿಂದ ಕ್ವಾಥ, ಕ್ವಾಥದಿಂದ ಹಿಮ – ಈ ರೀತಿಯಲ್ಲಿ ಮೊದಲಿನದಕ್ಕಿಂತ ಮತ್ತಿನದು ಲಘು ಗುಣವುಳ್ಳದ್ದೆಂದು ತಿಳಿಯಬೇಕು.

ಇವುಗಳಲ್ಲಿ ಸ್ವರಸವು ತನಿರಸ, ನಿಶೋಷಿತರಸ, ಪಕ್ವರಸ, ಪುಟ ಪಾಕರಸ ಎಂದು ನಾಲ್ಕು ವಿಧವಾಗಿದೆ.

i) ತನಿರಸ : ನಿರ್ದಿಷ್ಟವಾದ ಮದ್ದುಗಳು ಹಸಿಯಾಗಿರುವುದನ್ನು ಆಗಾಗ ತಂದು ಶುದ್ಧಿ ಪಡಿಸಿ ನೀರು ಸೇರಿಸದೇ ಜಜ್ಜಿ ಬಟ್ಟೆಯಲ್ಲಿ ಹಾಕಿ ಹಿಂಡಿ ತೆಗೆದ ರಸವು. ಇದನ್ನು ೧ ಔನ್ಸಿನ ವರೆಗೆ ಸೇವಿಸಬಹುದು.

ii) ನಿಶೋಷಿತ ರಸ : ಸ್ವತಃ ರಸವಿಲ್ಲದ ಯಾ ಒಣಗಿದ ಯೋಗೋಕ್ತ ಮದ್ದುಗಳನ್ನು ಸಂಗ್ರಹಿಸಿ ಚೆನ್ನಾಗಿ ಕುಟ್ಟಿ ಪುಡಿಮಾಡಿ ೨ ಪಾಲು ನೀರು ಸೇರಿಸಿ ಒಂದು ಪಾತ್ರೆಯಲ್ಲಿ ಹಾಕಿ ಮುಚ್ಚಿ ೧ ಹಗಲು ೧ ರಾತ್ರಿ (೨೪ ಘಂಟೆ) ಭದ್ರವಾಗಿರಿಸಿ ನಂತರ ಕಿವಿಚಿ, ಅರಿಸಿ (ಸೋಸಿ) ತೆಗೆದ ರಸವು. ಇದನ್ನು ೨ ಔನ್ಸಿನ ವರೆಗೆ ಸೇವಿಸಬಹುದು.

iii) ಪಕ್ವರಸ : ಬೇರು, ತಿರುಳು ಮೊದಲಾದ ಕಠಿಣ ದ್ರವ್ಯ ಗಳನ್ನು ಸಣ್ಣದಾಗಿ ಕತ್ತರಿಸಿ ಜಜ್ಜಿ ಅದರ ೮ ಪಾಲು ನೀರು ಸೇರಿಸಿ ಚೆನ್ನಾಗಿ ಬೇಯಿಸಿ ನೀರು ನಾಲ್ಕರಲ್ಲೊಂದು ಪಾಲು ಉಳಿದಾಗ ಇಳಿಸಿ ಸೋಸಿದ ರಸವು. ಇದನ್ನು ಅರ್ಧ, ಒಂದು ಔನ್ಸಿನ ವರೆಗೆ ಸೇವಿಸ ಬಹುದು.

iv) **ಪುಟಪಾಕರಸ :** (ರಸವನ್ನು ಹಸಿಯಾಗಿ ಸೇವಿಸಬಾರದು ಮತ್ತು ಹಸಿಯಾಗಿದ್ದರೂ ರಸ ಹೊರಡದ ಹಾಗೂ ಪರಸ್ಪರ ಸಂಯೋಗ ಹೊಂದಬೇಕಾಗಿರುವ ಮದ್ದುಗಳನ್ನು ಸ್ವಲ್ಪ ಬೇಯಿಸಿ (ಬಾಡಿಸಿ) ರಸ ತೆಗೆಯುವ ವಿಧಾನ) ಯೋಗೋಕ್ತ ಮದ್ದುಗಳನ್ನು ಹೇಳಿದ ರಸ ದಲ್ಲರೆದು ರಸವು ಸೋರಿ ಹೋಗದ ಹಾಗೆ ನಿಶ್ಚಿತ ಎಲೆಯಲ್ಲಿ ಕಟ್ಟಿ, ಸುತ್ತಿ, ಹುತ್ತದ ಮಣ್ಣನ್ನು ಹೊರಗಿನಿಂದ ಎರಡಂಗುಲ ದಪ್ಪವಾಗಿ ಮೆತ್ತಿ, ಬೆಂಕಿಕೆಂಡದಲ್ಲಿ ಹುಗಿದು ಬೇಯಿಸಿ ಮಣ್ಣು ಬೆಂದು ಕೆಂಪಾದಾಗ ತೆಗೆದು ಜಾಗ್ರತೆಯಿಂದ ಬಿಡಿಸಿ ಮದ್ದಿನ ಮುದ್ದೆಯನ್ನು ತೆಗೆದು ಹಿಂಡಿದ ರಸವು. ಇದನ್ನು ೨ ಔನ್ಸಿನ ವರೆಗೆ ಸೇವಿಸಬಹುದು.

**ಸೂಚನೆ :** ಯೋಗದಲ್ಲಿ ಸುತ್ತಿ ಕಟ್ಟಲು ಎಲೆಯನ್ನು ನಿಶ್ಚಿತ ವಾಗಿ ಹೇಳದಿದ್ದಲ್ಲಿ ಬಾಳೆ, ಗೋಳಿ, ನೇರಳೆ, ದಡ್ಡಾಲ ಇವುಗಳಲ್ಲಿ ಯಾವುದಾದರೂ ಒಂದರ ಎಲೆಗಳನ್ನು ಉಪಯೋಗಿಸಬಹುದು.

(ಈ ಮೇಲಿನ ಸೇವನಾ ಪ್ರಮಾಣಗಳನ್ನು ಸಂದರ್ಭಾನುಸಾರ ಪ್ರಾಯಕ್ಕೆ ತಕ್ಕಂತೆ ಹೆಚ್ಚು ಕಡಿಮೆ ಮಾಡಿಕೊಳ್ಳುವುದು.)

೨. **ಕಲ್ಕ :** ಯೋಗೋಕ್ತವಾದ ಹಸಿ ಯಾ ಒಣಗಿದ ಮದ್ದನ್ನು ನೀರು ಸೇರಿಸಿ ನುಣ್ಣಗೆ ಅರೆದು ಮುದ್ದೆಯಾಗಿ ತೆಗೆಯುವ ಅರಪ್ಪನ್ನು ಕಲ್ಕವೆನ್ನುವರು. ಈ ಕಲ್ಕವನ್ನು ಕರ್ಷ (೧ ತೊಲೆ – ಶಾಂತಿಕಾಯಿಯ ಗಾತ್ರ) ಪ್ರಮಾಣದಷ್ಟು ೪ ತೊಲೆ ದ್ರವ ದ್ರವ್ಯದಲ್ಲಿ ಕದಡಿ ಸೇವನೆ. ಮತ್ತು ಜೇನು, ತುಪ್ಪ, ತೈಲಗಳಾದರೆ ೨ ಪಾಲು, ಸಕ್ಕರೆ ಹಾಗೂ ಬೆಲ್ಲ ವಾದರೆ ಸಮಪಾಲು ಸೇರಿಸಿ ಸೇವಿಸುವುದು.

**ವಿಶೇಷ ಸೂಚನೆ :** ಘೃತ ಮತ್ತು ತೈಲಪಾಕಕ್ಕೆ ಹೇಳಿದ ಕಲ್ಕ ವಿಧಾನವು ಬೇರೆ ರೀತಿಯದು.

೩. **ಕ್ವಾಥ (ಕಷಾಯ) ವಿಧಿ :** ಯೋಗೋಕ್ತ ಔಷಧಗಳನ್ನು ಸ್ವಚ್ಛಪಡಿಸಿ ಸಣ್ಣದಾಗಿ ಕತ್ತರಿಸಿ ಕುಟ್ಟಿ, ದ್ರವ್ಯದ ೧೬ ಪಾಲು ನೀರು ಹಾಕಿ ಮಣ್ಣಿನ ಪಾತ್ರೆಯಲ್ಲಿ ಮುಚ್ಚಳವಿಲ್ಲದೆ ಒಲೆಯ ಮೇಲಿರಿಸಿ

ಮಂದಾಗ್ನಿ (ಸಣ್ಣದಾದ ಬೆಂಕಿಯುರಿ) ಯಿಂದ ಬೇಯಿಸಿ ಬತ್ತಿಸಿ (ಇಂಗಿಸಿ) ಎಂಟರಲ್ಲೊಂದು ಪಾಲು ನೀರು ಉಳಿಸಿ ಸೋಸಿಕೊಂಡದ್ದು ಅಷ್ಟಾವಶೇಷ [ಇದನ್ನು ಅಷ್ಟಮಾಂಶ ಕಷಾಯವೆಂದೂ ಹೇಳುತ್ತಾರೆ.] ಕಷಾಯವೆನಿಸುವುದು.

ದ್ರವ್ಯದ ೮ ಪಾಲು ನೀರು ಸೇರಿಸಿ ಬತ್ತಿಸಿ ನಾಲ್ಕರಲ್ಲೊಂದು ಪಾಲು ಉಳಿಸಿಕೊಂಡದ್ದು ಪಾದಾವಶೇಷ ಕಷಾಯವೆನಿಸುವುದು. ದ್ರವ್ಯದ ನಾಲ್ಕು ಪಾಲು ನೀರು ಹಾಕಿ ಬತ್ತಿಸಿ ಎರಡರಲ್ಲೊಂದು ಪಾಲು ಉಳಿಸಿಕೊಂಡಿದ್ದು ಅರ್ಧಾವಶೇಷ ಕಷಾಯವೆನಿಸುವುದು.

**ಸೂಚನೆ :** ನಾರು, ಬೇರು ಇತ್ಯಾದಿ ನಿಧಾನವಾಗಿ ಬೇಯುವ ಔಷಧಗಳಿಗೆ ಮಧ್ಯಮ ದ್ರವ್ಯಗಳೆಂದು ಹೆಸರು. ಈ ದ್ರವ್ಯಗಳು ಸಾಕಷ್ಟು ಬೆಂದು ಸತ್ವ ಹೊರಡುವುದಕ್ಕಾಗಿ ಇವುಗಳನ್ನು ಅಷ್ಟಾವಶೇಷ ವಾ ಪಾದಾವಶೇಷ ಕಷಾಯ ಮಾಡುವುದು.

ಹೂ, ಎಲೆ ಇತ್ಯಾದಿ ಸುಲಭದಲ್ಲಿ ಬೆಂದು ಸಾರಬಿಡುವವುಗಳು ಮೃದು ದ್ರವ್ಯಗಳೆನಿಸುವವು. ಇವುಗಳನ್ನು ಹೆಚ್ಚು ಸಮಯ ಬೇಯಿಸಿದರೆ ಆವಿಯಾಗಿ ಹೋಗಿ ಸತ್ವವು ಕಡಿಮೆಯಾಗುವುದು. ಆದ್ದರಿಂದ ಪಾದಾವಶೇಷ ವಾ ಅರ್ಧಾವಶೇಷ ಕಷಾಯ ಮಾಡಬೇಕು.

ತಿರುಳು ಮೊದಲಾದವು ಕಠಿಣ ದ್ರವ್ಯಗಳು; ಇವು ಸರಿಯಾಗಿ ಬೆಂದು ಸತ್ವ ಬಿಡುವುದಕ್ಕಾಗಿ ದ್ರವ್ಯದ ೧೬ ಪಾಲು ನೀರು ಸೇರಿಸಿ ಅಷ್ಟಾವಶೇಷ ಕಷಾಯ ಮಾಡಿಕೊಳ್ಳಬೇಕು.

೪. **ಹಿಮ (ಶೀತ) ಕಷಾಯ :** ಯೋಗೋಕ್ತ ಮದ್ದನ್ನು ಕುಟ್ಟಿ ಪುಡಿಮಾಡಿ ೬ ಪಾಲು ಬಿಸಿನೀರು ಹಾಕಿ ರಾತ್ರಿ ಭದ್ರವಾಗಿರಿಸಿ ಬೆಳಗ್ಗೆ ಕಿವಿಚಿ ಸೋಸಿ ತಯಾರಿಸಿದುದು. ಇದನ್ನು ಹೊತ್ತಿಗೆ ೨ ಔನ್ಸಿನ ಪ್ರಮಾಣ ಸೇವಿಸಬಹುದು.

೫. **ಫಾಂಟ ಕಷಾಯ :** ಯೋಗೋಕ್ತ ಮದ್ದನ್ನು ಕುಟ್ಟಿ ಚೂರ್ಣಮಾಡಿ ಮಣ್ಣಿನ ಪಾತ್ರೆಯಲ್ಲಿ ಹಾಕಿ ನಾಲ್ಕು ಪಾಲು ಕುದಿಯುತ್ತಿರುವ ನೀರನ್ನು ಸೇರಿಸಿ ಭದ್ರವಾಗಿ ಮುಚ್ಚಿಟ್ಟು ಸ್ವಲ್ಪ ಹೊತ್ತು

(೧ ಮುಹೂರ್ತ ಕಾಲ)ಕಳೆದ ನಂತರ ಸೋಸಿ ತಯಾರಿಸಿದುದು. ಇದನ್ನು ೪ ಔನ್ಸಿನ ಪ್ರಕಾರ ಸೇವಿಸುವುದು. ಇದಕ್ಕೆ ಜೇನು, ಸಕ್ಕರೆ, ಬೆಲ್ಲ ಮೊದಲಾದುವನ್ನು ಸೇರಿಸುವುದಿದ್ದರೆ ¼ಕರ್ಷ ಪ್ರಮಾಣ ಸೇರಿಸುವುದು.

[ಹೀಗೆ ಪಂಚ ಕಷಾಯಗಳ ರಚನಾಕ್ರಮವು ಶಾಸ್ತ್ರದಲ್ಲಿ ಹೇಳಲ್ಪಟ್ಟಿದೆ.]

೬. **ಮೇಲ್ಪುಡಿ :** (ಪ್ರತಿಪಾಕ) ಸಕ್ಕರೆ, ತುಪ್ಪ, ಜೇನು, ಬೆಲ್ಲ, ಎಣ್ಣೆ, ಉಪ್ಪು ಇವುಗಳಲ್ಲಿ ಯಾವುದಾದರೂ ಮೇಲ್ಪುಡಿ ಹಾಕಲು ಹೇಳಿರುವಲ್ಲಿ ಅರ್ಧ ತೊಲೆ ಸೇರಿಸುವುದು. ಹಿಂಗು ಇತ್ಯಾದಿ ತೀಕ್ಷ್ಣ ದ್ರವ್ಯಗಳಾದರೆ ಗುಂಜಾ ಪ್ರಮಾಣದಷ್ಟು ಸೇರಿಸುವುದು. ಸಿದ್ಧೌಷಧಗಳನ್ನು ಯೋಗದಲ್ಲಿ ಹೇಳಿರುವಂತೆ ಸೇರಿಸಿ ಉಪಯೋಗಿಸುವುದು.

೭. **ಅಂತರ್ಧೂಮ ಭಸ್ಮ ಮಾಡುವ ಕ್ರಮ :** ಬೇಕಾದ ಮದ್ದನ್ನು ಸಣ್ಣದಾಗಿ ಕತ್ತರಿಸಿ ಮಣ್ಣಿನ ಪಾತ್ರೆ ಒಂದರಲ್ಲಿ ತುಂಬಿಸಿ ಬಾಯಿ ಅಗಲವಾದ ಒಂದು ಪಾತ್ರೆಯನ್ನು ಅದರ ಮೇಲೆ ಮಗುಚಿ ಇರಿಸಿ ಈ ಮುಚ್ಚಳದ ಎಡೆಯಲ್ಲಿ ಆವಿ ಹೋಗದಂತೆ ಹುತ್ತದ ಮಣ್ಣನ್ನು ಕಲಸಿ ಚೊಕ್ಕವಾಗಿ ಮೆತ್ತುವುದು. ಅನಂತರ ಇದನ್ನು ಒಲೆಯ ಮೇಲಿಟ್ಟು ಬೆಂಕಿ ಉರಿಸಿ ಮೇಲಿನ ಪಾತ್ರೆಯಲ್ಲಿಯೂ ಕೆಂಡ ಹಾಕುವುದು. ಹೀಗೆ ಅಡಿಯಲ್ಲಿಯೂ ಮೇಲಿನಲ್ಲಿಯೂ ಉರಿಸಿದ ಬೆಂಕಿಯಿಂದ ಇಡೀ ಪಾತ್ರವೇ ಕಾದು ಕೆಂಪಾಗುವ ವರೆಗೆ ಉರಿಸಿ ಬಿಡುವುದು. ಮಾರನೆಯ ದಿನ ಅದು ತಣಿದು ಚೆನ್ನಾಗಿ ಶೀತವಾದ ಮೇಲೆ ತೆಗೆದಾಗ ಮದ್ದು ಶುದ್ಧವಾದ ಭಸ್ಮವಾಗಿರುವುದು. ಇದನ್ನು ಸ್ವಚ್ಛವಾದ ಬಿಳಿ ಬಟ್ಟೆಯಿಂದ ಗಾಳಿಸಿಕೊಳ್ಳುವುದು. ಇದುವೇ ಅಂತರ್ಧೂಮ ಭಸ್ಮವೆನ್ನಲ್ಪಡುವುದು.

೮. **ಕ್ಷಾರ ವಿಧಾನ :** ಮದ್ದನ್ನು ಬೇಕಾದ ಹಾಗೆ ಹೊತ್ತಿಸಿ ಬೂದಿ ಮಾಡಿ ಒಂದು ಪಾತ್ರದಲ್ಲಿ ನೀರೆರೆದು ಕದಡಿ ಒಂದು ರಾತ್ರೆ ಇರಿಸಿ ಬೆಳಿಗ್ಗೆ ಮೇಲಿನ ಹನಿ ನೀರನ್ನು ಬೇರೊಂದು ಪಾತ್ರದಲ್ಲಿ ಹಾಕಿ ಒಲೆಯ ಮೇಲಿಟ್ಟು ಬತ್ತಿಸುವುದು. ಸಂಪೂರ್ಣ ಬತ್ತುವಾಗ ಪಾತ್ರದಡಿಯಲ್ಲಿ ಬಿಳಿಯಾಗಿ ನಿಂತಿರುವ ಪದಾರ್ಥವೇ ಸರಿಯಾದ ಕ್ಷಾರವು.

೯. ಸತ್ವ : ಬೇಕಾದ ಮದ್ದನ್ನು ಸ್ವಚ್ಛಪಡಿಸಿ ನುಣ್ಣಗೆ ಅರೆದು ಧಾರಾಳ ನೀರು ಸೇರಿಸಿ ಕದಡಿ ದೊಡ್ಡ ಪಾತ್ರೆಯೊಂದರಲ್ಲಿ ಬಟ್ಟೆ ಕಟ್ಟಿ ಸೋಸುವುದು. ಎರಡು ಜಾವದ ಮೇಲೆ ಮೇಲಿನ ತಿಳಿನೀರನ್ನು ನಿಧಾನವಾಗಿ ಚೆಲ್ಲಿದರೆ ಪಾತ್ರದಡಿಯಲ್ಲಿ ದಪ್ಪವಾಗಿ ನಿಂತಿರುವುದೇ ಸತ್ವವು. ಇದನ್ನು ಒಣಗಿಸಿ ಬೇಕಾದಲ್ಲಿ ಉಪಯೋಗಿಸುವುದು. (ಇದೇ ಕ್ರಮದಲ್ಲಿ ಹಲವು ಗಡ್ಡೆಗಳ ಹಿಟ್ಟನ್ನು ತಯಾರಿಸುವ ಪದ್ಧತಿಯು ರೂಢಿಯಲ್ಲಿದೆ.)

ಕೆಲವರು ಮೇಲಿನ ಕ್ರಮದಂತೆ ನಾಲ್ಕಾರು ಸಲ ಸೋಸಿ ಸತ್ವವನ್ನು ತಯಾರಿಸುತ್ತಾರೆ. ಆದರೆ ಅದರಿಂದ ಔಷಧದ ಗುಣವು ಕಡಿಮೆಯಾಗುವ ಸಂಭವ ಇರುವುದರಿಂದ ಮೊದಲಿನ ಕ್ರಮವೇ ಯುಕ್ತವಾಗಿದೆ.

೧೦. ಅರ್ಕ : ಬೇಕಾದ ಮದ್ದನ್ನು ಒಂದು ಪಾತ್ರೆಯಲ್ಲಿ ಹಾಕಿ ಮದ್ದು ಮುಳುಗುವಷ್ಟು ನೀರೆರೆದು ಆ ಪಾತ್ರದೊಳಗೆ ಮಧ್ಯದಲ್ಲಿ ಚಪ್ಪಟೆಯಾದ ಮತ್ತು ನಿರ್ಮಲವಾದ ಒಂದು ಕಲ್ಲನ್ನು ಇರಿಸಿ ಅದರ ಮೇಲೆ ಬಾಯಿ ಅಗಲವಾದ ಒಂದು ಗಿಣ್ಣ (ದೊನ್ನೆ) ವನ್ನು ಮೇಲ್ಮುಖವಾಗಿರಿಸುವುದು. ಅನಂತರ ಆ ದೊಡ್ಡ ಪಾತ್ರೆಯನ್ನು ಬೇರೊಂದು ಪಾತ್ರೆಯಿಂದ ಭದ್ರವಾಗಿ ಮಗುಚಿ (ಮುಚ್ಚಿ) ಸಂದಿನಲ್ಲಿ ಆವಿ ಹೊರಡದಂತೆ ಒದ್ದೆ ಮಣ್ಣನ್ನು ಮೆತ್ತಿ ಆ ಮುಚ್ಚಳದ ಪಾತ್ರೆಯಲ್ಲಿ ತುಂಬ ನೀರು ಹಾಕಿ ಮುಚ್ಚಳ ಸಹಿತ ಮೊದಲಿನ ಪಾತ್ರವನ್ನು ಬರೇ ಕೆಂಡಗಳಿರುವ ಯಾ ಬಹಳ ಸಣ್ಣದಾಗಿ ಉರಿಯುವ ಬೆಂಕಿಯಿರುವ ಒಲೆಯ ಮೇಲೆ ಇರಿಸುವುದು. ಅನಂತರ ಮೇಲಿನ ಪಾತ್ರೆಯ ನೀರು ಬಿಸಿಯಾದಾಗ ಆ ನೀರನ್ನು ಬೇರೊಂದು ಸಣ್ಣ ಪಾತ್ರದ ಸಹಾಯದಿಂದ ತೆಗೆದು ಪುನಃ ಆ ಪಾತ್ರೆಗೆ ತಣ್ಣೀರೆರೆಯುವುದು. ಹೀಗೇ ಆರೇಳು ಸಲ ಮುಚ್ಚಳದ ನೀರು ಬಿಸಿಯಾದಾಗ ತೆಗೆದು ತಣ್ಣೀರು ಹಾಕಿ ಆ ಮೇಲೆ ಮುಚ್ಚಳ ತೆಗೆದು ನೋಡಿದರೆ ಗಿಣ್ಣದಲ್ಲಿ ಅರ್ಕವು ತುಂಬಿಕೊಂಡಿರುವುದು. (ಮುಚ್ಚಳ ತೆಗೆಯಬೇಕಾದರೆ ಪಾತ್ರವು ಚೆನ್ನಾಗಿ ತಣಿದಿರಬೇಕು.) ಬಟ್ಟೆ ಕಟ್ಟುವುದು ಎನ್ನುವ ಕ್ರಮವೂ ಇದೇ. ಪಾತ್ರದೊಳಗೆ ಕಲ್ಲಿಡುವ ಬದಲಿಗೆ ಆ ಪಾತ್ರದ ಬಾಯಿಗೇ ಸಡಿಲವಾಗಿ ಬಟ್ಟೆಯನ್ನು

ಮುಚ್ಚಿ ಕಟ್ಟಿ ಆ ಬಟ್ಟೆಯಲ್ಲಿ ಗಿಣ್ಣವನ್ನಿಡುವ ಕ್ರಮವೂ ಇದೆ. ಆದರೆ ಪುಷ್ಪ ಮೊದಲಾದುವುಗಳಾದರೆ ಅವುಗಳ ಪರಿಮಳವನ್ನು ಆ ಬಟ್ಟೆಯೇ ಹೀರಿಬಿಡುವುದರಿಂದ ಮೊದಲನೆಯ ಕ್ರಮವೇ ಶ್ರೇಷ್ಠವಾಗಿದೆ.

೧೧. **ಲೇಪ ವಿಧಾನ :** ಯೋಗದಲ್ಲಿ ಹೇಳಿದಂತೆ ಔಷಧವನ್ನು ಕ್ರಮಪ್ರಕಾರ ಅರೆದು ವ್ಯಾಧಿಯಿರುವ ಭಾಗಕ್ಕೆ ದಪ್ಪವಾಗಿ ಮೆತ್ತುವುದು. ಆ ಮೆತ್ತಿದ ಲೇಪವನ್ನು ಒಣಗಲು ಬಿಡಬಾರದು. ಒಣಗಿದರೆ ಹೀರಿದ ದೋಷವನ್ನು ಅದು ಪುನಃ ಬಿಡುವುದು. ಆದ್ದರಿಂದ ಒಣಗುತ್ತಿದ್ದ ಹಾಗೇ ಪುನಃ ಪುನಃ ಲೇಪಿಸುತ್ತಾ ಇರಬೇಕು. ಇದಕ್ಕೆ ಆರಾರಲೇಪ. (ಎಂದರೆ ಆರಿದಂತೆ ಪುನಃ ಪುನಃ ಲೇಪ) ಎಂದು ಹೇಳುವರು. ನಿಶ್ಚಿತ ಸಮಯದಲ್ಲಿ ಔಷಧ ಒಣಗಿದ ಕೂಡಲೇ ಲೇಪವನ್ನು ತೆಗೆಯಬೇಕು. ಅನಿವಾರ್ಯವಾದ ಕಾರಣ ಹೊರತು ರಾತ್ರಿಯಲ್ಲಿ ಲೇಪವನ್ನು ಮಾಡಬಾರದು. (ಎಂದರೆ ಬಾವುಗಳಾದರೆ ಆರುವ ಅಥವಾ ಸೋರುವ ವರೆಗೂ ರಾತ್ರಿ ಹಗಲೆನ್ನದೆ ಸದಾ ಲೇಪ ಇರಬೇಕು.)

೧೨. **ಧಾರೆಯೆರೆಯುವ ಕ್ರಮ :** ಯೋಗದಲ್ಲಿ ಹೇಳಿದ ತೈಲವನ್ನು ಅಥವಾ ಸ್ವರಸವನ್ನು ವ್ಯಾಧಿಯಿದ್ದ ಭಾಗಕ್ಕೆ ಅಭಿಷೇಕ ಮಾಡುವುದಕ್ಕೆ ಧಾರೆ ಹಿಡಿಯುವುದೆನ್ನುವರು. ಒಂದು ಪಾತ್ರೆಯಲ್ಲಿ ಧಾರೆಯ ದ್ರವವನ್ನಿರಿಸಿ ಅದಕ್ಕೆ ಸರಿಯಾಗುವಂತೆ ವ್ಯಾಧಿಯ ಅಂಗವನ್ನು ಹಿಡಿದು ಔಷಧವನ್ನೆರೆಯುತ್ತಿರುವುದು.

೧೩. **ಮದ್ದಿನ ಗಂಜಿ :** ೪ ತೊಲೆ ಮದ್ದನ್ನು ಸ್ವಚ್ಛಪಡಿಸಿ ಜಜ್ಜಿ, ಬಟ್ಟೆಯೊಂದರಲ್ಲಿ ಮದ್ದು ಮಾತ್ರ ಹೊರಡದ ರೀತಿಯಲ್ಲಿ ಸಡಿಲವಾಗಿಯೇ ಕಟ್ಟಿ (ಮದ್ದು ಬೆಂದು ಉಬ್ಬಿದಾಗ ಬಟ್ಟೆ ಬಿರಿಯದಂತೆ) ಅದರ ೧೬ ಪಾಲು ನೀರನ್ನೂ, ೨ ಪಾಲು ನುಚ್ಚಕ್ಕಿಯನ್ನೂ (ಬೆಳ್ತಿಗೆಯ ಕಡಿಯಕ್ಕಿ) ಆ ಮದ್ದಿನ ಕಟ್ಟವನ್ನೂ ಹಾಕಿ ಒಟ್ಟಿಗೆ ಬೇಯಿಸುವುದು. ಬೆಂದು ನೀರು ಬತ್ತಿ ಒಂದಾಗುವಾಗ (ಸಮರಸವಾದಾಗ) ಇಳಿಸಿ, ಮದ್ದಿನ ಕಟ್ಟನ್ನು ತೆಗೆದು ಬೇರೆ ಇರಿಸಿ ಆ ಗಂಜಿಯನ್ನು ಹದವಾಗಿ ಬಿಸಿಯಿರುವಾಗಲೇ ಉಣ್ಣುವುದು. ಇದು ಲಘು ಮತ್ತು ವಿಶೇಷವಾಗಿ ಗುಣಕಾರಿಯಾಗಿದೆ.

೧೪. ಚೂರ್ಣ : ಯೋಗದಲ್ಲಿ ಹೇಳಿದ ಮದ್ದನ್ನು ನೆರಳಿನಲ್ಲಿ ಒಣಗಿಸಿ ಕುಟ್ಟಿ ಪುಡಿಮಾಡಿ ವಸ್ತ್ರದಿಂದ ಗಾಳಿಸಿಕೊಂಡ ಹುಡಿಯು ವಸ್ತ್ರಗಾಳಿತ ಚೂರ್ಣವೆನಿಸುವುದು. ಇದು ಸೇವನೆಗೆ ಅತ್ಯಂತ ಹಿತ ವಾಗಿದೆ.

೧೫. ಔಷಧ ಭಾವನೆ : ಒಂದು ಮದ್ದನ್ನು ಇನ್ನೊಂದು ರಸ ದಿಂದ ತುಂಬಿಸುವುದೇ ಭಾವನೆ. ಮದ್ದನ್ನು ಚೂರ್ಣ ಮಾಡಿ ಪಾತ್ರ ದಲ್ಲಿ ಹಾಕಿ ಹೇಳಿದ ರಸವನ್ನು ಮದ್ದು ಮುಳುಗುವಷ್ಟು ಸೇರಿಸಿ ಇರಿಸಿ ದರೆ ಈ ರಸವನ್ನು ಮದ್ದು ಹೀರುವುದು. ಇದೇ 'ಭಾವನೆ'. ಹೀಗೆ ಹೇಳಿದಷ್ಟು ಸಾರಿ ಭಾವನೆ ಕೊಟ್ಟು ನೆರಳಿನಲ್ಲಿ ಒಣಗಿಸಿಕೊಂಡರೆ ಸೇವನೆಗೆ ಸಿದ್ಧವಾದಂತಾಗುವುದು.

೧೬. ಸೂರ್ಯ ಪುಟ : ಮೇಲಿನಂತೆ ರಸದಲ್ಲಿ ನೆನೆಸಿರುವ ಮದ್ದನ್ನು ಬೆಳಿಗ್ಗೆ ಬಿಸಿಲಿನಲ್ಲಿರಿಸಿ ಸಾಯಂಕಾಲ ತೆಗೆಯುವುದು. ಇದೂ ಒಂದು ವಿಧವಾದ ಭಾವನೆ.

೧೭. ರಸಭಾವನೆ : ಒಂದು ಮದ್ದಿಗೆ ಇನ್ನೊಂದರ ರಸ ಸೇರಿಸಿ ಆರುವ ವರೆಗೆ ಕಲ್ಲಿನಲ್ಲಿ ಅರೆಯುವುದು ಒಂದು ಭಾವನೆ. ಇದಕ್ಕೆ ರಸ ಭಾವನೆ ಎನ್ನುವರು.

೧೮. ಒಡು ಕಷಾಯ : ಯೋಗೋಕ್ತ ಔಷಧಿಯನ್ನು ಚೆನ್ನಾಗಿ ಜಜ್ಜಿ ಮಣ್ಣಿನ ಪಾತ್ರೆಯಲ್ಲಿ ಹಾಕಿ ಸಣ್ಣ ಬೆಂಕಿ ಉರಿಸಿ ಹುರಿದು, ಕೆಂಪು ಕಪ್ಪು ಬಣ್ಣವಾದಾಗ ೨ ಕುಡ್ತೆ ನೀರು ಹಾಕಿ ಬತ್ತಿಸಿ ೧ ಕುಡ್ತೆಗೆ ಇಳಿಸಿ ಸೋಸಿಕೊಳ್ಳುವುದು ಒಡು ಕಷಾಯವು. (ಇದು ಫಾಂಟ ಕಷಾಯದ ಒಂದು ಭೇದ.)

೧೯. ಹಾಲು ಕಷಾಯ : ಕಷಾಯ ದ್ರವ್ಯದ ೮ ಪಾಲು ಹಾಲು, ಹಾಲಿನ ನಾಲ್ಕು ಪಾಲು ನೀರು ಸೇರಿಸಿ ಹಾಲು ಮಾತ್ರ ಉಳಿ ಯುವಂತೆ, ಕೆನೆಕಟ್ಟದಂತೆ ಸೌಟಿನಿಂದ ತೊಳೆಸುತ್ತಿದ್ದು ಕಾಯಿಸಿ ಬತ್ತಿಸಿ ಇಳಿಸಿ ಸೋಸಿ ಮೇಲ್ಪುಡಿ ಹಾಕಿಕೊಳ್ಳುವುದು. ಉದಾ : ೨ ತೊಲೆ ಮದ್ದು ಜಜ್ಜಿ ೪ ಕುಡ್ತೆ ನೀರು ಹಾಕಿ ಕಷಾಯವಿರಿಸಿ ಬತ್ತಿಸಿ

೨ ಕುಡ್ತೆ ಆದಾಗ ೧ ಕುಡ್ತೆ ಹಾಲು ಹಾಕಿ ಕಾಯಿಸಿ ಬತ್ತಿಸಿ ಹಾಲು ಮಾತ್ರ ಉಳಿಸಿ, ಇಳಿಸಿ, ಸೋಸಿ ತಯಾರಿಸಿದುದು ಹಾಲು ಕಷಾಯ.

೨೦. ಬಾಯಿ ಮುಕ್ಕುಳಿಸುವುದು : ಹೇಳಿದ ದ್ರವ ದ್ರವ್ಯವನ್ನು ಬಾಯಿಯಲ್ಲಿ ತುಂಬಿಸಿ ಮುಕುಳದಂತೆ ಬಾಯಿ ಮುಚ್ಚಿ ಒಳಗಿರುವ ದ್ರವವನ್ನು ಅತ್ತಿತ್ತ ತಿರುಗಿಸುತ್ತ ದ್ರವವೆಲ್ಲ ಕಫವಾಗಿ ಮಾರ್ಪಾಟಾಗುವ ವರೆಗೆ ಬಾಯಲ್ಲಿರಿಸಿ ಉಗುಳುವುದು. ಇದಕ್ಕೆ ಮುಕ್ಕುಳಿಸುವುದು ಎನ್ನುತ್ತಾರೆ.

೨೧. ಕವಳಿಸುವುದು : ಮುದ್ದೆಯಾದ ವಸ್ತುವನ್ನು ಕವಳದಂತೆ ಬಾಯಿಯಲ್ಲಿರಿಸಿ ದ್ರವವು ಒಸರಿದಂತೆ ಸ್ವಲ್ಪ ಹೊತ್ತು ನಾಲಗೆಯಿಂದ ತಿರುಗಿಸುತ್ತ ಲೊಚಲೊಚನೆ ಅಲುಗಿಸಿ ಉಗುಳುವುದಕ್ಕೆ ಕವಳಿಸುವುದು ಎನ್ನುತ್ತಾರೆ.

೨೨. ಗಂಡೂಷ ವಿಧಾನ : ಕುತ್ತಿಗೆಯಿಂದ ಮೇಲಿನ ಭಾಗಕ್ಕೆ ಊರ್ಧ್ವಾಂಗವೆಂದು ಹೆಸರು. ಈ ಊರ್ಧ್ವಾಂಗ ರೋಗದಲ್ಲಿ ಕೆಲವು ಔಷಧಗಳ ಗಂಡೂಷವನ್ನು ಹೇಳಿರುವರು. ಈ ಗಂಡೂಷವು ಸ್ನೇಹನ, ಶಮನ, ಶೋಧನ, ರೋಪಣವೆಂದು ೪ ವಿಧವಾಗಿದೆ.

೨೩. ಸ್ನೇಹನ : (ತೈಲಾದಿಗಳಿಂದ ಪಸೆ ಬರಿಸುವಿಕೆ) ವಾತ ಪ್ರಕೋಪದಿಂದ ಉಂಟಾದ ದಂತಶೂಲ, ಕರ್ಣಶೂಲ, ಶಿರಃಶೂಲಾದಿಗಳಿಗೆ ಯೋಗೋಕ್ತ ವಿಧಾನದಿಂದ ತಯಾರಿಸಲ್ಪಟ್ಟ ತೈಲಾದಿಗಳಿಂದ ಮಾಡುವ ಗಂಡೂಷವು ಸ್ನೇಹ ಗಂಡೂಷವೆನಿಸುವುದು.

೨೪. ಶಮನ : (ಶಾಂತ ಪಡಿಸುವುದು) ಪಿತ್ತ ಪ್ರಕೋಪದಿಂದ ಉಂಟಾದ ಊರ್ಧ್ವಜತ್ರು ವಿಕಾರಗಳಿಗೆ ಮಧುರ ರಸಗಳು ಹಾಗೂ ಶೀತ ವೀರ್ಯಗಳಾಗಿಯೂ ಇರುವ ರಸಕಷಾಯ ದ್ರವ್ಯಗಳಿಂದ ಮಾಡುವ ಗಂಡೂಷವು ಶಮನ ಗಂಡೂಷವೆನಿಸುವುದು.

೨೫. ಶೋಧನ : (ಶುದ್ಧೀಕರಿಸುವುದು) ಕಫ ಪ್ರಕೋಪದಿಂದ ಉಂಟಾದ ಊರ್ಧ್ವಾಂಗ ರೋಗಗಳಿಗೆ ಬಿಸಿಯಾಗಿಯೂ, ಉಪ್ಪು, ಹುಳಿ,

ಕಾರ ಈ ರಸಗಳೂ ಇರುವ ದ್ರವ್ಯಗಳಿಂದ ಮಾಡುವ ಗಂಡೂಷವು ಶೋಧನಗಂಡೂಷವೆನಿಸುವುದು.

೨೬. ರೋಪಣ : (ವ್ರಣಾದಿಗಳನ್ನು ಶುದ್ಧಪಡಿಸಿ ಮಾಯಿಸುವುದು) ಬಾಯಿಯಲ್ಲಿರುವ ವ್ರಣಗಳನ್ನು ಆರುವ ಸ್ಥಿತಿಗೆ ತಂದು ಗುಣಪಡಿಸಲು ಒಗರು, ಕಹಿ, ಸಿಹಿ, ಈ ರಸಗಳಿರುವ ಮತ್ತು ಸ್ವಲ್ಪ ಬಿಸಿಯಾಗಿರುವ ದ್ರವ್ಯದಿಂದ ಮಾಡುವ ಗಂಡೂಷವು ರೋಪಣ ಗಂಡೂಷವೆನಿಸುವುದು.

ಹೀಗೆ ೪ ವಿಧ ಗಂಡೂಷ ಮತ್ತು ಕವಳಗಳು ಹೇಳಲ್ಪಟ್ಟಿವೆ. ಗಂಡೂಷ, ಕವಳಗಳಿಗಿರುವ ಪರಸ್ಪರ ಭೇದವೇನೆಂದರೆ - ಔಷಧಯುಕ್ತವಾದ ದ್ರವ ದ್ರವ್ಯವನ್ನು ನಿಶ್ಚಿತ ಸಮಯದ ವರೆಗೆ ಅಲ್ಲಾಡಿಸದೆ ಬಾಯಿಯಲ್ಲಿ ಇರಿಸಿಕೊಂಡಿದ್ದು ನಂತರ ಉಗುಳುವುದೇ ಗಂಡೂಷ. ಬಾಯಿಯಲ್ಲಿರಿಸಿದ ದ್ರವ್ಯವನ್ನು ಪದೇ ಪದೇ ಅಲ್ಲಾಡಿಸುತ್ತಿದ್ದು ನಿಶ್ಚಿತ ಕಾಲದಲ್ಲಿ ಉಗುಳುವುದು ಕವಳವೆನ್ನಿಸುವುದು.

೨೭. ಔಷಧವನ್ನು ಸೇವಿಸಬೇಕಾದ ಸಮಯ : ದಿನದಲ್ಲಿ ೨ ಹೊತ್ತು ಸೇವನೆ ಎಂದರೆ ಬೆಳಿಗ್ಗೆ ಮುಖ ತೊಳೆದೊಡನೆ, ರಾತ್ರೆ ಊಟದ ನಂತರ ನಿದ್ದೆ ಮಾಡುವುದರ ೧ ಘಂಟೆ ಮೊದಲು ಮದ್ದನ್ನು ಸೇವಿಸುವುದು. ಇದು ಉತ್ತಮವಾದ ಕ್ರಮ. ಇನ್ನು ಸಂದರ್ಭಾನುಸಾರ ೪ ಸಾರಿಯಾಗಿ ಅಥವಾ ನಿತ್ರಾಣವಿದ್ದವರಿಗೆ ೬ ಸಾರಿಯಾಗಿಯೂ ಮದ್ದನ್ನು ಕೊಡಬಹುದು. ಸಾಮಾನ್ಯ ಆಹಾರ ಸೇವಿಸಿದ ಕೂಡಲೇ ಮದ್ದನ್ನೂ ಮದ್ದು ಸೇವಿಸಿದ ಕೂಡಲೇ ಆಹಾರವನ್ನೂ ಸೇವಿಸಬಾರದು. ಒಮ್ಮೆ ಸೇವಿಸಿದ ದ್ರವ್ಯವು ಜೀರ್ಣವಾಗಿ ಪಾಕವಾದ ಮೇಲೆಯೇ ಅವಶ್ಯವಿದ್ದಲ್ಲಿ ಬೇರೆ ಯಾವುದನ್ನಾದರೂ ಉಪಯೋಗಿಸಬಹುದಲ್ಲದೆ ಮೊದಲು ಉಪಯೋಗಿಸಬಾರದು. ವಾಂತಿಯಾಗುವವರಿಗೂ ಶ್ವಾಸರೋಗಿಗಳಿಗೂ ಒಮ್ಮೆಲೇ ಕಷಾಯವನ್ನು ಕೊಡಬಾರದು. ಆಗಾಗ ಒಂದೊಂದೇ ಚಮಚದಂತೆ ಸಮಯ ಬಿಟ್ಟು ಬಿಟ್ಟು ಪದೇ ಪದೇ ಕೊಡುತ್ತಿರುವ ಕ್ರಮಕ್ಕೆ 'ಮಾತ್ರಾ ಕಷಾಯ'ವೆಂದು ಹೆಸರು. ಇದನ್ನು ಅಹೋರಾತ್ರಿ ಬಿಡದೆ ಕೊಡುತ್ತಿರಬೇಕು.

೨೮. ಔಷಧದ ಪ್ರಮಾಣ : ಒಬ್ಬ ಯುವಕನಿಗೆ ೧ ದಿನ ಸೇವಿಸ ಬೇಕಾದ ಮದ್ದು ೧ ಯೋಗದಲ್ಲಿ ಹೇಳಲ್ಪಟ್ಟಿದೆ. ಅದನ್ನೇ ಬಾಲಕರಿಗಾದರೆ ಕಾಲುಯೋಗ; ಹುಡುಗರಿಗಾದರೆ ಅರ್ಧಯೋಗ ಮಾಡಿಕೊಳ್ಳಬೇಕು. ಇನ್ನು ಮುದುಕರಾದವರಿಗೂ ಗರ್ಭಿಣಿಯಾದವರಿಗೂ ಅದೇ ಯೋಗದ ಮುಕ್ಕಾಲಂಶ ಮದ್ದು ತಯಾರಿಸಿ ಕೊಡುವುದು ಹಿತ. ಹೀಗೆ ಸಂದರ್ಭಾನುಸಾರ ಔಷಧ ಪ್ರಮಾಣಗಳಲ್ಲಿ ಹೆಚ್ಚು ಕಡಿಮೆ ಮಾಡಿಕೊಳ್ಳಬಹುದು.

೨೯. ೧ ಯೋಗ ಕಷಾಯ : ೧ ಹಲ ಮದ್ದು (೪ ವಾ ೫ ತೊಲೆ) ೮ ಕುಡ್ತೆ ನೀರು ಹಾಕಿ ಕಷಾಯ ಬತ್ತಿಸಿ ೧ ಕುಡ್ತೆ ಉಳಿಸುವುದು. ಇದು ಅಷ್ಟಮಾಂಶ ಯಾ ಅಷ್ಟಾವಶೇಷ ಕಷಾಯ.

## ಮಾನಗಳು

### ತೂಕ

1 ಗುರುಗುಂಜಿ = 95 ಮಿ. ಗ್ರಾಂ.

1 ಗಜಿಗೆ = $3\frac{1}{2}$ ಗ್ರಾಂ.

1 ವರಹ = $3\frac{1}{2}$ ಗ್ರಾಂ.

1 ತೊಲೆ = 11 ಗ್ರಾಂ. 667 ಮಿ. ಗ್ರಾಂ. = 1 ಕರ್ಷಪ್ರಮಾಣ

1 ಹಲ = 52 ಗ್ರಾಂ. 1 ಬೊಗಸೆ = 2 ಹಲ

### ಅಳತೆ

1 ಕುಡ್ತೆ = 171 ಮಿ. ಲಿ. = 6 ಔನ್ಸ್

1 ಔನ್ಸ್ = 28.5 ಮಿ. ಲೀಟರ್

1 ಸೇರು = 1023 ಮಿ. ಲಿ. = 6 ಕುಡ್ತೆ

1 ಕುತ್ತಿ = 1364 ಮಿ. ಲಿ. = 8 ಕುಡ್ತೆ

1 ಹಾನೆ = 9 ಕುಡ್ತೆ

### ಕಾಲ

1 ಯಾಮ = 3 ಗಂಟೆ 1 ಮುಹೂರ್ತ = $1\frac{1}{2}$ ಗಂಟೆ

1 ಗಳಿಗೆ = 24 ಮಿನಿಟು

1 ಕ್ಷಣ ಎಂಬಲ್ಲಿ ಸಾಮಾನ್ಯ 5 ಮಿನಿಟು ತೆಕ್ಕೊಳ್ಳುವುದು.

# ಅಭಾವ ದ್ರವ್ಯ ಹಾಗೂ ಪ್ರತಿನಿಧಿ ದ್ರವ್ಯ

ಅಭಾವ ದ್ರವ್ಯಗಳೆಂದರೆ ಬೇಕಾದಾಗ ಸಿಗದೆ ಹೋಗುವ ವಸ್ತುಗಳು. ಪ್ರತಿನಿಧಿದ್ರವ್ಯಗಳೆಂದರೆ ಸಿಗದಿರುವ ದ್ರವ್ಯಗಳ ಬದಲು ಉಪಯೋಗಿಸಬಹುದಾದ ಸಮಾನ ಗುಣದ ವಸ್ತುಗಳು. ಇಲ್ಲಿ ಕೆಲವು ಅಭಾವ ಮತ್ತು ಪ್ರತಿನಿಧಿ ದ್ರವ್ಯಗಳನ್ನು ಶಾಸ್ತ್ರೀಯವಾಗಿ ತಿಳಿಸಲಾಗಿರುತ್ತದೆ.

| ಅಭಾವ ದ್ರವ್ಯ | ಪ್ರತಿನಿಧಿ ದ್ರವ್ಯ |
|---|---|
| ೧. ಮೇದಾ | ಅಶ್ವಗಂಧಿ |
| ೨. ಮಹಾ ಮೇದಾ | ಸುಗಂಧಿ ಬೇರು |
| ೩. ಕಾಕೋಳಿ | ಶತಾವರಿ ಗಡ್ಡೆ |
| ೪. ಕ್ಷೀರ ಕಾಕೋಳಿ | ದೊಡ್ಡ ಶತಾವರಿ ಗಡ್ಡೆ |
| ೫. ಋದ್ಧಿಗೆ | ಕಡೀರು ಬೇರು [ಬಲಾ] ಕಳ್ಳಂಗಡ್ಲೆ |
| ೬. ವೃದ್ಧಿಗೆ | ವಾರಾಹಿ ಕಂದ [ಹಂದಿ ಗೆಣಸು] |
| ೭. ಜೀವಕಕ್ಕೆ | ಅಮೃತ ಬಳ್ಳಿ |
| ೮. ಋಷಭಕಕ್ಕೆ | ನೆಲಕುಂಬಳ ಗಡ್ಡೆ |

(ಹೀಗೆ ಅಷ್ಟವರ್ಗಗಳಿಗೆ ಪ್ರತಿನಿಧಿ ವರ್ಗಗಳು ಪ್ರಸಿದ್ಧವಾಗಿರುತ್ತವೆ.)

| | |
|---|---|
| ೯. ಚವಿಕಾ | ಕಾಡು ಕಾಳುಮೆಣಸಿನ ಬೇರು ಯಾ ಕಾಟುಹಿಪ್ಲಿ ಬೇರು |
| ೧೦. ಗಜಹಿಪ್ಲಿ | ಚವಿಕಾ |

(ಚವಿಕಾ ಮತ್ತು ಗಜಹಿಪ್ಲಿ ಇವುಗಳು ಸಂದಿಗ್ಧ ದ್ರವ್ಯಗಳು.)

| | |
|---|---|
| ೧೧. ಭದ್ರಮುಷ್ಟಿ ಗಡ್ಡೆ | ಅತಿವಿಡಯ |
| ೧೨. ಅತಿವಿಡಯ | ಭದ್ರಮುಷ್ಟಿಗಡ್ಡೆ |
| ೧೩. ರಾಸ್ನೆಗೆ | ಸೀತಾದಂಡು ಯಾ ಬದನಿಗೆ ಗಡ್ಡೆ ಯಾ ಒಣ ಶುಂಠಿ |

ಸೂಚನೆ : ರಾಶ್ನೆ ಎಂದು ರೇಶ್ಮೆಗಡ್ಡೆಯನ್ನು ಕೆಲವರು ಕೊಡುತ್ತಾರೆ. ಇವೆರಡೂ ಬೇರೆ ಬೇರೆ ಜಾತಿ ಮೂಲಿಕೆಗಳು. ಗುಣದಲ್ಲಿ ವ್ಯತ್ಯಾಸವಿದೆ. ರಾಶ್ನೆಯಂತೆ ವಾತಹರ ಗುಣವು ರೇಶ್ಮೆಗಡ್ಡೆಯಲ್ಲಿ ಇಲ್ಲ. ಉಪಯೋಗಿಸುವವರು ಗಮನಿಸುವುದು ಆಗತ್ಯ.

| | | |
|---|---|---|
| ೧೪. | ಹಪುಷಾ (ಗದ್ದೆಕರಂಡೆ) | ಚವಿಕಾ |
| ೧೫. | ಕುಂಕುಮ ಕೇಸರ | ತಾವರೆ ಕುಸುಮ ಯಾ ಕುಸುಂಭ ಕುಸುಮ |
| ೧೬. | ದ್ರಾಕ್ಷೆಗೆ | ಕಾಶ್ಮರಿ (ಕುಂಬಳಮರ) ಹಣ್ಣು ವಾ ಖರ್ಜೂರ ವಾ, ಇಪ್ಪೆ ಹೂ |
| ೧೭. | ಜೇನು | ಹಳೆ ಬೆಲ್ಲ |
| ೧೮. | ಕೊತ್ತಂಬರಿ | ಸಬ್ಬಸಿಗೆ [ತತಾಪೆ] ವಾ ಜೀರಿಗೆ |
| ೧೯. | ಜೀರಿಗೆ | ಕೊತ್ತಂಬರಿ ವಾ ಕರಿಜೀರಿಗೆ |
| ೨೦. | ಶ್ರೀಗಂಧಕ್ಕೆ | ಪಚ್ಚಕರ್ಪೂರ |
| ೨೧. | ರಕ್ತಚಂದನಕ್ಕೆ | ನವೀನ ಲಾವಂಚದ ಬೇರು |
| ೨೨. | ಹಿಪ್ಲಿಗೆ | ಕಾಳುಮೆಣಸು |
| ೨೩. | ಕಾಳುಮೆಣಸು | ಹಿಪ್ಲಿ |
| ೨೪. | ಗಂಟುಭಾರಂಗಿ | ನೆಲಗುಳ್ಳ [ಕಂಟಕಾರಿ]ದ ಬೇರು |
| ೨೫. | ಮುಡಿವಾಳ | ತಾವರೆ ದಂಡು ವಾ ಶ್ರೀಗಂಧ ವಾ ಸುಗಂಧಿ ಬೇರು |
| ೨೬. | ಪುಷ್ಕರ ಮೂಲ | ಕಂಕುಷ್ಠ ವಾ ಚಿತ್ರಮೂಲ |
| ೨೭. | ಬಿಲ್ವಪತ್ರೆಬೇರಿಗೆ | ಕಪಿತ್ಥದ ಬೇರು |
| ೨೮. | ಜಾತಿ ಹೂವಿಗೆ | ಲವಂಗ |
| ೨೯. | ಎಕ್ಕೆ ಹಾಲಿಗೆ | ಎಕ್ಕೆಯದೇ ಸ್ವರಸ |
| ೩೦. | ಮರದರಸಿನಕ್ಕೆ | ಅರಸಿನಗಡ್ಡೆ |
| ೩೧. | ಜ್ಯೇಷ್ಠ ಮಧುವಿಗೆ | ಧಾತಕೀ ಕುಸುಮ |
| ೩೨. | ನಾಗಕೇಸರಕ್ಕೆ | ತಾವರೆ ಕುಸುಮ |
| ೩೩. | ತಗರಕ್ಕೆ | ಕಂಕುಷ್ಠ |

೩೪. ಭಲ್ಲಾತಕ [ಘಟ್ಟದಗೇರು]ಕ್ಕೆ ಚಿತ್ರಮೂಲ
೩೫. ಚಿತ್ರಮೂಲಕ್ಕೆ ದಂತಿ ವಾ ಉತ್ತರಣೆ ಕ್ಷಾರ
೩೬. ಕುರಟಿಗೆಗೆ ಭಜೆ

ಈ ರೀತಿ ಬೇರೆ ಬೇರೆ ಪ್ರತಿನಿಧಿ ದ್ರವ್ಯಗಳಿವೆ. ಸರಿಯಾದ ರಸವೀರ್ಯ ತಿಳಿದವನು ಸಮಾನ ಗುಣದವುಗಳನ್ನು ಅರಿತು ಅನ್ಯೋನ್ಯವಾಗಿ ಉಪಯೋಗಿಸಲು ಹೇಳಿದೆ. ಯೋಗದಲ್ಲಿ ಪ್ರಧಾನ ದ್ರವ್ಯಗಳಾಗಿ ಹೇಳಿರುವಲ್ಲಿ ಪ್ರತಿನಿಧಿ ದ್ರವ್ಯಗಳನ್ನೇ ಸೇರಿಸಿಕೊಳ್ಳಬಾರದು. ಅನಿವಾರ್ಯ ಸಂದರ್ಭದಲ್ಲಿ ಮಾತ್ರವೇ ಪ್ರತಿನಿಧಿ ದ್ರವ್ಯಗಳ ಉಪಯೋಗ ಹೇಳಲ್ಪಟ್ಟಿದೆ.

## ದ್ರವ್ಯ ಶುದ್ಧಿ

ಔಷಧ ದ್ರವ್ಯಗಳಲ್ಲಿ ಕೆಲವು ವಿಷ, ಉಪವಿಷಗಳಾಗಿಯೂ, ಕೆಲವು ಕಿಂಚಿತ್ ದೋಷವುಳ್ಳವುಗಳಾಗಿಯೂ ಇರುತ್ತವೆ. ಇವುಗಳನ್ನು ಶುದ್ಧಿ ಮಾಡದೆ ಯೋಗಗಳಲ್ಲಿ ಸೇರಿಸಬಾರದೆಂದು ನಿಯಮವಿದೆ. ಹಾಗೆ ಶುದ್ಧಿ ಮಾಡುವ ಕ್ರಮ, ನಿಯಮ ವಿವರ ಇಲ್ಲಿ ಹೇಳಿದೆ.

**ಉಪವಿಷಗಳು :**

೧. ಚಿತ್ರಮೂಲದ ಬೇರು : ಬೇರನ್ನು ನೀಟವಾಗಿ ಸೀಳಿ, ಮಧ್ಯದ ನರವನ್ನು ತೆಗೆದು ಹಾಕಿ ಬೇರನ್ನು ಅಡ್ಡವಾಗಿ $\frac{1}{2}$ ಅಂಗುಲಕ್ಕೆ ಕತ್ತರಿಸಿ, ಸುಣ್ಣ ಕದಡಿದ ನೀರಿನಲ್ಲಿ ಹಾಕಿ ಒಂದು ದಿನ ಅಹೋರಾತ್ರಿ ಇರಿಸಿ ತೆಗೆದು ಶುದ್ಧ ನೀರಿನಲ್ಲಿ ತೊಳೆದುಕೊಂಡರೆ ಶುದ್ಧಿಯಾಗುವುದು.

೨. ರಾವು ಬೀಜದ ಕೆತ್ತೆ : ಕೆತ್ತೆ (ತೊಗಟೆ) ಯನ್ನು ಬೂದಿ ಬೆಂಕಿಯಲ್ಲಿ ಹುಗಿದು ಚೆನ್ನಾಗಿ ಕಾಯಿಸಿ ತೆಗೆದರೆ ಶುದ್ಧಿ.

೩. ಚಿತ್ರೀಂದಿನ ಗಡ್ಡೆ : ಗಡ್ಡೆಯನ್ನು ಬೂದಿ ಬೆಂಕಿಯಲ್ಲಿ ಹುಗಿದು ಪಸೆ ಆರಿಸಿ (ಕಾಯಿಸಿ) ತೆಗೆದರೆ ಶುದ್ಧಿ.

೪. ಭಲ್ಲಾತಕ (ಗಟ್ಟದ ಗೇರು) : ಗಟ್ಟದ ಗೇರು (ಕೇರುಕಾಯಿ) ಬೀಜವನ್ನು ಜಜ್ಜಿ ರಾತ್ರಿ ಇಡೀ ಗೋಮೂತ್ರದಲ್ಲಿ ನೆನೆಹಾಕಿ ಇರಿಸಿ ಬೆಳಿಗ್ಗೆ ತೆಗೆದು ಬಿಸಿಲಿನಲ್ಲಿ ಹಾಕಿ, ಇಡೀ ದಿನ ಒಣಗಿಸುವುದು. ಹೀಗೆ

ಮೂರು ದಿನ ಗೋಮೂತ್ರದಲ್ಲಿ, ಅನಂತರ ಶಾಂತಿ ಮರದ ಕೆತ್ತೆ ಕಷಾಯದಲ್ಲಿ ಮೂರು ದಿನ ಬೇಯಿಸಿ ಒಣಗಿಸುವುದು. ಪುನಃ ಎಮ್ಮೆ ಸೆಗಣಿನೀರಲ್ಲಿ ಬೇಯಿಸಿ ಒಣಗಿಸುವುದು (3 ದಿನ). ಹೀಗೆ ಮೂರು ಸರ್ತಿ ಮೂರು, ಮೂರು ದಿನ ಬೇಯಿಸಿ, ಒಣಗಿಸಿ ತೆಗೆದು, ಅನಂತರ ಧಾನ್ಯಾಮ್ಲದಲ್ಲಿ ನೆನೆಹಾಕಿ ತೆಗೆದು ಒಣಗಿಸುವುದು. ಶುದ್ಧಿ. [ಕೆಲವರು ಬೀಜಕ್ಕೆ ತೂತು ಮಾಡಿ ಉಮಿ ಬೆಂಕಿಯಲ್ಲಿ ಬೇಯಿಸಿಯೂ, ಕೆಲವರು ಹುರಿದೂ ಶುದ್ಧಿ ಮಾಡುವ ವಾಡಿಕೆಯೂ ಇದೆ. ಆದರೆ ಇದರಿಂದ ಗುಣ ಕಡಿಮೆ ಬರುತ್ತದೆ.]

**ಕಿಂಚಿತ್ ದೋಷವುಳ್ಳವುಗಳು :**

೫. ಹಿಂಗು : ಕಬ್ಬಿಣದ ಪಾತ್ರೆಯನ್ನು ಕಾಯಿಸಿ ಹಿಂಗನ್ನು ತುಪ್ಪದಲ್ಲಿ ಮುಳುಗಿಸಿ ಕಾದ ಪಾತ್ರೆಗೆ ಹಾಕಿ ಹುರಿದು ಅರಳಾದಾಗ (ಜೇನಿನ ಬಣ್ಣವಾದಾಗ) ತೆಗೆದರೆ ಶುದ್ಧಿ.

೬. ಜೀರಿಗೆ, ಕರಿಜೀರಿಗೆ : ಧಾನ್ಯಾಮ್ಲದಲ್ಲಿ ಹಾಕಿ ಒಂದು ಯಾಮ (7 ಘಳಿಗೆ) ಬಿಸಿಲಿನಲ್ಲಿ ಇರಿಸಿ ತೆಗೆದು ಹುರಿದುಕೊಂಡರೆ ಶುದ್ಧಿ.

೭. ಕಾಳುಮೆಣಸು : ಒಳ್ಳೆಮೆಣಸಿನ ಕಾಳುಗಳನ್ನು ಆಕಳ ಹುಳಿ ಮಜ್ಜಿಗೆಯಲ್ಲಿ ನೆನೆಹಾಕಿ ಅರ್ಧಯಾಮ ($3\frac{1}{2}$ ಘಳಿಗೆ) ಇರಿಸಿ ತೆಗೆದು ಒಣಗಿಸಿದರೆ ಶುದ್ಧಿ.

೮. ಹಿಪ್ಲಿ : ಸುಣ್ಣದ ಮೇಲಿನ ತಿಳಿನೀರಿನಲ್ಲಿ ಅರ್ಧಯಾಮ ನೆನೆ ಹಾಕಿ ತೆಗೆದು ಧಾನ್ಯಾಮ್ಲದಲ್ಲಿ ಮತ್ತು ನಿಂಬೆಹುಳಿ ರಸದಲ್ಲಿ ತೊಳೆದು ತೆಗೆದರೆ ಶುದ್ಧಿ.

೯. ಶುಂಠಿ : ಗಡ್ಡೆಯನ್ನು ಸುಣ್ಣದ ತಿಳಿನೀರಿನಲ್ಲಿ ನೆನೆಹಾಕಿ ಅರ್ಧಯಾಮ ಬಿಸಿಲಿನಲ್ಲಿ ಇರಿಸಿ ತೆಗೆದು ಧಾನ್ಯಾಮ್ಲದಲ್ಲಿ ತೊಳೆದು ಕಠಿಣ ಬಿಸಿಲಿನಲ್ಲಿ ಒಣಗಿಸಿಕೊಂಡರೆ ಶುದ್ಧಿ.

೧೦. ತ್ರಿಕಟು : (ಶುಂಠಿ, ಮೆಣಸು, ಹಿಪ್ಲಿ)

ಶುಂಠಿಯನ್ನು ಸಿಪ್ಪೆ ತೆಗೆದು ಹೊಸಕಲ್ಲು ಸುಣ್ಣ ಮೆತ್ತಿ (ಲೇಪಿಸಿ) ಬಿಸಿಲಿನಲ್ಲಿ ಚೆನ್ನಾಗಿ ಒಣಗಿಸಿದರೆ ಶುದ್ಧಿ.

ಒಳ್ಳೆ ಮೆಣಸು ಮೂರೂ ಮುಕ್ಕಾಲು ಘಳಿಗೆ ದನದ ಹುಳಿ ಮಜ್ಜಿಗೆಯಲ್ಲಿ ನೆನೆಹಾಕಿ ತೆಗೆದು ಓಡಿನಲ್ಲಿ ಹುರಿದು ತೆಗೆದರೆ ಶುದ್ಧಿ.

ಹಿಪ್ಪಲಿಯನ್ನು ಚಿತ್ರಮೂಲದ ಕಷಾಯದಲ್ಲಿ ಎರಡು ಘಳಿಗೆ ನೆನೆ ಹಾಕಿ ಒಂದು ಯಾಮ ಬಿಸಿಲಿನಲ್ಲಿ ಒಣಗಿಸಿದರೆ ಶುದ್ಧಿ.

೧೧. ಹಸಿಶುಂಠಿ ರಸ : ರಸವನ್ನು ಒಂದು ಪಾತ್ರೆಯಲ್ಲಿ ಹಾಕಿ ಗಾಳಿಯಿಲ್ಲದ ಸ್ಥಳದಲ್ಲಿ ಎರಡು ಘಳಿಗೆ ಇರಿಸಿ ಮೇಲಿನ ತಿಳಿ ರಸವನ್ನು ಮಾತ್ರ ಸೋಸಿ (ಅಡಿ ನಿಂತಿರುವ ಹಿಟ್ಟು ಉಪಯೋಗಿಸಬಾರದು) ಕೆಂಪಗೆ ಕಾಯಿಸಿದ ಕಬ್ಬಿಣದ ಪಾತ್ರೆಯಲ್ಲಿ ಹೊಯ್ದು ತಣಿಸಿದರೆ ಶುದ್ಧಿ.

೧೨. ಓಮ : ಓಮವನ್ನು ಆಡಿನ ಹಾಲಿನಲ್ಲಿ ಒಂದು ಯಾಮ ನೆನೆ ಹಾಕಿ ತೆಗೆದು ಪಸಿನೀರಿನಲ್ಲಿ ತೊಳೆದು ಒಣಗಿಸಿದರೆ ಶುದ್ಧಿ.

೧೩. ಹರಳ ಬೀಜ : (ಔಡಲ)ಬೀಜದ ಸಿಪ್ಪೆ ಸುಲಿದು ಒಳಗಿನ ಪಪ್ಪನ್ನು ಒಂದು ಜಾಮ ಸೀಯಾಳದ ನೀರಿನಲ್ಲಿ ಬೇಯಿಸಿದರೆ ಶುದ್ಧಿ.

೧೪. ಜಾದ್ರಿಕ್ಕಾ: ಜಾಯಿ ಕಾಯಿ ಬೊಂಡನ್ನು ಮೊಲೆ ಹಾಲಿ ನಲ್ಲಿ ನೆನೆಹಾಕಿ ಒಂದು ಯಾಮ ಬಿಸಿಲಿನಲ್ಲಿರಿಸಿ ತೆಗೆದು ಒಣಗಿಸಿದರೆ ಶುದ್ಧಿ.

೧೫. ಕಹಿ ಪಟಗಿಲಕಾಯಿ : ನೇರಳೆ ಸೊಪ್ಪಿನ ರಸ, ನಿಂಬೆಹುಳಿ ರಸ ಒಟ್ಟಿಗೆ ಹಾಕಿ ಬೇಯಿಸಿ ತೆಗೆದರೆ ಕಹಿ ಹೋಗಿ ಶುದ್ಧವಾಗುವುದು.

೧೬. ನಿಂಬೆಹುಳಿ ರಸ : ಮಣ್ಣಿನ ಪಾತ್ರೆಯಲ್ಲಿ ತ್ರಿಕಟು ಹಾಕಿ ಚೆನ್ನಾಗಿ ಹುರಿದು ಕರಕಾದಾಗ ತೆಗೆದು ಹಾಕಿ ಈ ಕಾದ ಪಾತ್ರೆಯಲ್ಲಿ ನಿಂಬೆರಸವನ್ನು ಹೊಯ್ದು ತಣಿಸಿದರೆ ಶುದ್ಧಿ.

೧೭. ಫಲಮೂಲ ಶುದ್ಧಿ : ಬೇಕಾದ ಎಲ್ಲಾ ಫಲ, ಮೂಲ, ತೊಗಟೆ, ಬೇರುಗಳನ್ನು ನೇರಳೆಸಪ್ಪಿನ ರಸದಲ್ಲಿ ಬೇಯಿಸಿದರೆ ಶುದ್ಧಿ ಯಾಗುವುದು.

# ಪಥ್ಯ ವಿಧಾನ

**ಸಾದಾ ಪಥ್ಯ :**

1. ಔಷಧ ಸೇವಿಸುವ ಸಮಯದಲ್ಲಿ ವ್ಯಾಯಾಮ, ತುಂಬ ಕೆಲಸ ಮಾಡುವುದು, ರಾತ್ರಿ ನಿದ್ದೆ ಕೆಡುವುದು, ಹಗಲು ನಿದ್ದೆ ಮಾಡುವುದು, ಪ್ರಯಾಣ ಮಾಡುವುದು, ತುಂಬಾ ಮಾತನಾಡುವುದು, ಗಟ್ಟಿಯಾಗಿ ನಗಾಡುವುದು, ಬೊಬ್ಬೆ ಹಾಕುವುದು ಇತ್ಯಾದಿ ಶರೀರಕ್ಕೆ ಒತ್ತಡ ಕೊಡುವಂತಹ ಯಾವ ಕೆಲಸವನ್ನೂ ಮಾಡಬಾರದು.

2. ಸಂಪೂರ್ಣ ಬ್ರಹ್ಮಚರ್ಯವನ್ನು ಪಾಲಿಸಬೇಕು.

3. ಕಾಫಿ, ಚಾ ಇತ್ಯಾದಿ ಪಾನೀಯಗಳನ್ನು ಕುಡಿಯುವುದು, ಹೊಗೆಬತ್ತಿ ಸೇವನೆ ಇವುಗಳನ್ನು ಬಿಡಬೇಕು.

4. ನಂಜು ಪದಾರ್ಥಗಳಾದ ಬದನೆ, ಕೆಂಬುಡೆ, ಆಳತೊಂಡೆ, ದಿವಿ ಗುಜ್ಜೆ, ಕಡಲೆ ಇತ್ಯಾದಿಗಳನ್ನು ಸೇವಿಸಬಾರದು. ಎಣ್ಣೆಯಲ್ಲಿ ಕರಿದ ಪದಾರ್ಥ, ಹುಡಿ ಅವಲಕ್ಕಿ, ಎಣ್ಣೆಪಸೆ ಯಾವ ವಿಧದಲ್ಲೂ ಸೇವಿಸಬಾರದು. ಉಪ್ಪು, ಹುಳಿ, ಮೆಣಸು ಮತ್ತು ಸಂಬಾರಗಳನ್ನು ಆದಷ್ಟು ಕಡಿಮೆ ಉಪಯೋಗಿಸಬೇಕು.

5. ಎಮ್ಮೆಯ ಹಾಲು ಉಪಯೋಗಿಸಕೂಡದು. ಎಮ್ಮೆ ತುಪ್ಪ ಸೇವಿಸಬಹುದು.

**ಕಡು ಪಥ್ಯ :**

1. ಔಷಧ ಸೇವನೆಯ ಮೊದಲನೆಯ ದಿನ ಜುಲಾಬು ತೆಗೆದುಕೊಳ್ಳುವುದು.

2. ಔಷಧ ಸೇವನಾಸಮಯದಲ್ಲಿ ಹಗಲು ನಿದ್ದೆ, ರಾತ್ರಿ ಜಾಗರಣೆ, ಸ್ನಾನ, ಹೆಚ್ಚು ಮಾತನಾಡುವುದು, ನಗುವುದು, ಅಳುವುದು, ಓದುವುದು, ಬರೆಯುವುದು, ದಾರಿ ನಡೆಯುವುದು, ಕೆಲಸ ಮಾಡುವುದು, ಗಾಳಿ, ಮಳೆ, ಬಿಸಿಲುಗಳಲ್ಲಿ ತಿರುಗಾಡುವುದು, ಬೆಂಕಿ ಕಾಯಿಸುವುದು,

ಕಾಫಿ, ಚಾ ಮೊದಲಾದ ಪಾನೀಯಗಳನ್ನು ಕುಡಿಯುವುದು, ವಾಹನ ಏರುವುದು, ವೀಳ್ಯ, ನಸ್ಯ ಸೇವಿಸುವುದು, ಬೀಡಿ ಸಿಗರೇಟು ಸೇದುವಿಕೆ, ಇವುಗಳನ್ನು ಸಂಪೂರ್ಣ ಬಿಡತಕ್ಕದ್ದು.

3. ಊಟಕ್ಕೆ ಪಸೆ ಆರಿಸಿದ ಅನ್ನ, ಗೋಧಿಯ ರೊಟ್ಟಿ, ಚೆನ್ನಾಗಿ ಕಾಯಿಸಿದ ಹಾಲು, ಸಕ್ಕರೆ, ತುಪ್ಪ, ಸೈಂದುಪ್ಪು, ಕಾಳುಮೆಣಸು ಇವುಗಳನ್ನು ಮಾತ್ರ ಉಪಯೋಗಿಸುವುದು. ಸಂಭಾರ ಜೀನಸು ವಗೈರೆ ಬೇರೆ ಯಾವುದನ್ನೂ ಉಪಯೋಗಿಸಲೇ ಕೂಡದು.

4. ಔಷಧ ಸೇವನಾ ಸಮಯ ಸಂಪೂರ್ಣ ಬ್ರಹ್ಮಚರ್ಯದಿಂದಿರತಕ್ಕದ್ದು.

5. ನೆಲದ ಮೇಲೆ ಮಲಗ ಕೂಡದು.

6. ನೆಲ ಶೀತವಾಗಿದ್ದಲ್ಲಿ ಪಾದರಕ್ಷೆಗಳನ್ನು ಅಗತ್ಯ ಉಪಯೋಗಿಸಬೇಕು.

7. ಕೈ ಕಾಲು ಮುಖ ತೊಳೆಯಲು, ಶೌಚಕ್ಕೆ, ನಾಲ್ಕು ಮರದಕೆತ್ತೆ (ಅತ್ತಿ, ಇತ್ತಿ, ಗೋಳಿ, ಅಶ್ವತ್ಥ)ಯ ಕಷಾಯ ಉಪಯೋಗಿಸುವುದು.

8. ಕಡುಪಥ್ಯ ಮುಗಿದ ಮಾರಣೆ ದಿನ ಸರ್ವಾಂಗ ತುಪ್ಪ ಹಾಕಿ ಸ್ನಾನ; ಅದರ ಮಾರಣೆ ದಿನ ಜುಲಾಬು ತೆಗೆದುಕೊಳ್ಳುವುದು.

9. ಈ ನಿಯಮಗಳಿಗೆ ವಿರೋಧವಾಗಿ ವರ್ತಿಸಿದರೆ ಜ್ವರ, ಶೂಲೆ ಇತ್ಯಾದಿಗಳು ಆರಂಭವಾಗುವುವು. ಈ ಸಂದರ್ಭದಲ್ಲಿ ಔಷಧ ಸೇವನೆ ನಿಲ್ಲಿಸಿ ವೈದ್ಯರೊಡನೆ ವಿಚಾರಿಸಿ ಮುಂದುವರಿಯತಕ್ಕದ್ದು.

ವಿ. ಸೂ. ೧. ಒಮ್ಮೆ ಬಸಿದ ಅನ್ನವನ್ನು ಒಲೆಯ ಮೇಲಿಟ್ಟು ಪಸೆ ಆರಿಸುವುದು.

೨. ದನದ ಹಾಲಿಗೆ ೨ ಪಾಲು (ಆಡಿನ ಹಾಲಾದರೆ ೪ ಪಾಲು) ನೀರು ಸೇರಿಸಿ ಕೆನೆ ಕಟ್ಟದಂತೆ ಕಾಯಿಸಿ ಹಾಲಿನಷ್ಟೇ ಉಳಿಯುವಂತೆ ಬತ್ತಿಸಬೇಕು.

೩. ಪಂಡಿತರ ಅನುಮತಿಯ ಮೇರೆಗೆ ಕಡು ಪಥ್ಯದ ಔಷಧವನ್ನು ಪ್ರಾರಂಭಿಸಬೇಕು.

# 'ಆರೋಗ್ಯದಾನ'ದ ಬಗ್ಗೆ ಆಯುರ್ವೇದ ಮಂಡಳಿಯ ಅಭಿಪ್ರಾಯ

ವೃತ್ತಾಂತ ಪತ್ರಿಕೆಗಳ ಮೂಲಕ ಆರೋಗ್ಯದಾನವನ್ನು ಜನತೆಗೆ ನೀಡಿದವರಲ್ಲಿ ನಮ್ಮ ಜಿಲ್ಲೆಯಲ್ಲಿ ಹೆಸರಾಂತ ವನಸ್ಪತಿ ಪ್ರಯೋಗಜ್ಞರಾದ ಪಾಣಾಜೆ ವೈದ್ಯ ಶಂಕರನಾರಾಯಣ ಭಟ್ಟರು ನಮ್ಮ ಪ್ರಾಂತ್ಯದಲ್ಲೇ ಮೊದಲಿಗರು. ಇವರು ಸುಮಾರು 10-12 ವರ್ಷಗಳಿಂದ 'ರಾಷ್ಟ್ರಬಂಧು' 'ವಿಚಾರವಾಣಿ' ಮೊದಲಾದ ವಾರಪತ್ರಿಕೆಗಳ ಮೂಲಕ ಮೂಲಿಕಾ ಪ್ರಯೋಗಗಳ ಮಹತ್ವದ ಉಪದೇಶವನ್ನು ನೀಡಿ ಸಾವಿರಾರು ಆರ್ತ ಜನರಿಗೆ ಆರೋಗ್ಯದಾನವನ್ನು ಮಾಡುತ್ತಾ ನಮ್ಮ ಜಿಲ್ಲೆಯಲ್ಲಿ ಅಪೂರ್ವ ದಾಖಲೆಯನ್ನು ಸ್ಥಾಪಿಸಿದ್ದಾರೆ. ಇವತ್ತಿಗೂ ಈ ರೀತಿಯ ಚಿಕಿತ್ಸಾ ದಾನವು ಪ್ರತಿವಾರ ನಡೆಯುತ್ತಿರುವ ವಿಚಾರ ರಾಷ್ಟ್ರಬಂಧು, ವಿಚಾರವಾಣಿ ಮೊದಲಾದ ವಾರಪತ್ರಿಕೆಗಳ ಓದುಗರಿಗೆ ಚೆನ್ನಾಗಿ ಗೊತ್ತು. ಅಂತೂ ಚರಕ ಮಹರ್ಷಿಯು ನಿರ್ದೇಶಿಸಿದ "ನಹಿ ಜೀವಿತ ದಾನಾದ್ಧಿ ದಾನ ಮನ್ಯತ್ ವಿಶಿಷ್ಯತೆ" ರೋಗಪೀಡಿತ ಜನರಿಗೆ ನೀಡುವ ಚಿಕಿತ್ಸಾರೂಪದ ಜೀವಿತ ದಾನಕ್ಕಿಂತ ಬೇರೊಂದು ವಿಶೇಷದಾನವು ಇಲ್ಲವೆಂಬುದನ್ನು ಇವರು ಪ್ರತ್ಯಕ್ಷೀಕರಿಸುತ್ತಿರುವರು. ಈ ನೂತನ ವಿಧಾನದ ಪ್ರಯೋಗವು ಸಫಲವಾಗುತ್ತಿರುವುದೆಂಬುದಕ್ಕೆ ಇವರಿಗೆ ದೈನಂದಿನ ಬರುತ್ತಿರುವ ನೂರಾರು ಪತ್ರಗಳೇ ಸಾಕ್ಷಿ.

[ಇಪ್ಪತ್ತನಾಲ್ಕನೆಯ ಕರ್ನಾಟಕ ಪ್ರಾದೇಶಿಕ ಆಯುರ್ವೇದ ಸಮ್ಮೇಳನದ ಅಭಿನಂದನ ಗ್ರಂಥದಲ್ಲಿ ಶ್ರೀ ಡಾ। ಐ. ಕೆ. ಪಿ. ಶರ್ಮಾ]

ಅಭಿಪ್ರಾಯಗಳು :

# ಪಾಣಾಜೆ ಪಂಡಿತರ ಆರೋಗ್ಯ ಸಾಧನ

## I

"ಶರೀರಮಾದ್ಯಂ ಖಲು ಧರ್ಮಸಾಧನಂ" ಎಂಬ ಆರ್ಯೋಕ್ತಿ ಅರಿತ ಪಾಣಾಜೆ ವೈದ್ಯ ಶಂಕರನಾರಾಯಣ ಭಟ್ಟರು ಆರೋಗ್ಯಭಾಗ್ಯಕ್ಕೆ ಆಗತ್ಯವಾದ ಆಯುರ್ವೇದ ಶಾಸ್ತ್ರೋಕ್ತ ಹಲವು ವನಸ್ಪತಿ, ಅವುಗಳ ಪರಿಚಯ, ರಹಸ್ಯಗಳನ್ನು ೬೦ ವರ್ಷದ ಸತತ ಪ್ರಯತ್ನದಿಂದ ಸಂಗ್ರಹಿಸಿದರು. ಅದು ಕನ್ನಡ ಓದುಗರಿಗೆ, ಜನರಿಗೆ ಉಪಯೋಗ ವಾಗಲಿ ಎಂಬ ದೃಷ್ಟಿಯಿಂದ "ಆರೋಗ್ಯದಾನ ಗ್ರಂಥಮಾಲೆ"ಯಲ್ಲಿ ಅವರ ಪುತ್ರರಾದ ಪ. ಶಂಕರನಾರಾಯಣ ಭಟ್ಟರು ಸಂಗ್ರಹಿಸಿ, ಪ್ರಕಟಿಸುವ ಮಹತ್ಕಾರ್ಯ ಮಾಡುತ್ತಿದ್ದಾರೆ. ಈ ಗ್ರಂಥಮಾಲೆಯ ಮೊದಲ ಕುಸುಮವಾದ ಈ ಕಿರುಹೊತ್ತಿಗೆಯಲ್ಲಿ ಕಷಾಯಾದಿ ಔಷಧಿ ತಯಾರಿಕೆ ಕ್ರಮ, ಕೆಲವು ಕಷಾಯಗಳ ಗಣಸಂಗ್ರಹ, ಪ್ರತ್ಯೌಷಧ, ವಿಧಿ, ಅಭಾವ ಹಾಗೂ ಪ್ರತಿನಿಧಿದ್ರವ್ಯ, ದ್ರವ್ಯಶುದ್ಧಿ, ಪಥ್ಯವಿಧಾನ, ರೋಗಚಿಕಿತ್ಸೆ, ಮೂಲಿಕೆ ಪರಿಚಯಗಳ ಜೊತೆಗೆ ಉಪಯುಕ್ತ ಸಲಹೆ ಗಳನ್ನೂ ಇತ್ತಿದ್ದಾರೆ. ಪ್ರತಿ ಮನೆಯಲ್ಲೂ ಗೃಹವೈದ್ಯನ ಕೆಲಸ ನಿರ್ವಹಿಸುವಂತಹ ಈ ಗ್ರಂಥ ಸಂಗ್ರಹಿಸಿ ಪ್ರಕಟಿಸಿರುವ ಶ್ರೀ ಶಂಕರನಾರಾಯಣ ಭಟ್ಟರು ಹಾಗೂ ಆಯುರ್ವೇದ ಪ್ರಕಾಶನ ಸಂಸ್ಥೆಯ ಕಾರ್ಯ ಸ್ತುತ್ಯರ್ಹ.

— ಜನಪ್ರಗತಿ

ವಾರಪತ್ರಿಕೆ - ಬೆಂಗಳೂರು

